# ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು

ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ

ಸಂಶೋಧಕರು :

ಔದ್ರಾಮ

ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ, ಜಿಲ್ಲೆ : ಬೆಳಗಾವಿ

ಮಾರ್ಗದರ್ಶಕರು :

ಡಾ. ಎಸ್.ಓ.ಹಲಸಗಿ

ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ, ಜಿಲ್ಲೆ : ಬೆಳಗಾವಿ

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ, ಜಿಲ್ಲೆ: ಬೆಳಗಾವಿ

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೨

# ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು

ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ
ಸಂಶೋಧನಾ ಮಹಾಪ್ರಬಂಧ

ಸಂಶೋಧಕರು :
ಔದ್ರಾಮ
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ಜಿಲ್ಲೆ : ಬೆಳಗಾವಿ

ಮಾರ್ಗದರ್ಶಕರು :
ಡಾ. ಎಸ್.ಓ.ಹಲಸಗಿ
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ಜಿಲ್ಲೆ : ಬೆಳಗಾವಿ

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ಜಿಲ್ಲೆ: ಬೆಳಗಾವಿ

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೨

# ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಔದ್ರಾಮ**
**ತಹಶೀಲ್ದಾರ, ಗೋಕಾಕ**
**ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ**
**ಹಾರೂಗೇರಿ, ಜಿಲ್ಲೆ : ಬೆಳಗಾವಿ**

## ಅಭ್ಯರ್ಥಿಯ ಪ್ರಮಾಣ ಪತ್ರ

**ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಎಸ್. ಓ. ಹಲಸಗಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಅಭಿವೃದ್ಧಿ ಅಧ್ಯಯನದ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದೇನೆ. ಈ ಪ್ರಬಂಧವನ್ನು ನಾನು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಔದ್ರಾಮ)

ಸ್ಥಳ: ಹಾರೂಗೇರಿ
ದಿನಾಂಕ: 23-03-2012.

# ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ಎಸ್.ಓ.ಹಲಸಗಿ
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ಜಿಲ್ಲೆ : ಬೆಳಗಾವಿ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಔದ್ರಾಮ** ಇವರು **ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವರು. ಪ್ರಸ್ತುತ ಮಹಾಪ್ರಬಂಧ ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದೂ, ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ದೃಢೀಕರಿಸುತ್ತೇನೆ.

(ಡಾ. ಎಸ್.ಓ.ಹಲಸಗಿ)

ಸ್ಥಳ: ಹಾರೂಗೇರಿ
ದಿನಾಂಕ: 21. 3. 2012

# ನಿವೇದನೆ

**'ವಿದ್ಯಾಭ್ಯಾಸ ನಿಂತ ನೀರಾಗಬಾರದು'**. ಹರಿಯುವ ನದಿಗಿರುವ ಹರಿತತೆ ಬಂಡೆಗಲ್ಲಿಗೆ ಇರುವದಿಲ್ಲ. ವಿದ್ಯೆ ಮತ್ತು ಅಭ್ಯಾಸದ ನಿರಂತರತೆಯನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ಸಂಶೋಧನೆಯ ಕಡೆಗೆ ನನಗೆ ಮೊದಲಿನಿಂದಲೂ ಒಲವಿತ್ತು. ಅಧ್ಯಾಪನ ವೃತ್ತಿ, ಪೊಲೀಸ ವೃತ್ತಿ, ನಂತರದಲ್ಲಿ ಆಡಳಿತ ನಿರ್ವಹಣೆ ಕೆಲಸ ಇವೆಲ್ಲದರ ನಡುವೆ ಸಂಶೋಧನೆಯ ಅಭಿಲಾಷೆಯನ್ನು ಡಾ: ವಿ.ಎಸ್.ಮಾಳಿ ಅವರಲ್ಲಿ ನಿವೇದಿಸಿದಾಗ ಅದಕ್ಕೆ ನೀರೆರೆದು ಪೋಷಿಸಿ ಹೆಮ್ಮರವಾಗುವಂತೆ ಮಾಡಿದ್ದಾರೆ. ಅವರಿಗೆ ನಾನು ಚಿರಋಣಿ.

ಸಂಶೋಧನೆಯ ಅವಧಿಯಲ್ಲಿ ಮಾರ್ಗದರ್ಶಕರಾದಂತಹ ಡಾ: ಎಸ್.ಓ.ಹಲಸಗಿಯವರು ವಿಷಯದ ಸಂಪೂರ್ಣ ವಿವರಗಳನ್ನು ನೀಡಿ ನನ್ನ ಸಂಶೋಧನಾ ಪ್ರಬಂಧದ ಪ್ರತಿ ಘಟ್ಟಗಳಲ್ಲಿಯೂ ಮಾರ್ಗದರ್ಶನ ಮಾಡಿ ಪ್ರಬಂಧವನ್ನು ನಿಗದಿತ ಅವಧಿಯೊಳಗೆ ಸಿದ್ಧಪಡಿಸಲು ನೀಡಿದ ಸಹಕಾರ ಮರೆಯಲು ಅಸಾಧ್ಯ.

ನನ್ನ ಸಂಶೋಧನಾ ಅವಧಿಯಲ್ಲಿ ಸಹಕಾರ ನೀಡಿದಂತಹ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಎಲ್ಲಾ ಆಡಳಿತ ವರ್ಗಕ್ಕೂ ನಾನು ಋಣಿಯಾಗಿದ್ದೇನೆ. ಅಧ್ಯಯನದ ಅಂತಿಮ ಫಲಿತಗಳನ್ನು ಕಂಡುಕೊಳ್ಳಲು ನೆರವಾದ ಬೆಳಗಾವಿ ಜಿಲ್ಲೆಯ ಮಾಹಿತಿದಾರರೆಲ್ಲರಿಗೂ ನಾನು ಆಭಾರಿ.

ಈ ಸಂಶೋಧನಾ ಮಹಾಪ್ರಬಂಧ ಸಿದ್ಧಪಡಿಸುವಲ್ಲಿ ಅಗತ್ಯ ಸಹಕಾರವನ್ನು ನೀಡಿದ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ ಎಲ್ಲ ಗೌರವಾನ್ವಿತ ನಿರ್ದೇಶಕ ಮಂಡಳಿಗೆ, ಡಾ. ಸಿ. ಆರ್. ಗುಡಸಿಯವರಿಗೆ ಹಾಗೂ ಸಿಬ್ಬಂದಿಗಳಾದಂತಹ ಶ್ರೀ ಶಂಕರ ಘಟನಟ್ಟಿ ಅವರಿಗೆ ನಾನು ಆಭಾರಿ. ಅಧ್ಯಯನದಲ್ಲಿ ಸಲಹೆ ನೀಡಿದ ಡಾ. ಆರ್. ಎ. ಶಾಸ್ತ್ರಿಮಠ ಅವರಿಗೂ ಕೂಡ ನಾನು ಆಭಾರಿ ಆಗಿದ್ದೇನೆ.

ನನ್ನ ಎಲ್ಲಾ ಪ್ರಯತ್ನಗಳಿಗೂ ಆಶೀರ್ವದಿಸಿ ನೆನಪಾಗಿರುವಂತಹ ನನ್ನ ತಂದೆಯವರಾದ ದಿವಂಗತ ಹಮ್ಮಬ್ಬಾ ಬ್ಯಾರಿ, ನನ್ನ ಸ್ಫೂರ್ತಿಗೆ ಕಾರಣರಾದ ತಾಯಿ ಶ್ರೀಮತಿ ಖತೀಜಮ್ಮ ಹಾಗೂ ನನ್ನ ಸಹೋದರರೆಲ್ಲರಿಗೂ ನಾನು ಆಭಾರಿ.

ಈ ಸಂಶೋಧನಾ ಪ್ರಬಂಧ ಸಿದ್ಧಪಡಿಸುವಲ್ಲಿ ಅಗತ್ಯ ಸಹಕಾರವನ್ನು ನೀಡಿದ ನನ್ನ ಸಂಗಾತಿ ಹಲಿಮತ್ ಸಆದಿಯಾ, ಹಾಗೂ ನನ್ನ ಮಕ್ಕಳಾದ ಮಹಮದ್ ಅಜೀಮ್, ಮಹಮದ್ ಫಹೀಮ್ ಪುಟಾಣಿಗಳನ್ನು ನೆನಪಿಸಿಕೊಳ್ಳುವುದೇ ಸಂಭ್ರಮ.

ಈ ಸಂಶೋಧನಾ ಪ್ರಬಂಧದ ಅಕ್ಷರ ವಿನ್ಯಾಸವನ್ನು ಮಾಡಿದ ಶ್ರೀ ಪ್ರವೀಣ ಕಾತರಕಿ, ಗೋಕಾಕ ಇವರಿಗೂ ಕೃತಜ್ಞತೆಗಳು.

ಸ್ಥಳ: ಹಾರೂಗೇರಿ
ದಿನಾಂಕ:

**ಔದ್ರಾಮ**
**ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ**
**ಹಾರೂಗೇರಿ, ಜಿಲ್ಲೆ : ಬೆಳಗಾವಿ**

# ಪರಿವಿಡಿ

**ಅನುಬಂಧಗಳು :**

೧. ಬೆಳಗಾವಿ ಜಿಲ್ಲೆಯಲ್ಲಿರುವ ಪ್ರಮುಖ ಸರ್ಕಾರೇತರ ಸಂಸ್ಥೆಗಳು

೨. ಬೆಳಗಾವಿ ಜಿಲ್ಲೆಯಲ್ಲಿರುವ ಕೆ.ಎಲ್.ಇ ಶಿಕ್ಷಣ ಸಂಸ್ಥೆಗಳು

೩. ಆಕರ ಗ್ರಂಥಗಳು

೪. ಪ್ರಶ್ನಾವಳಿ ಮಾದರಿ

೫. ಛಾಯಾಚಿತ್ರಗಳು

## ಕೋಷ್ಟಕಗಳ ಪಟ್ಟಿ

## ನಕ್ಷೆಗಳ ಪಟ್ಟಿ

| | | |
|---|---|---|
| ೨೬ | ಭಾವಸಂಗಮದ ಆಡಳಿತ ಮಂಡಳಿಯ ಗುಣಮಟ್ಟ | ೧೮೯ |
| ೨೭ | ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಭಾವಸಂಗಮದ ಪಾತ್ರ | ೧೮೯ |
| ೨೮ | ಭಾವಸಂಗಮವು ಸರ್ಕಾರಿ ಸಂಸ್ಥೆಗಳಿಗೆ ಮಾದರಿ ಕುರಿತು | ೧೯೦ |
| ೨೯ | ಭಾವಸಂಗಮದ ಕಾರ್ಯಕ್ಷೇತ್ರದ ವಿವರ | ೧೯೧ |
| ೩೦ | ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸ್ಪಂದನೆಯ ರೀತಿ | ೧೯೨ |
| ೩೧ | ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸಹಾಯದ ರೀತಿ | ೧೯೩ |
| ೩೨ | ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಪಾತ್ರ | ೧೯೫ |
| ೩೩ | ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸರ್ಕಾರಿ ಸಂಸ್ಥೆಗಳಿಗೆ ಮಾದರಿ | ೧೯೫ |
| ೩೪ | ಮಹಿಳಾ ಸಮಾಖ್ಯಾದ ಕಾರ್ಯಕ್ಷೇತ್ರದ ವಿವರ | ೧೯೬ |
| ೩೫ | ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಸೇವಾವಧಿ | ೧೯೭ |
| ೩೬ | ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಆಡಳಿತ ಮಂಡಳಿಯ ಬಗ್ಗೆ ಅಭಿಪ್ರಾಯ | ೧೯೮ |
| ೩೭ | ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಸರ್ಕಾರಿ ಸಂಸ್ಥೆಗೆ ಮಾದರಿ | ೧೯೯ |
| ೩೮ | ಗ್ರಾಮೀಣಾಭಿವೃದ್ಧಿಯಲ್ಲಿ ಬರ್ಡ್ಸ್ ಸಂಸ್ಥೆಯ ಪಾತ್ರ | ೨೦೦ |

*Go to the poor people*

*Live among them*

*Learn from them*

*Plan with them*

*Work with them*

*Start with what they know*

*Build on what they have*

*Teach by showing, learn by doing*

*Not a showcase but a pattern*

*Not adds and ends but a system*

*Not piecemeal but integrated approach*

*Not to confirm but to transform*

*Not releif but release.*

***Dr. Y. C. James Yen***

# ಅಧ್ಯಾಯ – ೧
# ಪ್ರವೇಶ

೧.೧ ಪ್ರಸ್ತಾವನೆ

೧.೨ ಸರ್ಕಾರೇತರ ಸಂಸ್ಥೆಗಳ ಸ್ಥಾನಮಾನಗಳು

೧.೩ ಅವಶ್ಯಕತೆ

೧.೪ ಪರಿಕಲ್ಪನೆ ಮತ್ತು ಅರ್ಥವ್ಯಾಪ್ತಿ

೧.೫ ಉದ್ದೇಶಗಳು

೧.೬ ವೈಧಾನಿಕತೆ

೧.೭ ಅಧ್ಯಯನದ ವ್ಯಾಪ್ತಿ

೧.೮ ಅಧ್ಯಯನದ ಊಹೆಗಳು

೧.೯ ಅಧ್ಯಯನದ ಇತಿಮಿತಿಗಳು

೧.೧೦ ಅಧ್ಯಯನದ ಮಹತ್ವ

೧.೧೧ ಅಧ್ಯಯನದ ವಿನ್ಯಾಸ

# ಅಧ್ಯಾಯ : ೧

# ಪ್ರವೇಶ

## ೧.೧ ಪ್ರಸ್ತಾವನೆ :

**Service is the rent we pay for the privilege of living on the earth.**

**-Eldon Tanner**

ಕಠಿಣ ಶ್ರಮಕ್ಕೆ ಪರ್ಯಾಯವಾದುದು ಬೇರಾವುದು ಇಲ್ಲವೆಂಬುದರ ಸತ್ಯವನ್ನು ಒಪ್ಪಿಕೊಂಡದ್ದಾಗಿದೆ. ಅದೇ ತೆರನಾಗಿ ಸರ್ಕಾರೇತರ ಸಂಸ್ಥೆಗಳ ಸ್ವಯಂರೂಪಿತ – ಸ್ವಯಂಪ್ರೇರಿತ ಕಾರ್ಯಗಳಿಗೆ ಸಮವಾದದ್ದೂ ಯಾವುದೂ ಇಲ್ಲವೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ವಿಶ್ವದ ಅಸಂಖ್ಯಾತ ಜನರ ಜೀವನಮಟ್ಟದ ಸುಧಾರಣೆಗಾಗಿ 'ಸರ್ಕಾರೇತರ ಸಂಸ್ಥೆಗಳು' ಸ್ವಯಂಸ್ಫೂರ್ತಿಯಿಂದ ಸೇವೆಯನ್ನು ನೀಡುತ್ತಿವೆ. ಜನರ ಅಭಿವೃದ್ಧಿಗಾಗಿ ಬದ್ಧತೆಯಿಂದ ಗಂಭೀರವಾಗಿ ತೊಡಗಿಸಿಕೊಂಡಿವೆ ಮತ್ತು ದೃಢಮನಸ್ಸಿನ ಈ ಸೇವೆಯನ್ನು ನೀಡುವ ಸರ್ಕಾರೇತರ ಸಂಸ್ಥೆಗಳು ಬದ್ಧತೆಯಲ್ಲಿ ತಮ್ಮ ವೈಯಕ್ತಿಕ ಕಷ್ಟಗಳನ್ನು, ಅನಾನುಕೂಲತೆಗಳನ್ನು ಮತ್ತು ಒತ್ತಡಗಳನ್ನು ಲಕ್ಷಿಸುವದಿಲ್ಲ. ಸಹಾಯ ಬಯಸುವ ಸಮುದಾಯಗಳಿಗೆ ಸೇವೆಯನ್ನು ನೀಡುವ ತಮ್ಮ ಮುಖ್ಯ ಗುರಿಯಡೆಗೆ ಅವರ ಲಕ್ಷ್ಯವಿರುತ್ತದೆಯೇ ವಿನಾ, ತಮ್ಮ ಕಷ್ಟಗಳ ಕಾಳಜಿ ಇಲ್ಲವೇ ಇಲ್ಲ. ಸರ್ಕಾರೇತರ ಸಂಸ್ಥೆಗಳು ನೋವು–ಬಳಲಿಕೆಗಳು ಹಾಗೂ ಕಷ್ಟ ಅನುಭವಿಸುವ ಜೀವಿಗಳಿಗೆ ಸಂತಸವನ್ನು ನೀಡುವ ಪ್ರಸಂಶನೀಯ ಕಾರ್ಯವನ್ನು ಮಾಡುತ್ತಿವೆ.

ಸಮಾಜದ ಕೆಳಸ್ತರದಲ್ಲಿ ಜೀವಿಸುವ ಜನರ ಬಗ್ಗೆ ಕಾಳಜಿಯನ್ನು ನೀಡುವ ಸಂಸ್ಥೆಗಳೇ 'ಸರ್ಕಾರೇತರ ಸಂಸ್ಥೆ'ಗಳಾಗಿವೆ. ಅವುಗಳ ಕಾರ್ಯ ಜನಪರವಾಗಿದೆ. ಜನರೊಂದಿಗಿದ್ದು

ಅವರೊಂದಿಗೆ ಕಾರ್ಯಮಾಡುತ್ತಲೇ ಅವಕಾಶ ವಂಚಿತ, ಅಸಹಾಯಕ, ದುಃಖಿತ, ಅಧಿಕಾರರಹಿತ ಜನರ ಏಳ್ಗೆಗಾಗಿ ಶ್ರಮಿಸುತ್ತವೆ. ಬಹುಜನ ಸಮುದಾಯದ ನಿರಂತರ ಅಭಿವೃದ್ಧಿಗಾಗಿ ವೃತ್ತಿಪರತೆಯ ಜ್ಞಾನವನ್ನು ಅನ್ವಯಿಸಿ ಮಾನವೀಯ ದೃಷ್ಟಿಕೋನದಿಂದ ಕಾರ್ಯಗೈಯುತ್ತವೆ. ಜನರು ಸರ್ವೋದಯ ಸ್ವಯಂ ಪ್ರೇರಣೆ ಸೇವೆಯನ್ನು ಅಪೇಕ್ಷಿಸುತ್ತಾರೆ. ಸರ್ಕಾರೇತರ ಸಂಸ್ಥೆಗಳು ಜನರೊಂದಿಗೆ ನಿಕಟತೆಯನ್ನು ಹೊಂದಿರುತ್ತವೆಯೆಂದು ನಂಬಲಾಗಿದ್ದು, ಅವುಗಳ ಪ್ರಯತ್ನಗಳು ಸಹಾಯ ಅಪೇಕ್ಷಿತರಿಗೆ ಉಪಯುಕ್ತವಾಗಿದೆ. ಏಕೆಂದರೆ, ಅಂತಹ ಸಮೂಹದಲ್ಲಿಯೇ ನಿಶ್ಚಿತವಾಗಿ ಬದ್ಧತೆಯಿಂದ ಸಮಯೋಚಿತವಾಗಿ ಕಾರ್ಯೋನ್ಮುಖವಾಗಿ ತಮ್ಮ ಕೈಂಕರ್ಯದ ಗುರಿ ತಲುಪಲು ಸಾಧ್ಯವಿದೆ. ಆದ್ದರಿಂದಲೆ ಅವು ಜನರ ಗಟ್ಟಿಯಾದ ನಿಯಂತ್ರಣ ಮತ್ತು ರಕ್ಷಣಾತ್ಮಕ ಬೆಂಬಲವನ್ನು ಗಳಿಸಿವೆ. ಸರ್ಕಾರೇತರ ಸಂಸ್ಥೆಗಳು ತಮ್ಮ ನಿರ್ಮಲ–ನಿಷ್ಕಲ್ಮಶ ಚೇತನಾಶಕ್ತಿಗೆ ಮತ್ತು ರಚನಾತ್ಮಕ ಕಾರ್ಯಗಳಿಗೆ ಹೆಸರಾಗಿವೆ.

ಸರ್ಕಾರೇತರ ಸಂಸ್ಥೆಗಳು ಖಾಸಗಿ–ಸಂಘಗಳಾಗಿದ್ದು, ಅವುಗಳ ಸದಸ್ಯತ್ವ ಮತ್ತು ಚಟುವಟಿಕೆಗಳು ಅಂತರರಾಷ್ಟ್ರೀಯ ವ್ಯಾಪ್ತಿ ಹೊಂದಿವೆ. ತಮ್ಮ ರಾಷ್ಟ್ರದ ಸರ್ಕಾರದ ಕಾನೂನಿನ ಸಂಸ್ಥೆಯ ಸ್ಥಾನ–ಮಾನ ಹೊಂದಿರದ ಸಂಘಟಿತ ಸಂಸ್ಥೆಗಳು ಸರ್ಕಾರೇತರ ಸಂಸ್ಥೆಗಳು. ಅದಾಗ್ಯೂ, ಸಂಯುಕ್ತ ರಾಷ್ಟ್ರ ಸಂಘ ಮತ್ತು ಹಲವಾರು ಅಂತರರಾಷ್ಟ್ರೀಯ ಸಂಘಟನೆಗಳು ಪ್ರಮುಖವಾದ ಕೆಲವು ಸರ್ಕಾರೇತರ ಸಂಸ್ಥೆಗಳಿಗೆ ಮಾನ್ಯತೆ ನೀಡಿದ್ದು ಪ್ರಶಂಸನೀಯ. ಪ್ರಸ್ತುತ ದಿನಗಳಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿನ ಅಭಿವೃದ್ಧಿಯ ಕಾರ್ಯಗಳಲ್ಲಿ ಹತ್ತಾರು ಸಂಸ್ಥೆ–ಸಂಘಗಳು ಸಕ್ರೀಯವಾಗಿ ಪಾಲ್ಗೊಳ್ಳುತ್ತಿವೆ. ಸಹಕಾರದ ವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳು ಹೊಸ ಅಭಿವೃದ್ಧಿಯ ಆಶಾವಾದದ ಭರವಸೆ ಮೂಡಿಸಿವೆ.

ಇಂದಿನ ಸಮಾಜದಲ್ಲಿ ಸಾಮಾಜಿಕ ಅಭಿವೃದ್ಧಿಯು ಅತ್ಯಂತ ಕಳಕಳಿಯ ವಿಷಯವಾಗಿದೆ. ಅದರ ಅಭಿವೃದ್ಧಿಯ ಬಹಳಷ್ಟು ಅಳತೆಗೋಲುಗಳು ಹಿಂದೆಂದಿಗಿಂತಲೂ ಹೆಚ್ಚಿನ ಪ್ರಾಮುಖ್ಯತೆ ಪಡೆಯುತ್ತಿವೆ. ಜನರನ್ನೇ ಕೇಂದ್ರವಾಗಿಸಿಕೊಂಡಿರುವ ಮಾನವ ಅಭಿವೃದ್ಧಿಯ ತೀವ್ರ ಬದಲಾವಣೆ, ರಾಷ್ಟ್ರದ ಅಭಿವೃದ್ಧಿಯ ಮಂತ್ರವೆಂದು ಅರಿತುಕೊಂಡು ಮುನ್ನಡೆಯುತ್ತಿರುವುದು ಗಮನಿಸಬೇಕಾದ ಅಂಶ. ಸದ್ಯ ಜಾಗತೀಕರಣ ಮತ್ತು ಸ್ಥಳೀಕರಣಗಳೆಂಬ ಎರಡು ಸಮಚಿತ್ತದ ಬೆಳವಣಿಗೆಯ ಬಲಗಳ ಹಿಡಿತದಲ್ಲಿದ್ದೇವೆ. ಒಂದು ಅಂತರರಾಷ್ಟ್ರೀಯ ದೈತ್ಯ ಕಂಪನಿಗಳಿಂದ ಜಗ್ಗಲ್ಪಟ್ಟರೆ ಇನ್ನೊಂದು ಸ್ಥಳೀಯ ಸಮೂಹಗಳ ಚಳುವಳಿಗಳಿಂದ ಎಳೆಯಲ್ಪಡುತ್ತದೆ. ಅವುಗಳಲ್ಲಿ ಒಂದು ಆಕಾಶಕ್ಕೊಯ್ಯುವ ಶಕ್ತಿಯಾದರೆ, ಮತ್ತೊಂದು ಆಳಕ್ಕಿಳಿಸುವ ಒತ್ತಡವಾಗಿದೆ. ಅರವತ್ತರ ದಶಕದ ಪ್ರಾರಂಭವು

ಪ್ರಜಾಸತ್ತಾತ್ಮಕತೆ ಮತ್ತು ಜಾಗತೀಕರಣಗಳೆಂಬ ದ್ವಿ-ಪ್ರಕ್ರಿಯೆಗಳಿಗೆ ನಾಂದಿ ಹಾಡಿತು. ಅದರಿಂದಾಗಿ ಕ್ಲುಪ್ತತೆಯನ್ನು ಸರಿಸಿ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಬದಲಾವಣೆಯ ಪರಿಮಳ ಬೀರಿದಂತಾಯಿತು. ಅಭಿವೃದ್ಧಿಯೆಂಬುದು ವಿಶಾಲಾರ್ಥ ಹೊಂದಿದ್ದು, ವಿವಿಧ ತರಹದ ಅರ್ಥಗಳನ್ನು ನೀಡುತ್ತದೆ. ಅದರಲ್ಲಿ ಆರ್ಥಿಕ ಅಭಿವೃದ್ಧಿ, ಸಾಮಾಜಿಕ ಅಭಿವೃದ್ಧಿ ಮತ್ತು ಇದೀಗ ನಿರಂತರ ಅಭಿವೃದ್ಧಿ. ಅಂತೆಯೇ, ನಿರಂತರ ಅಭಿವೃದ್ಧಿ ಎಂದರೆ ನಿಜವಾದ ಅಭಿವೃದ್ಧಿ ಎಂದರ್ಥ. ಇದು ಸಾಮಾಜಿಕ, ಆರ್ಥಿಕ, ರಕ್ಷಣೆ, ಮಾನವನ ಸ್ಥಾನ-ಮಾನ, ಸಾಕ್ಷರತೆ, ತಂತ್ರಜ್ಞಾನ, ಭಾಗವಹಿಸುವಿಕೆ ಇತ್ಯಾದಿ ಅಂಶಗಳ ಮೇಲೆ ಅವಲಂಬಿತವಾಗಿದೆ. ಉತ್ತಮ ಆರೋಗ್ಯ, ತೃಪ್ತಿಕರ ಆದಾಯ, ಆಧುನಿಕ ತಂತ್ರಜ್ಞಾನ, ಮಾಹಿತಿಯ ಲಭ್ಯತೆ, ಗುಣಮಟ್ಟದ ಶಿಕ್ಷಣ, ಉತ್ಕೃಷ್ಟ ಸಂವಹನ ಕೌಶಲ್ಯಗಳು, ಸಮಾನತೆ ಮುಂತಾದವುಗಳು ಜೀವನದ ಮಟ್ಟವನ್ನು ಸುಧಾರಿಸುತ್ತವೆ. ಆದ್ದರಿಂದ, ಅಭಿವೃದ್ಧಿಯ ಕಡೆಗೆ ಪಯಣ ಸಾಧ್ಯ. ಅಭಿವೃದ್ಧಿಯು ಜನರ ಅಪೇಕ್ಷೆ, ಒತ್ತಾಸೆ, ಪ್ರೇರಣೆಗಳ ಮೇಲೆ ಅವಲಂಬಿತವಾಗಿದೆ. ಆದ್ದರಿಂದಲೆ ಸರ್ಕಾರೇತರ ಸಂಸ್ಥೆಗಳು ಸರ್ವಜನ ಹಿತ ಬಯಸುವ ಜನರ ಸಂಘಗಳಾಗಿವೆ. ಸಾಮಾಜಿಕ-ಆರ್ಥಿಕ ಬದಲಾವಣೆಯ ಪ್ರಕ್ರಿಯೆಯಲ್ಲಿ ಸರ್ಕಾರದೊಂದಿಗೆ ಕೈಜೋಡಿಸುತ್ತವೆ.

**೧.೨ ಸರ್ಕಾರೇತರ ಸಂಸ್ಥೆಗಳ ಸ್ಥಾನಮಾನ:**

ಸರ್ಕಾರದ ಮತ್ತು ಕಂಪನಿ-ವಲಯದ ಸಂಸ್ಥೆಗಳ ನಂತರದ ಸ್ಥಾನ ಸರ್ಕಾರೇತರ ಸಂಸ್ಥೆಗಳದ್ದು. ಜನರ ಜೀವನಮಟ್ಟವನ್ನು ಸುಧಾರಿಸುವ ಸದುದ್ದೇಶವನ್ನು ಹೊಂದಿ, ಪ್ರಾಮಾಣಿಕತೆಯನ್ನು ಅಳವಡಿಸಿಕೊಂಡಿರುವ ಮಹತ್ವದ ಉದ್ದೇಶವೇ ಸರ್ಕಾರೇತರ ಸಂಸ್ಥೆಗಳು ಉನ್ನತ ಸ್ಥಾನಕ್ಕೇರಲು ಕಾರಣವಾಗಿದೆ. ಅಲ್ಲದೆ ಸಮಾಜದ ಎಲ್ಲ ಸ್ತರದ ಜನರು ಇವುಗಳ ಪಾತ್ರದ ಬಗ್ಗೆ ಶ್ಲಾಘಿಸುವಂತಾಗಿದೆ.

**೧.೩ ಸರ್ಕಾರೇತರ ಸಂಸ್ಥೆಗಳ ಅವಶ್ಯಕತೆ:**

ಸದೃಢ ಸರ್ಕಾರವೆಂಬ ದೈತ್ಯ ರೂಪದ ವ್ಯವಸ್ಥಿತ ವಲಯ ಇರುವಾಗಲೂ ಸರ್ಕಾರೇತರ ಸಂಸ್ಥೆಗಳು ಏಕೆ? ಎಂಬ ಸಾಮಾನ್ಯ-ಕುತೂಹಲಕರವಾದ ಪ್ರಶ್ನೆ ಹುಟ್ಟುವುದು ಸಹಜ. ಜನರ ಜೀವನದಲ್ಲಿ ಆಳವಾಗಿ ಬೇರೂರಿದ ಜಟಿಲ ಸಮಸ್ಯೆಗಳೆಡೆಗೆ ಗಮನಿಸಿದರೆ ಈ ಸರ್ಕಾರೇತರ ಸಂಸ್ಥೆಗಳು ಯಾಕೆ ಬೇಕೆಂಬುದರ ಅರಿವಾಗುತ್ತದೆ. ಈ ಕೆಳಗಿನ ಹಲವಾರು ಸಂಗತಿಗಳು ಸರ್ಕಾರೇತರ ಸಂಸ್ಥೆಗಳ ಅನಿವಾರ್ಯತೆಯನ್ನು ಪ್ರಸ್ತುತ ಪಡಿಸುತ್ತವೆ.

(ಅ) **ಬಡತನ :**

ಗ್ರಾಮ-ಭಾರತದಲ್ಲಿ ಬಡತನವು ಇನ್ನೂ ಜೀವಂತವಾಗಿದೆ. ಅಂಕಿ-ಸಂಖ್ಯೆಗಳ ಪ್ರಕಾರ ಶೇಕಡಾವಾರು ಬಡತನದ ಪ್ರಮಾಣ ಇಳಿಮುಖವಾಗುತ್ತಿದ್ದರೂ, ಬಡ ಜನರ ಪ್ರಮಾಣ ಮಾತ್ರ ಕಡಿಮೆಯಾಗುತ್ತಿಲ್ಲ. ಬಡತನದ ಬಗ್ಗೆ ಪರಿಣಿತರ ಸಮೂಹದ (೧೯೯೩) ಅಭಿಪ್ರಾಯದಂತೆ, "೧೯೮೭-೮೮ರಲ್ಲಿ ಶೇ.೩೩.೪ ರಷ್ಟಿದ್ದ ಬಡತನದ ಪ್ರಮಾಣವು ೧೯೯೩-೯೪ರಲ್ಲಿ ಶೇ ೨೮.೪ಕ್ಕೆ ಇಳಿಯಿತು. ಆದರೆ ನಿಜವಾಗಿಯೂ ಬಡಜನರ ಸಂಖ್ಯೆಯು ೨೨೯.೪ ದಶಲಕ್ಷ ದಿಂದ ೨೪೪ ದಶಲಕ್ಷಕ್ಕೇರಿತು. ಅದಾಗ್ಯೂ, ಭಾರತ ಸರ್ಕಾರದ ಅಂಕಿ-ಸಂಖ್ಯೆಯ ಅಂದಾಜಿನಂತೆ ೧೯೯೩-೯೪ ರಲ್ಲಿ ಬಡತನ ರೇಖೆಯ ಕೆಳಗೆ ಜೀವಿಸುವವರ ಸಂಖ್ಯೆ ಕೇವಲ ೧೪೧ ದಶಲಕ್ಷ ಮಾತ್ರ.

ಕುಟುಂಬ ಯೋಜನೆಯಂತಹ ನಿಯಂತ್ರಣ ಕ್ರಮಗಳ ಹೊರತಾಗಿಯೂ ಗಣನೀಯವಾಗಿ ಹೆಚ್ಚುತ್ತಿರುವ ಜನಸಂಖ್ಯೆಯು ಕಡುಬಡತನಕ್ಕೆ ಮುಖ್ಯ ಕಾರಣ. 'ಹೆಚ್ಚಿನ ಮಕ್ಕಳಿಂದ ಹೆಚ್ಚು ಕೂಲಿ ಗಳಿಕೆಗೆ ಸುಲಭ ದಾರಿ' ಎಂದು ಹಳ್ಳಿಯ ಬಡವರಲ್ಲಿ, ಅದರಲ್ಲೂ ಭೂರಹಿತ ಕೂಲಿ ಅವಲಂಬಿತ ಕುಟುಂಬಗಳ ಅಪನಂಬಿಕೆಯೇ ಜನಸಂಖ್ಯೆ ಹೆಚ್ಚಳಕ್ಕೆ ಕಾರಣವಾಗಿದೆ. ಹೀಗಾಗಿ ಬಡತನ ಹೆಚ್ಚಳಕ್ಕೆ ಹೆಚ್ಚುತ್ತಿರುವ ಜನಸಂಖ್ಯೆಯು ನೇರವಾದ ಕಾರಣವಾಗಿದೆ.

ಇನ್ನೊಂದು ದೃಷ್ಟಿಯಿಂದ ವಿಶ್ಲೇಷಿದಾಗ, ನಿಜವಾಗಿಯೂ ಬಡತನವು ನಮ್ಮ ದೇಶಕ್ಕೆ ಸಮಸ್ಯೆಯಾಗಿಲ್ಲ. ಆದರೆ, ಅವಕಾಶ ಮತ್ತು ಸಂಪನ್ಮೂಲಗಳ ಅಸಮರ್ಪಕ ವಿತರಣೆಯು ಮುಖ್ಯ ಅಡೆ-ತಡೆಯಾಗಿದೆ. ಸಮೃದ್ಧ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿದ ರಾಷ್ಟ್ರವೊಂದು ಇಷ್ಟೊಂದು ಅವಕಾಶ ವಂಚಿತರ ಮತ್ತು ದಾರಿದ್ರ್ಯ ಅನುಭವಿಸುವ ಜನರನ್ನು ಹೊಂದಿದೆ ಎಂಬುದು ವಿರೋಧಾಭಾಸವೆ ಸರಿ! ಅತ್ಯಂತ ವಿಷಾದನೀಯ ಸತ್ಯಾಂಶವೆಂದರೆ ರಾಷ್ಟ್ರದ ಸಂಪತ್ತಿನಲ್ಲಿ ಗರಿಷ್ಠವೆನಿಸುವ ಶೇ.೮೦ರಷ್ಟನ್ನು ಕೇವಲ ಮೇಲ್ದರ್ಜೆಯ ಶೇ.೨೦ರಷ್ಟು ಗಣ್ಯರು ಕಬಳಿಸುತ್ತಿದ್ದು, ಅದರಲ್ಲೂ ಬೆರಳೆಣಿಕೆಯ ಜನರು ಅತಿ ಹೆಚ್ಚು, ಸ್ವಲ್ಪ ಜನರು ಇನ್ನೊಂದಿಷ್ಟು ಮತ್ತು ಉಳಿದವರು ಇನ್ನುಳಿದಿದ್ದರಲ್ಲಿ ಭಾಗಿಗಳಾಗುತ್ತಾರೆ. ಆದರೆ, ಕೇವಲ ಶೇ.೨೦ ರಷ್ಟನ್ನು ಬಹುಸಂಖ್ಯಾತ ಶೇ.೮೦ ರಷ್ಟು ಜನರು ಹೊಂದಾಣಿಕೆ ಮಾಡಿಕೊಂಡು ಅಸಮಾಧಾನದಿಂದ ಕಳವಳದ ಸ್ಥಿತಿಯಲ್ಲಿದ್ದಾರೆ.

(ಬ) **ಜಾತೀಯತೆ :**

ಜಾತೀಯತೆಯು ಭಾರತೀಯ ಸಮಾಜದಲ್ಲಿ ಆಳವಾಗಿ ಬೇರೂರಿದ್ದು, ಅದು ಗ್ರಾಮೀಣ ಭಾಗದಲ್ಲಿ ಶೋಚನೀಯವಾಗಿದೆ. ಜಾತೀಯತೆಯ ಕೇಡು ದಲಿತರನ್ನು ತುಳಿತಕ್ಕೊಳಪಡಿಸುತ್ತದೆ.

ಗ್ರಾಮೀಣ ಸಮಾಜದ ಜಾತೀಯತೆಯ ಭೂತವು ಸಂವಿಧಾನದ ಭರವಸೆ ಮತ್ತು ಶಾಸನೀಯ ಹಕ್ಕುಗಳನ್ನು ನಿರರ್ಥಕಗೊಳಿಸುತ್ತದೆ. ಒಂದು ಅರ್ಥದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಬಂಧಗಳು ದಲಿತರನ್ನು ಮತ್ತು ಪರಿಶಿಷ್ಠರನ್ನು ಸದಾಕಾಲ ಗುಲಾಮಗಿರಿಯಲ್ಲಿಡುತ್ತವೆ.

**(ಕ) ಮಹಿಳೆಯರ ಶೋಷಣೆ :**

ಹಳ್ಳಿಗಳಲ್ಲಿ ಮಹಿಳೆಯರ ಶೋಷಣೆಯು ಗಂಭೀರ ಸಮಸ್ಯೆಯಾಗಿದೆ. ತುಳಿತಕ್ಕೊಳಪಟ್ಟ ಮಹಿಳೆಯರೇ ಹೆಚ್ಚು ಶೋಷಣೆಗೆ ಒಳಗಾಗುತ್ತಿದ್ದಾರೆ. ಸಂಸ್ಕಾರದ ರಕ್ಷಣೆಯ ನೆಪದಿಂದ ಅಪರಿಮಿತ ನಿಯಂತ್ರಣ ಮತ್ತು ನಿಯಮಗಳನ್ನು ಮಹಿಳೆಯರ ಮೇಲೆ ಒತ್ತಾಯದಿಂದ ಹೇರಿ ಅವರು ಸಮಾಜದ ಮುಖ್ಯವಾಹಿನಿಗೆ ಸೇರದಂತೆ ಹುನ್ನಾರ ನಡೆಸುತ್ತಾರೆ. ಹೀಗಿದ್ದಾಗಲೂ, ಸಂವಿಧಾನದ ೭೩ನೇ ತಿದ್ದುಪಡಿಯ ಮೂಲಕ ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಮಹಿಳೆಯರಿಗೆ ಮೂರರಲ್ಲಿ ಒಂದಾಂಶವನ್ನು ಮೀಸಲಿಡುವ ಕ್ರಮ ಭಾರತದ ಇತಿಹಾಸದಲ್ಲಿ ಒಂದು ಮೈಲುಗಲ್ಲು. ಆದರೆ ಅಧಿಕಾರ ಸ್ಥಾನದಲ್ಲಿರುವ ಮಹಿಳೆಯರ ಗಂಡಂದಿರು ತೆರೆಮರೆಯಿಂದ ಹಿನ್ನಲೆ ಗಾಯಕರಂತೆ ಅಧಿಕಾರ ಚಲಾಯಿಸುತ್ತಿರುವುದು ವಿಷಾದನೀಯ ಸಂಗತಿ.

**(ಡ) ಹಳ್ಳಿಗಾಡಿನ ನಿರುದ್ಯೋಗತನ :**

ಗ್ರಾಮೀಣ ಜನರಲ್ಲಿನ ನಿರುದ್ಯೋಗ ಸಮಸ್ಯೆಯು ದೇಶದ ಗಂಭೀರ ಸಮಸ್ಯೆಗಳಲ್ಲೊಂದು. ಭಾರತವು ಇನ್ನೂ ಕೃಷಿ ಪ್ರಧಾನವಾದ ದೇಶವಾಗಿ ಮುಂದುವರೆಯುತ್ತಿರುವದರಿಂದ, ಗ್ರಾಮೀಣ ಯುವಜನರಿಗೆ ಕೃಷಿಯಿಂದ ಮತ್ತು ಅದರ ಸಂಬಂಧಿತ ಚಟುವಟಿಕೆಗಳಿಂದಲೇ ಉದ್ಯೋಗದ ಅವಕಾಶಗಳು ಸೃಷ್ಟಿಗೊಳ್ಳುತ್ತಿವೆ.

**(ಇ) ಅನಿಯಮಿತ ಆದಾಯದ ಕೃಷಿ :**

ಲಕ್ಷಾನುಗಟ್ಟಲೇ ಜನ ಅವಲಂಬಿತವಾಗಿರುವ ಕೃಷಿಯು ಭಾರತೀಯರಿಗೆ ಪ್ರತಿಫಲ ನೀಡದ ಉದ್ಯೋಗವಾಗಿದೆ. ಮಳೆಯೊಂದಿಗೆ ಜೂಜಾಟವಾಗಿ ಕೃಷಿಯು ಅಪಹಾಸ್ಯಕ್ಕೊಳಗಾಗಿದೆ. ಉತ್ತರ ಭಾರತವು ಅತೀವೃಷ್ಠಿಯಿಂದ ಬಳಲಿದರೆ, ದಕ್ಷಿಣ ಭಾಗವು ಬರಗಾಲ, ಅನಾವೃಷ್ಠಿಯ ಸುಳಿಗೆ ಸಿಲುಕಿರುತ್ತದೆ. ಅದರಂತೆಯೇ, ರಾಜ್ಯದ ಒಂದು ಭಾಗವು ಅತೀ ಮಳೆಯಿಂದ ಬೆಳೆ ನಾಶದ ನಷ್ಟ ಅನುಭವಿಸಿದರೆ, ಇನ್ನೊಂದು ಭಾಗದಲ್ಲಿ ಕುಡಿಯುವ ನೀರಿಗೂ ಪರದಾಡುವಂತಹ ದಯನೀಯ ಸ್ಥಿತಿಯಿರುತ್ತದೆ.

ಭಾರತದ ರೈತ ಸಾಲದಲ್ಲಿ ಹುಟ್ಟಿ, ಸಾಲದಲ್ಲೇ ಬದುಕಿ, ಸಾಲದಲ್ಲಿಯೇ ತೀರಿಕೊಂಡು, ಸಾಲವನ್ನೇ ಮುಂದಿನ ಪೀಳಿಗೆಗೆ ಬಳುವಳಿ ನೀಡುತ್ತಾನೆಂದು ಬಹುಕಾಲದ ಉಕ್ತಿಯಾದರೂ ಕೂಡಾ,

ಈಗಲೂ ಸಹಿತ ಬದಲಾಗಿಲ್ಲವೆಂದೆನಿಸುತ್ತದೆ. ರಾಷ್ಟ್ರೀಕೃತ ಬ್ಯಾಂಕುಗಳು ರೈತರ ಹಣಕಾಸಿನ ಬೇಡಿಕೆಯನ್ನು ಸಮರ್ಥವಾಗಿ ನಿಭಾಯಿಸುತ್ತಿಲ್ಲ. ಸಮಯಾನುಸಾರ ರೈತ ಸಮುದಾಯದಲ್ಲಿ ಅಗಣಿತ ಸಂಖ್ಯೆಯ ಜನ ಆತ್ಮಹತ್ಯೆಗೆ ಶರಣಾಗುತ್ತಿರುವುದು ಜ್ವಲಂತ ಉದಾಹರಣೆಯಾಗಿದೆ. ದೇಶದ ನಾನಾ ಭಾಗಗಳಲ್ಲಿ ರೈತರು ಸಾಲದ ಭಾರವನ್ನು ಹೊರಲಾರದೆ ಹಗ್ಗಕ್ಕೆ ಶರಣಾಗಿ ಬದುಕಿಗೆ ವಿದಾಯ ಹೇಳಿ ಸಾಲ ಮುಕ್ತರಾಗಿದ್ದು ಶೋಚನೀಯ.

ಜನಾಂಗದಿಂದ ಜನಾಂಗದವರೆಗೆ ಕೃಷಿ ಕೂಲಿ, ಕಾರ್ಮಿಕ ಜನತೆ ಕೂಲಿಯಾಳಾಗಿ ಉಳಿಯುತ್ತಿದ್ದಾರೆ. ಕೆಲವೇ ಪ್ರಕರಣಗಳಲ್ಲಿ ಅವರು ಮಾಲಿಕರಾಗಿದ್ದನ್ನು ಬಿಟ್ಟರೆ ಅತಿ ಹೆಚ್ಚಿನ ಪ್ರಕರಣಗಳಲ್ಲಿ ಈ ಸಮುದಾಯ ಕೂಲಿಗಳಾಗಿಯೇ ತೊಳಲಾಡುತ್ತಿದ್ದಾರೆ. ಅತಿ ಕಡಿಮೆ-ಚಿಕ್ಕ ತುಂಡು ಭೂಮಿಯಲ್ಲಿ ಅತಿ ಹೆಚ್ಚು ಸಂಖ್ಯೆಯ ಜನರು ಕೃಷಿ ಕಾರ್ಯದಲ್ಲಿ ತೊಡಗಿರುತ್ತಾರೆ.

**(ಫ) ಮೂಲ ಸೌಕರ್ಯಗಳ ಕೊರತೆ :**

ಗ್ರಾಮೀಣ ಜನರು ಅವಶ್ಯಕ ಮೂಲಭೂತ ಸೌಲಭ್ಯ-ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ದೇಶ ಸ್ವತಂತ್ರವಾಗಿ ಆರು ದಶಕಗಳು ಸಂದಿದ್ದರೂ ಸಹ ದೇಶದಲ್ಲಿನ ಹಲವಾರು ಹಳ್ಳಿಗಳಲ್ಲಿ ಸುರಕ್ಷಿತ ಶುದ್ಧ ಕುಡಿಯುವ ನೀರು ಪೂರೈಕೆ ಮಾಡದ ಶೋಚನಿಯ ಸ್ಥಿತಿಯಲ್ಲಿದ್ದೇವೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಸಹಜಸ್ಥಿತಿಯನ್ನು ಸಾಕಾರಗೊಳಿಸಲು ಇನ್ನೂ ದಶಕಗಳ ಕಾಲಾವಧಿ ಬೇಕಾಗಿರುತ್ತದೆ. ಇದಕ್ಕಿಂತಲೂ ಅವಮಾನಕರ ಮತ್ತು ಅಸಹ್ಯ ಸಂಗತಿಯಂದರೆ ಗ್ರಾಮಗಳಲ್ಲಿನ ಮಹಿಳೆಯರು ರಸ್ತೆಯ ಬದಿಗಳಲ್ಲಿಯೇ ತಮ್ಮ ನಿತ್ಯ ಶೌಚದ ಕರ್ಮಗಳಿಗಾಗಿ ರಾತ್ರಿಯಾಗುವದನ್ನು ಕಾಯ್ದು-ಕುಳಿತುಕೊಳ್ಳಬೇಕಾಗಿದ್ದು ಯಾರೇ ಆದರು ತಲೆ ತಗ್ಗಿಸುವಂತಹ ಪ್ರಗತಿ ರಹಿತ ದೇಶದ ಕುರುಹು! ಇದು ಮೂಲಭೂತ ಸೌಕರ್ಯಗಳ ಮತ್ತು ಜನರಲ್ಲಿನ ಪ್ರಜ್ಞೆಯ ಕೊರತೆಗಳಿಂದ ಉದ್ಭವಿಸುವ ಸಮಸ್ಯೆಯಾಗಿದೆ. ಮಹಿಳೆಯರಲ್ಲಿನ ಸಾಕ್ಷರತೆಯು ಕಡಿಮೆಯಿದ್ದು ದೇಶದ ಒಟ್ಟಾರೆ ಸಾಕ್ಷರತೆ ಪ್ರಮಾಣ ಕಡಿಮೆ ಇದೆ. ರಸ್ತೆ, ಸಂಪರ್ಕ, ಮಾರುಕಟ್ಟೆ, ಸಾಲ, ಸೌಕರ್ಯಗಳು ಇನ್ನೂ ನಿಕೃಷ್ಟ ಸ್ಥಿತಿಯಲ್ಲಿವೆ.

'ಭಾರತ ಗ್ರಾಮಗಳಲ್ಲಿದೆ, ಗ್ರಾಮಗಳೇ ದೇಶದ ಬೆನ್ನೆಲಬು'ಯೆಂದು ಮಹಾತ್ಮ ಗಾಂಧಿಜಿಯವರು ಘೋಷಿಸಿದ್ದರೂ ಸಹ ನಮ್ಮ ರಾಜಕೀಯ ಮುಖಂಡರು ಮತ್ತು ಅಧಿಕಾರ ಶಾಹಿ ವರ್ಗ ಅಪೇಕ್ಷಿತ ಪ್ರಮಾಣದ ಗ್ರಾಮೀಣ ಅಭಿವೃದ್ಧಿಯನ್ನು ಸಾಕಾರಗೊಳಿಸಿಲ್ಲ. ಪ್ರತಿಷ್ಠಿತ ಮತ್ತು ಬಹು ನಿರೀಕ್ಷಿತ ಪಂಚವಾರ್ಷಿಕ ಯೋಜನೆಗಳು ಮತ್ತು ಪ್ರಗತಿಯ ಚಿತ್ರಣ ಬದಲಿಸಬಹುದೆಂಬ ಹೆಗ್ಗಳಿಕೆಯ

ಹಸಿರು ಕ್ರಾಂತಿಯು ಬಡಜನತೆಗೆ ನಿರೀಕ್ಷಿತ ಫಲ ನೀಡದೆ ಹೋಗಿದ್ದು ಈಗ ಇತಿಹಾಸ. ಏಕೆಂದರೆ, ಅವುಗಳು ಸಾಮಾನ್ಯ ಜನರನ್ನು ದೃಷ್ಟಿಯಲ್ಲಿಟ್ಟು ರೂಪಿಸಿದ ಯೋಜನೆಗಳಾಗಿರುವುದಿಲ್ಲ ಎಂಬುದು ವಿಪರ್ಯಾಸ. ಆದರೆ, ಕೆಲವೇ ಬೃಹತ್ ಉದ್ಯಮಗಳು ಹುಟ್ಟಿಕೊಂಡು ಯಂತ್ರಗಳಿಂದ ದೊಡ್ಡ ಪ್ರಮಾಣದ ಉತ್ಪಾದನೆಯಿಂದಾಗಿ ಅಪಾರ ಯುವಜನರಿಂದ ಉದ್ಯೋಗ ಕಸಿದುಕೊಂಡದ್ದು ಸತ್ಯ.

(ಗ) **ಅಪಾರದರ್ಶಕ ವ್ಯವಸ್ಥೆ :**

ನಮ್ಮ ದೇಶದ ಮತ್ತೊಂದು ನ್ಯೂನ್ಯತೆಯೆಂದರೆ ಗ್ರಾಮೀಣ ಸಮುದಾಯಕ್ಕೆ ಮಾಹಿತಿ ನಿರಾಕರಣೆಯಾಗಿದೆ. ಭಾರತವು ಮಾಹಿತಿ ತಂತ್ರಜ್ಞಾನ ವ್ಯವಸ್ಥೆಯಲ್ಲಿ ಮುಂದೆ ಇದ್ದರೂ ಸಹಿತ ಗ್ರಾಮ ಮಟ್ಟದಲ್ಲಿ ಹೆಚ್ಚಿನ ಕೊರತೆ ಅನುಭವಿಸುತ್ತದೆ. ಭಾರತದ ಗ್ರಾಮಗಳು ಆರ್ಥಿಕ-ಬಡತನದಿಂದ ಅಶಕ್ತವಾಗುತ್ತಿವೆ. ಅಲ್ಲದೆ, ಮಾಹಿತಿ ನಿರಾಕರಣೆಯಿಂದಲೂ ಸಹಿತ ಗ್ರಾಮೀಣ ಸಮಾಜ ಸುಧಾರಣೆಗೊಳ್ಳುವದನ್ನು ತಡೆಯುತ್ತದೆ.

(ಹ) **ಸರ್ಕಾರದ ಧೋರಣೆಗಳು :**

ಸ್ವರ್ಣ ಜಯಂತಿ ಸ್ವ-ರೋಜಗಾರ ಯೋಜನೆಯಂತಹ ಸರ್ಕಾರದ ಧೋರಣೆಗಳನ್ನು ಹಾಗೂ ಕಾರ್ಯಕ್ರಮಗಳನ್ನು ಉಪಕ್ರಮಗೊಳಿಸಿದರೂ ಸಹ, ಅವುಗಳು ಗ್ರಾಮೀಣ ಬಡಜನರ ಹಿತ ಕಾಪಾಡುವಲ್ಲಿ ವಿಫಲವಾಗಿವೆ. ಜನರು ಅಸಂಘಟಿತರಾಗಿರುವದರಿಂದ ಸಹಜವಾಗಿ ತುಳಿತಕ್ಕೆ ಸಿಲುಕಿ ದಮನಕ್ಕೆ ಬಲಿಯಾಗುವಂತಾಗಿದೆ. ಕೆಲವೊಂದು ಪ್ರಕರಣಗಳಲ್ಲಿ ಬಡ ಜನತೆಗೆ ದೊರಕಬಹುದಾದುದ್ದನ್ನು ದೊರಕದಂತೆ ಮಾಡಿ, ಹಿಂಸೆ ಕೊಡುವವರು ಕಂಡು ಬರುತ್ತಾರೆ.

ಬಡಜನತೆಯ ಬಯಕೆಗಳನ್ನು ಸಂಪೂರ್ಣವಾಗಿ ಪೂರೈಸಲು ಸಾಧ್ಯವಾಗುವಷ್ಟು ಸರ್ಕಾರದ ಬಜೆಟ್‌ಗಳಲ್ಲಿ ಸಂಪನ್ಮೂಲ ಹಂಚಿಕೆಯಾಗುತ್ತಿಲ್ಲ. ಒಂದು ಕಡೆ ಜನರು ಒಂದು ನಿರ್ದಿಷ್ಟ ಜನರಿಂದ ಶೋಷಣೆಗೊಳಪಡುತ್ತಿದ್ದಾರೆ. ಇನ್ನೊಂದೆಡೆ ಹಲವಾರು ಹಂತಗಳಲ್ಲಿನ ಅಧಿಕಾರಿಗಳ ನಿರ್ಲಕ್ಷಗಳಿಂದ ಬಳಲುತ್ತಿದ್ದಾರೆ. ಇಂತಹ ಜನರ ಭಾವಾವೇಶದ ಮಾತುಗಳಿಗೆ ಸರ್ಕಾರವು ಕವಡೆ ಕಾಸಿನ ಕಿಮ್ಮತ್ತನ್ನು ನೀಡದೇ ತೋರಿಕೆಗಾಗಿ ಸ್ಪಂದಿಸುತ್ತದೆ. ಯಾವುದಕ್ಕೂ ಸಾಲಲಾರದಂತಹ ಮತ್ತು ಕೀಳು ಪ್ರಚಾರಕ್ಕಾಗಿ ಸೀರೆ, ಧೋತರ, ಪಂಚೆಗಳನ್ನು ಹಂಚಿ ಹೆಸರು ಗಳಿಸಿಕೊಳ್ಳುತ್ತಾರೆ. ಇಂತಹ ಯೋಜನೆಗಳು ಸಾಮಾಜಿಕ ಉದ್ದೇಶಗಳಿಗಿಂತಲೂ ಹೆಚ್ಚಾಗಿ ರಾಜಕೀಯ ಕಾರಣಗಳಿಂದ ನಡೆಸಲ್ಪಡುತ್ತಿವೆ. ಮೇಲಾಗಿ ಸರ್ಕಾರವೆಂದರೆ ಅಸಂಖ್ಯಾತ ನಿಯಮ-ನಿಯಂತ್ರಣಗಳಿಂದ ನಡೆಯುವ ದೈತ್ಯ ಯಂತ್ರವಾಗಿದೆ. ದೇಶವು ಅಧಿಕಾರಿ ಶಾಹಿಗಳಿಂದ ಮತ್ತು ವ್ಯವಸ್ಥೆಯಲ್ಲಿನ ದೋಷಗಳಿಂದಾಗಿ ಸಂಪದ್ಭರಿತವಾಗಿದ್ದರೂ

ಸಹ ಸರ್ಕಾರದ ಯೋಜನೆಗಳ ಲಾಭವು ಸಮಾಯಾನುಸಾರ, ಸಂಪೂರ್ಣವಾಗಿ ಮತ್ತು ನ್ಯಾಯಯುತವಾಗಿ ತಲುಪಬೇಕಾದ ಬಡಜನತೆಗೆ ಲಭಿಸುತ್ತಿಲ್ಲ. ಭಾರತವು ಪ್ರಗತಿಯಾಗುತ್ತಿದೆ. ಆದರೆ ನಿಧಾನವಾಗಿ ಮತ್ತು ದುರ್ಬಲವಾಗಿ ಸಾಗುತ್ತಿದೆ. ಗ್ರಾಮೀಣ ಬಡಜನತೆಯನ್ನು ಮೇಲೆತ್ತಲು ಸೆಣಸಾಡುವ ಶಕ್ತಿಗಳಿದ್ದಂತೆಯೇ ಪ್ರಗತಿಯನ್ನು ತಡೆಯುವ ಪ್ರತಿಯಾದ ಅಪಾಯಗಳು ಇವೆ.

**(ಐ) ರಾಜಕೀಯ ಅತಂತ್ರತೆ :**

ಗ್ರಾಮೀಣ ಆರ್ಥಿಕ ಬೆಳವಣಿಗೆಗೆ ಅತಂತ್ರ ರಾಜಕೀಯವು ಬಹುದೊಡ್ಡ ಗಂಡಾಂತರವಾಗಿದೆ. ರಾಜಕಾರಣಿಗಳ ತಿಕ್ಕಾಟದಿಂದಾಗಿ, ೧೯೯೬ ಮತ್ತು ೧೯೯೯ರ ಅಲ್ಪಾವಧಿಯಲ್ಲಿ ದೇಶವು ಮೂರು ಲೋಕಸಭೆಯ ಚುನಾವಣೆಗಳನ್ನು ಎದುರಿಸಬೇಕಾಗಿದ್ದು ಅತಂತ್ರತೆಗೆ ಹಿಡಿದ ಕನ್ನಡಿಯಾಗಿದೆ. ಅತಂತ್ರ ಸಂಸತ್ತು ಗ್ರಾಮೀಣ ಜನರ ಜೀವನ ಸುಧಾರಣೆಯ ಯೋಜನೆಗಳೆಡೆಗೆ ಗಮನ ಹರಿಸಲು ಸಾಧ್ಯವಾಗುತ್ತಿಲ್ಲ.

ಸಮಕಾಲಿನ ಸಾಮಾಜಿಕ–ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವದರಿಂದ ಮತ್ತು ಪ್ರಮುಖ ರಂಗಗಳಾದ–ಸಾರ್ವಜನಿಕ ಮತ್ತು ಖಾಸಗಿ ರಂಗಗಳ ಮಧ್ಯೆ ಏರ್ಪಟ್ಟಿರುವ ಬೃಹತ್ ಕಂದಕವನ್ನು ಭರಿಸುವ ಕೈಂಕರ್ಯದಿಂದ ಅದ್ಭುತ ಶಕ್ತಿಯಾಗಿ ಸರ್ಕಾರೇತರ ಸಂಸ್ಥೆಗಳು ವ್ಯವಸ್ಥೆಯಲ್ಲಿ ಹುಟ್ಟಿ ಕೊಂಡಿವೆ. ಸರ್ಕಾರೇತರ ಸಂಸ್ಥೆಗಳನ್ನು ತೃತೀಯ ರಂಗವೆಂದು ಪರಿಗಣಿಸುತ್ತಿದ್ದು, ಅವುಗಳು ಪ್ರಚಲಿತ ಮಹಿಳಾ ಸಬಲೀಕರಣ, ಆರೋಗ್ಯ, ಪರಿಸರ, ಶಿಕ್ಷಣ, ಸಾಂಸ್ಕೃತಿಕ, ಗ್ರಾಮೀಣಾಭಿವೃದ್ಧಿ, ಮಾನವ ಹಕ್ಕುಗಳು ಮುಂತಾದ ಸವಾಲುಗಳೆಡೆಗೆ ಲಕ್ಷ್ಯ ಹಾಕುತ್ತಿವೆ. ಸಾಮಾಜಿಕ ಬದಲಾವಣೆ ಮತ್ತು ಅವಕಾಶ ವಂಚಿತ ಅಸಂಖ್ಯಾತ ಜನತೆಯನ್ನು ಮೇಲೆತ್ತುವ ಪ್ರಯತ್ನಗಳೇ ಅವುಗಳ ಧ್ಯೇಯವಾಗಿದೆ. ಅಭಿವೃದ್ಧಿ ಉತ್ತೇಜಿಸುವಲ್ಲಿ ಈ ಸಂಸ್ಥೆಗಳು ಮಹತ್ವದ ಪಾತ್ರ ವಹಿಸಬಯಸುತ್ತವೆ. ವ್ಯವಸ್ಥೆಯ ಉನ್ನತ ಸ್ಥಾನದಲ್ಲಿರುವ ಅಧಿಕಾರಿಗಳು ಅಧಿಕಾರ ಚಲಾಯಿಸುವದನ್ನು ಪರಿಶೀಲಿಸುವಲ್ಲಿ 'ಸರ್ಕಾರೇತರ ಸಂಸ್ಥೆ'ಗಳು ಸೆಣಸುತ್ತಿವೆ. ಸಮಾಜದ ಎಲ್ಲ ಸ್ತರಗಳಲ್ಲಿರುವ ಸಮಸ್ಯೆಗಳೆಡೆಗೆ ಧ್ವನಿ ಎತ್ತುವ ಜನರಿಗೆ ಬೆಂಬಲ ನೀಡುವಂತಹ ಕಾರ್ಯದಿಂದ ಅವರ ನೈತಿಕ ಶಕ್ತಿಯ ವಾತಾವರಣ ವರ್ಧಿಸುತ್ತಿದೆ. ಹೀಗೆ ಜನರ ವಿರೋಧದ ಚಳುವಳಿಗೆ ಯುಕ್ತವಾದ ಸುಸಂಬಂಧಿತ ಮತ್ತು ಸಂಘಟಿತ ಶಕ್ತಿಯನ್ನು ನಿರ್ಮಿಸುತ್ತಿವೆ.

ಸರ್ಕಾರೇತರ ಸಂಸ್ಥೆಗಳು ಬದಲಾವಣೆಯ ವಾಹಕಗಳೆಂದು ಸಾಕಷ್ಟು ಗಮನ ಸೆಳೆಯುತ್ತಿವೆ. ಸರ್ಕಾರೇತರ ಸಂಸ್ಥೆಗಳು ಪ್ರಗತಿ ವಂಚಿತ ಭಾಗಗಳನ್ನು ತಲುಪುವಲ್ಲಿ ಸದಾವಕಾಶವಿರುವ ಕೆಲ

ಅಧ್ಯಯನ ನಡೆಸಿ ಅವುಗಳಿಂದ ನವೀನತೆಯನ್ನು ಪ್ರಚುರ ಪಡಿಸುವ ಬಲವಿದೆಯೆಂದು ಅಭಿವೃದ್ಧಿಪರ ಚಿಂತಕರು ಹೇಳಿದ್ದಾರೆ. ಅಭಿವೃದ್ಧಿ ಹೊಂದುತ್ತಿರುವ ಸಾಕಷ್ಟು ದೇಶಗಳಲ್ಲಿ ಬಡವರನ್ನು ತಲುಪಲು ಸರ್ಕಾರದ ಕಾರ್ಯಕ್ರಮಗಳು ಮುಖ್ಯ ತಂತ್ರವಾಗಿದ್ದು, ಅವುಗಳ ಪರಿಣಾಮ ತೃಪ್ತಿಕರವಾಗಿಲ್ಲ. ಸಹಾಯ ಬಯಸುವ ಬಡಜನರ ಸರ್ವತೋಮುಖ ಬೆಳವಣಿಗೆಗೆ ಸರ್ಕಾರದ ಹೋರಾಟ ನಡೆದೇ ಇದೆ. ಆದರೆ, ಜನತೆಯ ಮುಕ್ತ ಮನಸ್ಸಿನ ಭಾಗವಹಿಸುವಿಕೆಯು ಇಲ್ಲದಿರುವದರಿಂದ ಸರ್ಕಾರದ ಎಲ್ಲಾ ಧೋರಣೆಗಳು ಫಲ ನೀಡುತ್ತಿಲ್ಲ. ಸರ್ಕಾರದ ಆಡಳಿತದ ಕಠಿಣತೆಗಳ ಬದಲಾಗಿ ಹೊಂದಾಣಿಕೆಯ ನಿರ್ವಹಣೆ, ಸ್ಥಳೀಯ ಬೇಡಿಕೆಗಳಿಗೆ ಸ್ಪಂದಿಸುವಿಕೆ ಮತ್ತು ಬದ್ಧ ಮುಂದಾಳತ್ವದಂತಹ ಶ್ರೇಷ್ಠತೆಗಳಿಂದ ಅಭಿವೃದ್ಧಿ ಕಾರ್ಯಗಳಲ್ಲಿ ಸರ್ಕಾರಗಳಿಗಿಂತ ಸರ್ಕಾರೇತರ ಸಂಸ್ಥೆಗಳ ಪಾತ್ರ ಪ್ರಾಮುಖ್ಯವಾಗಿದ್ದು ಕಂಡುಬರುತ್ತದೆ. ಬಡಜನತೆಯನ್ನು ತಲುಪಲು ಈ ಮೂರು ಅಂಶಗಳು ಬಹಳ ಮುಖ್ಯವಾಗುತ್ತವೆ. **ಸರ್ಕಾರೇತರ** ಎನ್ನುವ ಶಬ್ದವೇ ಕಾರ್ಯಗಳಲ್ಲಿನ ಹೊಂದಾಣಿಕೆಯ ಅಂಶವನ್ನು ಎತ್ತಿ ತೋರಿಸುತ್ತದೆ. ಏಕೆಂದರೆ, ತಮ್ಮ ಯೋಜನೆಗಳನ್ನು ಕಾರ್ಯಗತಗೊಳಿಸಲು ಸರ್ಕಾರದ ಹಣಕಾಸಿನ ನೆರವು ಪಡೆಯುತ್ತಿಲ್ಲ. ಆದರೆ, ಸರ್ಕಾರೇತರ ಸಂಸ್ಥೆಗಳು ಸರ್ಕಾರದ ಯೋಜನೆಗಳೊಂದಿಗೆ ಸಹಯೋಗ ಹೊಂದಲಾಗದೆಂದು ಅರ್ಥವಲ್ಲ! ಭಾರತದಲ್ಲಿ ಸ್ವಯಂ ಸೇವಾ ಸಂಸ್ಥೆಗಳನ್ನು ಮತ್ತು ಸರ್ಕಾರೇತರ ಸಂಸ್ಥೆಗಳನ್ನು ಒಂದೇ ಅರ್ಥದಲ್ಲಿ ಬಳಸಲಾಗುತ್ತದೆ. ಭಾರತದಲ್ಲಿನ ಹಲವು ಸ್ವ-ಸೇವಾ ಸಂಸ್ಥೆಗಳು ಸರ್ಕಾರದಿಂದ ಪ್ರಾಯೋಜಿತಗೊಂಡು ಹಣಕಾಸು-ನಿಧಿಯನ್ನು ಪಡೆಯುತ್ತವೆ.

**೧.೪ ಸಂಶೋಧನೆಯ ಪರಿಕಲ್ಪನೆ :**

ಎಲ್ಲ ವೈಜ್ಞಾನಿಕ ಪ್ರಯತ್ನಗಳ ಮೂಲ ಗುರಿಯೆಂದರೆ ವಿದ್ಯಮಾನವನ್ನು ವಿವರಿಸುವದು, ಮುಂದಾಲೋಚಿಸುವದು ಮತ್ತು ನಿಯಂತ್ರಿಸುವದಾಗಿದೆ. ಎಲ್ಲ ವರ್ತನೆಗಳು ಮತ್ತು ಘಟನೆಗಳು ಸುವ್ಯವಸ್ಥಿತ ಮತ್ತು ಸಂಶೋಧಿಸಬಲ್ಲ ಕಾರಣಗಳನ್ನು ಹೊಂದಿರುತ್ತವೆಯೆಂಬ ಗ್ರಹಿಕೆಯ ಮೇಲೆ ಈ ಗುರಿಯು ಅವಲಂಬಿಸಿದೆ. ಗುರಿಯನ್ನು ಬೆನ್ನಟ್ಟುವುದರಿಂದ ಜ್ಞಾನ ವೃದ್ಧಿಸುವಿಕೆ, ಮತ್ತು ಸಿದ್ಧಾಂತವೊಂದರ ಹುಟ್ಟುವಿಕೆ ಮತ್ತು ಪರೀಕ್ಷೆಗಳು ನಡೆಯುತ್ತವೆ. ವ್ಯವಹಾರ್ಯ ಸಿದ್ಧಾಂತವು ಹಲವಾರು ವಿದ್ಯಮಾನಗಳನ್ನು ವಿವರಿಸುತ್ತಾ ವೈಜ್ಞಾನಿಕ ಪ್ರಗತಿಗೆ ನಾಂದಿಯಾಗುತ್ತದೆ.

ತಜ್ಞರು ಅಭಿಪ್ರಾಯಿಸಿದಂತೆಯೇ ಸಂಶೋಧನೆಯು ಒಂದು ಔಪಚಾರಿಕ ಪದ್ಧತಿಯಾಗಿದ್ದು, ಸಮಸ್ಯೆಯ ಅಧ್ಯಯನವೊಂದಕ್ಕೆ ವೈಜ್ಞಾನಿಕ ಪದ್ಧತಿಯನ್ನು ವ್ಯವಸ್ಥಿತವಾಗಿ ಅನ್ವಯಿಸುವದೆಂದು ಅಭಿಪ್ರಾಯಿಸಿದ್ದಾರೆ. ಸಂಶೋಧನೆಯು ಒಂದು ಉದ್ದೇಶ ಪ್ರೇರಿತವಾಗಿದ್ದು, ಯಥಾವತ್ತಾಗಿ

ಕಟ್ಟುಪಾಡುಗಳೆಡೆಗೆ ನಿಷ್ಪಕ್ಷಪಾತ ಅನ್ವೇಷಣೆಯಾಗಿದೆ. ಸಂಶೋಧನಾ ವಿಧಾನವೆಂದರೆ ದತ್ತಾಂಶದ ಸಂಗ್ರಹಣೆ ಮತ್ತು ವಿಶ್ಲೇಷಣೆಗಾಗಿ ಅಳವಡಿಸಿದ ಒಟ್ಟು ಕಾರ್ಯಾಚರಣೆಯ ಯೋಜನೆಯಾಗಿದೆ. ಈ ಗುರಿಯ ಸಾಧನೆಗೆ ಅಳವಡಿಸಿದ ಯೋಜನೆಯು ಸಂಶೋಧನೆಯ ವಿನ್ಯಾಸವಾಗಿದೆ.

ಸಂಶೋಧನಾ ವಿಧಾನ–ವಿನ್ಯಾಸವು ವಿಜ್ಞಾನದ ಒಂದು ಅವಶ್ಯಕ ಅಂಶವಾಗಿದೆ. ಒಂದು ವೈಜ್ಞಾನಿಕ ವಿವರಣೆಯನ್ನು ರಚಿಸಲು ಪದ್ದತಿಯಾಗಿದೆ. ಸಾಮಾಜಿಕ ವಿದ್ಯಮಾನಗಳ ತನಿಖೆಗಳಲ್ಲಿ ಅಳವಡಿಸಿದ ಪದ್ಧತಿಗಳು ವೈಜ್ಞಾನಿಕ, ನಂಬಲರ್ಹ ಮತ್ತು ನಿಖರವಾದದ್ದೆಂದು ಸಾಧಿಸುವದೇ ಸಂಶೋಧನಾ ವಿಧಾನವಾಗಿದೆ.

ಒಂದು ವೈಜ್ಞಾನಿಕ ಪದ್ಧತಿಯು ವೀಕ್ಷಣೆಯನ್ನಾಧರಿಸಿ ಪ್ರಕಲ್ಪನೆಯನ್ನು ಪರಿಚಯಿಸುವದು ಸೂಚಿತಾರ್ಥಗಳನ್ನು ತರ್ಕದಿಂದ ತಲುಪವದು ಮತ್ತು ಪ್ರಕಲ್ಪನೆಯನ್ನು ದೃಢಪಡಿಸುವ ಅಥವಾ ತಿರಸ್ಕರಿಸುವದನ್ನು ಹೊಂದಿರುತ್ತದೆ. ವೈಜ್ಞಾನಿಕ ಪದ್ಧತಿಯಲ್ಲಿ ಅನುಕ್ರಮವಾಗಿ ಪಾಲಿಸಬೇಕಾದ ರೀತಿ–ನೀತಿಗಳು ಇರುತ್ತವೆ. ಅದರಲ್ಲಿ ಮುಖ್ಯವಾದವುಗಳು

- ಸಮಸ್ಯೆಯ ಆಯ್ಕೆ ಮತ್ತು ವ್ಯಾಖ್ಯಾನಿಸುವುದು
- ಸಂಶೋಧನಾ ರೀತಿ – ನೀತಿಯನ್ನು ಕಾರ್ಯರೂಪಗೊಳಿಸುವುದು
- ದತ್ತಾಂಶದ ವಿಶ್ಲೇಷಣೆ
- ಸಾರಾಂಶಗೊಳಿಸಿ, ಉಪಸಂಹಾರ ನೀಡುವುದು

ಒಟ್ಟಿನಲ್ಲಿ, ಸಂಶೋಧನಾ ವಿನ್ಯಾಸವು ಯಾವುದೋ ಒಂದು ಅಧ್ಯಯನದ ಮೂಲ ಕಾರ್ಯಯೋಜನೆಯ ತಂತ್ರವಾಗಿದೆ. ಅಧ್ಯಯನದ ಕೊನೆಯಲ್ಲಿ ನೀಡುವ ಉಪಸಂಹಾರದ ಮೇಲೆ ಭವಿಷ್ಯದ ಮಾಹಿತಿಯು ಹೊರಹೊಮ್ಮುತ್ತದೆ ಮತ್ತು ಸೃಷ್ಟಿಗೊಳ್ಳುತ್ತದೆ.

**೧.೫ ಸಂಶೋಧನೆಯ ಉದ್ದೇಶಗಳು :**

ಪ್ರಸ್ತುತ ಅಧ್ಯಯನವು ಬೆಳಗಾವಿ ಜಿಲ್ಲೆಯಲ್ಲಿನ ಆಯ್ದ ಸರ್ಕಾರೇತರ ಸಂಸ್ಥೆಗಳ ಕೊಡುಗೆಯನ್ನು ಪರಿಶೀಲಿಸುವ ಕ್ಷೇತ್ರವನ್ನು ಒಳಗೊಂಡಿದೆ. ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳು ಹೆಚ್ಚಿನ ಸಂಖ್ಯೆಯಲ್ಲಿ ಅಭಿವೃದ್ಧಿಯ ಮುಂಚೂಣಿಯಲ್ಲಿದ್ದರೂ ಸಹ, ಈ ಅಧ್ಯಯನದಲ್ಲಿ ಕೇವಲ ಆಯ್ದ ಕೆಲವು ಸರ್ಕಾರೇತರ ಸಂಸ್ಥೆಗಳನ್ನು ವಿಮರ್ಶೆಗೊಳಪಡಿಸುತ್ತಾ, ಅವುಗಳ ಕೊಡುಗೆಗಳನ್ನು ಎತ್ತಿ ತೋರಿಸುವದಾಗಿದೆ.

ಜೊತೆಗೆ ಸರ್ಕಾರೇತರ ಸಂಸ್ಥೆಗಳ ಆಡಳಿತದ ಗುಣಮಟ್ಟದ ಅಧ್ಯಯನವನ್ನು ಒಳಗೊಂಡಿರುತ್ತದೆ. ಮತ್ತು ಅವುಗಳು ಲಭ್ಯಗೊಳಿಸುವ ಸೇವೆಗಳ ಚಿತ್ರಣ ನೀಡಬಯಸುತ್ತಾ, ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ವಿವರಿಸುವ ದೃಷ್ಟಿಯಿಂದ, ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ. ಅವು –

೧) ಸರ್ಕಾರೇತರ ಸಂಸ್ಥೆಗಳ ಬೆಳವಣಿಗೆಯ ಚಿತ್ರಣ ನೀಡುವುದು.

೨) ಸರ್ಕಾರೇತರ ಸಂಸ್ಥೆಗಳ ಕುರಿತಾದ ಸಾಹಿತ್ಯ ಅವಲೋಕನ ಮಾಡುವುದು.

೩) ಆಯ್ದ ಸರ್ಕಾರೇತರ ಸಂಸ್ಥೆಗಳ ಅಭಿವೃದ್ಧಿ ಕೊಡುಗೆಗಳ ವಿವಿಧ ಆಯಾಮಗಳನ್ನು ವಿಶ್ಲೇಷಿಸುವುದು.

೪) ಆಯ್ದ ಸರ್ಕಾರೇತರ ಸಂಸ್ಥೆಗಳ ಕಾರ್ಯ ವೈಖರಿ ಕುರಿತು ಪ್ರತಿಸ್ಪಂದಿಗಳ ಅಭಿಪ್ರಾಯ ಸಂಗ್ರಹಿಸುವುದು.

೫) ಆಯ್ದ ಪ್ರತಿಯೊಂದು ಸರ್ಕಾರೇತರ ಸಂಸ್ಥೆಗಳ ವಿವಿಧ ಆಯಾಮಗಳ ಬಗ್ಗೆ ನಡೆಸಿದ ಕ್ಷೇತ್ರ ಅಧ್ಯಯನದ ವಿಶ್ಲೇಷಣೆ.

೬) ವಿಶ್ಲೇಷಣೆಯ ಫಲಿತಗಳನ್ನು ಆಧರಿಸಿ ಸಲಹೆಗಳನ್ನು ನೀಡುವುದು.

**೧.೬ ಅಧ್ಯಯನದ ವಿಧಾನ:**

ಸಂಶೋಧನಾ ವಿಧಾನ–ವಿನ್ಯಾಸವು ವಿಜ್ಞಾನದ ಒಂದು ಅತ್ಯವಶ್ಯಕ ಅಂಶವಾಗಿದೆ. ಒಂದು ವೈಜ್ಞಾನಿಕ ವಿವರಣೆಯನ್ನು ರಚಿಸಲು ಪದ್ಧತಿಯಾಗಿದೆ. ಸಾಮಾಜಿಕ ವಿದ್ಯಮಾನಗಳ ತನಿಖೆಗಳಲ್ಲಿ ಅಳವಡಿಸಿದ ಪದ್ಧತಿಗಳು ವೈಜ್ಞಾನಿಕ, ನಂಬಲರ್ಹ ಮತ್ತು ನಿಖರವಾದದ್ದೆಂದು ಸಾಧಿಸುವುದೇ ಸಂಶೋಧನಾ ವಿಧಾನವಾಗಿದೆ.

ಒಂದು ವೈಜ್ಞಾನಿಕ ಪದ್ಧತಿಯು, ವೀಕ್ಷಣೆಯನ್ನಾಧರಿಸಿ ಪ್ರಕಲ್ಪನೆಯನ್ನು ಪರಿಚಯಿಸುವದು ಸೂಚಿತಾರ್ಥಗಳನ್ನು ತರ್ಕದಿಂದ ತಲುಪುವದು ಮತ್ತು ಪ್ರಕಲ್ಪನೆಯನ್ನು ದೃಢಪಡಿಸುವ ಅಥವಾ ತಿರಸ್ಕರಿಸುವದನ್ನು ಹೊಂದಿರುತ್ತದೆ. ವೈಜ್ಞಾನಿಕ ಪದ್ಧತಿಯಲ್ಲಿ ಅನುಕ್ರಮವಾಗಿ ಪಾಲಿಸಬೇಕಾದ ರೀತಿ–ನೀತಿಗಳು ಇರುತ್ತವೆ. ಅದರಲ್ಲಿ ಮುಖ್ಯವಾದವುಗಳೆಂದರೆ,

- ಸಮಸ್ಯೆಯ ಆಯ್ಕೆ ಮತ್ತು ವ್ಯಾಖ್ಯಾನಿಸುವುದು : ದತ್ತಾಂಶಗಳ ಸಂಗ್ರಹ ವಿಶ್ಲೇಷಣೆಯ ಮೂಲಕ ಪರೀಕ್ಷಿಸಬಹುದಾದ ಅಥವಾ ಉತ್ತರಿಸಬಹುದಾದ ಸಂಶೋಧಕನ ಅಭಿರುಚಿಯ ಪ್ರಶ್ನೆ ಅಥವಾ ಪ್ರಕಲ್ಪನೆಯೇ 'ಸಮಸ್ಯೆ'ಯೆಂದು ಕರೆಯಲ್ಪಡುತ್ತದೆ.

- ಸಂಶೋಧನಾ ರೀತಿ – ನೀತಿಯನ್ನು ಕಾರ್ಯರೂಪಗೊಳಿಸುವದು : ರೀತಿ – ನೀತಿಗಳಲ್ಲಿ ಅಳತೆಗೊಳಿಸಬಹುದಾದ ಪದ್ಧತಿಗಳ ಅಭಿವೃದ್ಧಿ ಅಥವಾ ಆಯ್ಕೆಯನ್ನು ಕಂಡುಕೊಳ್ಳಬಹುದು. ಅಧ್ಯಯನದ ವಿನ್ಯಾಸವು ಅಧ್ಯಯನಕ್ಕಾಗಿ ಅನುಸರಿಸಬೇಕಾದ ರೀತಿ – ಪದ್ಧತಿಯನ್ನು ಸೂಚಿಸುತ್ತದೆ.

- ದತ್ತಾಂಶದ ವಿಶ್ಲೇಷಣೆ : ಇದು ಸಂಖ್ಯಾಶಾಸ್ತ್ರದ ಯಾವುದಾದರೊಂದು ಅಥವಾ ಹಲವಾರು ತಂತ್ರಗಳ ಅಳವಡಿಕೆಯು ವಿಶ್ಲೇಷಣೆಯಲ್ಲಿ ಕಂಡುಬರುತ್ತದೆ. ದತ್ತಾಂಶ ವಿಶ್ಲೇಷಣೆಯು ಸಂಶೋಧನೆಯ ಪ್ರಕಲ್ಪನೆಯನ್ನು ಪರೀಕ್ಷಿಸುವ ಅಥವಾ ಸಂಶೋದಕನ ಪ್ರಶ್ನೆಗಳಿಗೆ ಉತ್ತರಿಸುವದನ್ನು ಹೊಂದಿರುತ್ತದೆ.

- ಸಾರಾಂಶಗೊಳಿಸಿ, ಉಪಸಂಹಾರ ನೀಡುವದು: ದತ್ತಾಂಶ ವಿಶ್ಲೇಷಣೆಯನ್ನಾಧರಿಸಿ ಉಪಸಂಹಾರ ನೀಡಲಾಗುತ್ತದೆ. ಮೂಲ ಪ್ರಕಲ್ಪನೆ ಅಥವಾ ಪ್ರಶ್ನೆಯನ್ನು ಅನುಲಕ್ಷಿಸಿ ಉಪಸಂಹಾರ ಹೇಳಬೇಕು. ಉಪಸಂಹಾರವು ಚಿಕಿತ್ಸಕವಾಗಿರಬೇಕು. ಉದಾಹರಣೆಗಾಗಿ – ಸಂಶೋಧನ ಪ್ರಕಲ್ಪನೆಯು ಬೆಂಬಲ ಹೊಂದಿದೆಯೇ ಅಥವಾ ಇಲ್ಲವೋ ಎಂಬುದನ್ನು ಸೂಚಿಸಬೇಕು.

ಒಟ್ಟಿನಲ್ಲಿ, ಸಂಶೋಧನಾ ವಿನ್ಯಾಸವು ಯಾವುದೋ ಒಂದು ಅಧ್ಯಯನದ ಮೂಲ ಕಾರ್ಯಯೋಜನೆಯ ತಂತ್ರವಾಗಿದೆ. ಅಧ್ಯಯನದ ಕೊನೆಯಲ್ಲಿ ನೀಡುವ ಉಪಸಂಹಾರದ ಮೇಲೆ ಭವಿಷ್ಯದ ಮಾಹಿತಿಯು ಹೊರಹೊಮ್ಮುತ್ತದೆ. ಸೃಷ್ಟಿಗೊಳ್ಳುತ್ತದೆ. ಆದ್ದರಿಂದ, ಸಾಕಷ್ಟು ಕಾಳಜಿಯಿಂದ ಮುತುವರ್ಜಿಯಿಂದ ಮತ್ತು ಅಸ್ಥೆವಹಿಸಿ ವೈಜ್ಞಾನಿಕ ವಿನ್ಯಾಸ ರೂಪಿಸಬೇಕು. ಅಧ್ಯಯನದಲ್ಲಿ ಎದುರಾಗಬಹುದಾದ ಎಲ್ಲ ಅಡೆತಡೆಗಳನ್ನು ಮತ್ತು ಕಠಿಣತೆಯನ್ನು ಮುಂಚಿತವಾಗಿ ಸೂಚಿಸಬೇಕು, ಅದಕ್ಕೆ ಸೂಕ್ತವಾದ ಮಾರ್ಗಗಳನ್ನು ತಿಳಿಸಬೇಕು. ಸಂಶೋಧನಾ ವಿನ್ಯಾಸವು ಅಧ್ಯಯನ ಉದ್ದೇಶವನ್ನು ಸಫಲಗೊಳಿಸುವ, ಅವಶ್ಯಕ ದತ್ತಾಂಶವನ್ನು ಸಂಗ್ರಹಿಸುವ ಮತ್ತು ವಿಶ್ಲೇಷಣೆಗೆ ಸೂಕ್ತ ತಂತ್ರಗಳ ಬಗ್ಗೆ ನಿರ್ದೇಶನಗಳನ್ನು ನೀಡಬೇಕು. ಇವುಗಳೆಲ್ಲವು ವ್ಯವಸ್ಥಿತವಾದ ಜೋಡಣೆಗಳನ್ನು ಸೂಚಿಸುತ್ತವೆ. ಆದ್ದರಿಂದ ನಿಖರವಾದ, ನೈಜವಾದ, ಮತ್ತು ಇತ್ತೀಚಿನ ಮಾಹಿತಿಯನ್ನು

ಸಂಗ್ರಹಿಸುವಂತಾಗಬೇಕು. ಕನಿಷ್ಠ ವೆಚ್ಚಗಳ ಮೂಲಕ ಕಡಿಮೆ ಅವಧಿಯಲ್ಲಿ ಕಾರ್ಯಕ್ಕಿಳಿಸಬಹುದಾದ ನಂಬಿಕೆಯ ಮಾರ್ಗಗಳನ್ನು ಸೂಚಿಸಬೇಕು.

ಪ್ರಸಕ್ತ ಅಧ್ಯಯನವು ಅನ್ವೇಷಕ ಸಂಶೋಧನೆಯಾಗಿದ್ದು, ಅದನ್ನು ಕೈಗೂಡಿಸಲು ಎರಡು ರೀತಿಯ ಮಾಹಿತಿ ಮತ್ತು ದತ್ತಾಂಶಗಳ ಸಂಗ್ರಹಣೆ ಅವಶ್ಯವೆನಿಸಿದಂತೆ ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳನ್ನು ಅವಲಂಬಿಸಲಾಗಿದೆ. ಈ ಅಧ್ಯಯನವು ಕ್ಷೇತ್ರ ಕಾರ್ಯ ಆಧಾರಿತ ಅಧ್ಯಯನವಾಗಿದೆ. ಸರ್ಕಾರೇತರ ಸಂಸ್ಥೆಗಳ ಕಾರ್ಯವೈಖರಿಯ ಸಾರ್ಥಕತೆಯ ಅಭಿಪ್ರಾಯಗಳನ್ನು ಸೇವೆ ಪಡೆದ ಸಾರ್ವಜನಿಕರಿಂದಲೇ ಸಂಗ್ರಹಿಸುವ ದೃಷ್ಟಿಯಿಂದ ಪ್ರಾಥಮಿಕ ಸಮೀಕ್ಷೆ ಪದ್ದತಿಯನ್ನು ಅಳವಡಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಒಟ್ಟು ಅಭಿವೃದ್ಧಿಯ ಐದು ಕ್ಷೇತ್ರಗಳನ್ನು ೧. ಆರೋಗ್ಯ ಕ್ಷೇತ್ರ ೨. ಶಿಕ್ಷಣ ಕ್ಷೇತ್ರ ೩. ಕಲೆ ಮತ್ತು ಸಾಂಸ್ಕೃತಿಕ ಚಟುವಟಿಕೆ ಕ್ಷೇತ್ರ ೪. ಮಹಿಳಾ ಸಬಲೀಕರಣ ಕ್ಷೇತ್ರ ಮತ್ತು ೫. ಗ್ರಾಮೀಣಾಭಿವೃದ್ದಿ ಕ್ಷೇತ್ರ ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು ಈ ಕ್ಷೇತ್ರಗಳಲ್ಲಿ ಪ್ರಸಿದ್ಧಿ ಪಡೆದ ಜಿಲ್ಲೆಯ ಒಂದೊಂದು ಸರ್ಕಾರೇತರ ಸಂಸ್ಥೆಗಳನ್ನು ಆಯ್ದುಕೊಳ್ಳಲಾಗಿದೆ. ೧. ಜೆ. ಜಿ. ಸಹಕಾರಿ ಆಸ್ಪತ್ರೆ, ಘಟಪ್ರಭಾ ೨. ಬೆಳಗಾವಿ ಸಮಗ್ರ ಗ್ರಾಮೀಣಾಭಿವೃದ್ಧಿ ಸಂಸ್ಥೆ (ಬರ್ಡ್ಸ್) ತುಕ್ಕಾನಟ್ಟಿ ೩. ಮಹಿಳಾ ಸಮಾಖ್ಯಾ ಕರ್ನಾಟಕ, ಬೆಳಗಾವಿ ೪. ಕರ್ನಾಟಕ ಲಿಂಗಾಯತ ಎಜ್ಯುಕೇಶನ್ (ಕೆಎಲ್ಇ) ಸಂಸ್ಥೆ, ಬೆಳಗಾವಿ ೫. ಭಾವಸಂಗಮ, ಗೋಕಾಕ, ಈ ಪ್ರತಿ ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ೧೦೦ ಜನ ಪ್ರತಿಸ್ಪಂದಿಗಳನ್ನು ಮತ್ತು ಎಲ್ಲಾ ಐದು ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಪಟ್ಟಂತೆ ಒಟ್ಟು ೫೦೦ ಜನ ಪ್ರತಿಸ್ಪಂದಿಗಳನ್ನು ಸಂಪರ್ಕಿಸಿ ಪ್ರಾಥಮಿಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ಪ್ರತಿಸ್ಪಂದಿಗಳನ್ನು ಯಾದೃಚ್ಚಿತ (ಸಿಂಪಲ್ ರ್‍ಯಾಂಡಮ್ ಸಾಂಪ್ಲಿಂಗ) ವಿಧಾನದ ಮೂಲಕ ಆಯ್ಕೆ ಮಾಡಲಾಗಿದೆ.

ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲು ಪೂರ್ವ ರಚಿತ ಪ್ರಶ್ನಾವಳಿಗಳನ್ನು ಬಳಸಿಕೊಳ್ಳಲಾಗಿದೆ ಮತ್ತು ಕೇಳಿದ ಪ್ರಶ್ನೆಗಳಿಗೆ ಪ್ರತಿಸ್ಪಂದಿಗಳು ನೀಡಿದ ಉತ್ತರಗಳನ್ನು ಅವರ ಸಮ್ಮುಖದಲ್ಲಿ ತುಂಬಿಕೊಡಲಾಗಿದೆ. ಸರ್ಕಾರೇತರ ಸಂಸ್ಥೆಗಳು ನೀಡುತ್ತಿರುವ ಸೇವೆಗಳ ಪ್ರಯೋಜನ ಪಡೆಯುವ ಜನರ ವೈಯಕ್ತಿಕ, ಜೀವನ ನಿರ್ವಹಣೆಯ ಮಾಹಿತಿಯು ಅವಶ್ಯಕವೆಂದು ಭಾವಿಸಿ, ಅದಕ್ಕೆ ಅನ್ವಯಿಸುವಂತಹ ಪ್ರಶ್ನೆಗಳನ್ನು, ಸರ್ಕಾರೇತರ ಸಂಸ್ಥೆಗಳ ಕೆಲಸದ ಬಗ್ಗೆ ತಿಳಿದುಕೊಳ್ಳುವ ಉದ್ದೇಶದಿಂದ ಪ್ರತ್ಯೇಕವಾಗಿ ತಲಾ ೨೦ ಪ್ರಶ್ನೆಗಳನ್ನು ಮತ್ತು ಆಯ್ಕೆ ಮಾಡಿದ ೫ ಕ್ಷೇತ್ರಗಳಿಗೆ ಸಂಬಂಧಿಸಿದ ಅಭಿಪ್ರಾಯ ಪಡೆಯಲು ವಿವಿಧ ದೃಷ್ಟಿಕೋನದ ೬೫ ಪ್ರಶ್ನೆಗಳು ಸೇರಿದಂತೆ, ಒಟ್ಟು ೧೦೫ ಪ್ರಶ್ನೆಗಳ ಮೂಲಕ ಮಾಹಿತಿ ಕಲೆ ಹಾಕಲಾಯಿತು.

ಹಾಗೆಯೇ, ಅನುಷಂಗಿಕ ಮಾಹಿತಿಯನ್ನು ಭಾವ ಸಂಗಮ – ವಜ್ರ ಸಂಭ್ರಮ, ಜೆ.ಜಿ. ಸಹಕಾರಿ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ ಘಟಪ್ರಭಾ ವಾರ್ಷಿಕ ವರದಿ ೨೦೦೭–೦೮ ರಿಂದ ೨೦೧೦–೧೧, ಮಹಿಳಾ ಸಮಾಖ್ಯಾ ವಾರ್ಷಿಕ ವರದಿ ೨೦೦೮–೦೯ ರಿಂದ ೨೦೧೦–೧೧, ಕೆ.ಎಲ್.ಇ ಸಂಪುಟ – ೧, ಬರ್ಡ್ಸ್ ವಾರ್ಷಿಕ ವರದಿ ೨೦೦೭–೦೮ ರಿಂದ ೨೦೧೦–೧೧, ಬೆಳಗಾವಿ ಜಿಲ್ಲಾ ಅಂಕಿ ಸಂಖ್ಯೆಗಳು ೨೦೧೦–೧೧, ಜನಗಣತಿ ವರದಿ – ೨೦೦೧ ರ ಮಾಹಿತಿಯನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಸಂಖ್ಯಾ ಶಾಸ್ತ್ರದ ಕೆಲವು ವಿಧಾನಗಳಾದ ಲಂಬಾಲೇಖಗಳು, ವೃತ್ತ ನಕ್ಷೆಗಳನ್ನು ಮತ್ತು ಶೇಕಡಾವಾರು ಪ್ರಮಾಣಗಳನ್ನು ಅಳವಡಿಸಲಾಗಿದೆ.

**೧.೭ ಅಧ್ಯಯನದ ವ್ಯಾಪ್ತಿ :**

ಅಧ್ಯಯನದ ಪೂರ್ವಸಿದ್ಧತೆಯಲ್ಲಿ ಕಂಡುಬರುವ ಆಶ್ಚರ್ಯಕರ ಸಂಗತಿಯೆಂದರೆ ಬೆಳಗಾವಿ ಜಿಲ್ಲೆಯೊಂದರಲ್ಲಿಯೇ ೨೦೦೦೦ ಕ್ಕೂ ಮಿಕ್ಕಿ ಸರ್ಕಾರೇತರ ಸಂಸ್ಥೆಗಳು ಕಾರ್ಯಗೈಯ್ಯುತ್ತಿದ್ದು, ಅವುಗಳಲ್ಲಿ ಹಲವಾರು ಸಂಸ್ಥೆಗಳು ನೋಂದಣಿ ಹೊಂದಿಲ್ಲವೆಂಬುದು ಗಮನಾರ್ಹ ಸಂಗತಿ. ಹೀಗಾಗಿ ಸಮಯದ ಅಭಾವ ಮಹತ್ವದ ಇತಿ–ಮಿತಿಯಾಗಿ, ಅಧ್ಯಯನದಲ್ಲಿ ಕೇವಲ ಐದು ಕ್ಷೇತ್ರಗಳ ಐದು ಸರ್ಕಾರೇತರ ಸಂಸ್ಥೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯ ಮಾಡುತ್ತಿರುವ ಸರ್ಕಾರೇತರ ಸಂಸ್ಥೆಗಳನ್ನು ಈ ರೀತಿ ವರ್ಗೀಕರಿಸಬಹುದು.

೧. ಆರೋಗ್ಯ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೨. ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೩. ಮಹಿಳಾ ಸಬಲೀಕರಣ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೪. ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೫. ಸಾಂಸ್ಕೃತಿಕ ಚಟುವಟಿಕೆ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೬. ಕಿರು ಹಣಕಾಸು ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೭. ವ್ಯಕ್ತಿತ್ವ ಅಭಿವೃದ್ಧಿ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೮. ಸಾಮಾಜಿಕ ಕಾಳಜಿ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೯. ಕ್ರೀಡಾ ಚಟುವಟಿಕೆ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೧೦. ಮಕ್ಕಳ ಅಭಿವೃದ್ಧಿ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

೧೧. ಪರಿಸರ ರಕ್ಷಣೆ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು

ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ವೈಶಿಷ್ಟ್ಯವೆಂದರೆ ನೋಂದಣಿರಹಿತವಾಗಿರುವದು ಮತ್ತು ಒಂದುಸಲ ನೋಂದಣಿ ಮಾಡಿಕೊಂಡಿರುವದು ಕಾನೂನಿನ ಪ್ರಕಾರ ನೋಂದಣಿಯಾದ ಸರ್ಕಾರೇತರ ಸಂಸ್ಥೆಗಳು ಪ್ರತಿ ವರ್ಷ ನೋಂದಣಿಯನ್ನು ನವೀಕರಣ ಮಾಡಿಕೊಳ್ಳಬೇಕಾಗುತ್ತದೆ. ಆದರೆ, ಬೆಳಗಾವಿ ಜಿಲ್ಲೆಯಲ್ಲಿ ನೋಂದಣಿಗೆ ಕಂಡುಬರುವ ಉತ್ಸಾಹ ನವೀಕರಣದಲ್ಲಿ ಕಂಡುಬರುವದಿಲ್ಲ.

ಈ ಅಧ್ಯಯನವು ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯಗೈಯ್ಯುತ್ತಿರುವ ಆಯ್ದ ಕೆಲವು ಸರ್ಕಾರೇತರ ಸಂಸ್ಥೆಗಳನ್ನು ಒಳಗೊಂಡಿರುತ್ತದೆ. ಈ ರೀತಿಯಾಗಿ ಆಯ್ದುಕೊಂಡ ಸರ್ಕಾರೇತರ ಸಂಸ್ಥೆಗಳು ತಾಲೂಕಿನದ್ಯಾಂತ ಪಸರಿಸಿದವುಗಳಾಗಿದ್ದು, ಆರೋಗ್ಯ ಕ್ಷೇತ್ರದಲ್ಲಿ ಜೆ. ಜಿ. ಸಹಕಾರಿ ಆಸ್ಪತ್ರೆ ಘಟಪ್ರಭಾ, ಶೈಕ್ಷಣಿಕ ಕ್ಷೇತ್ರದಲ್ಲಿ ಕೆಎಲ್ಇ ಸಂಸ್ಥೆ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಗೋಕಾಕದ 'ಭಾವಸಂಗಮ', ಮಹಿಳಾ ಸಬಲೀಕರಣದಲ್ಲಿ ಮಹಿಳಾ ಸಮಾಖ್ಯಾ ಬೆಳಗಾವಿ, ಇವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವುಗಳ ಜೊತೆಗೆ ಗ್ರಾಮೀಣ ಅಭಿವೃದ್ಧಿಯಲ್ಲಿ ತೊಡಗಿದ 'ಬರ್ಡ್ಸ್' ಸರ್ಕಾರೇತರ ಸಂಸ್ಥೆಯನ್ನು ಆಯ್ದುಕೊಳ್ಳಲಾಗಿದೆ.

ಬೆಳಗಾವಿ ಜಿಲ್ಲೆಯಾದ್ಯಂತ ನೆಲೆಸಿರುವ ಪ್ರತಿಸ್ಪಂದಿಗಳನ್ನು ಯಾವುದೇ ಪೂರ್ವಾಗ್ರಹ ಆಶಯ ಹೊಂದದೇ ಮಾದರಿಯಾಗಿ ಆಯ್ದುಕೊಳ್ಳಲಾಗಿದೆ. ಅದರಂತೆ, ಆರೋಗ್ಯ ಕ್ಷೇತ್ರದ ಅಧ್ಯಯನಕ್ಕಾಗಿ ಗೋಕಾಕ ತಾಲೂಕಿನ ಜನರನ್ನು ಪ್ರಾಥಮಿಕ ಪ್ರತಿಸ್ಪಂದಿಗಳನ್ನಾಗಿ, ಶಿಕ್ಷಣ ಕ್ಷೇತ್ರಕ್ಕಾಗಿ ಬೆಳಗಾವಿ ಜಿಲ್ಲೆಯಾದ್ಯಂತದ ಫಲಾನುಭವಿಗಳನ್ನು, ಸಾಂಸ್ಕೃತಿಕ ಕ್ಷೇತ್ರಕ್ಕಾಗಿ ಗೋಕಾಕ ತಾಲೂಕಿನ ಜನತೆಯನ್ನು, ಮಹಿಳಾ ಸಬಲೀಕರಣದ ಕ್ಷೇತ್ರಕ್ಕಾಗಿ ಜಿಲ್ಲೆಯ ಸೌದತ್ತಿ, ರಾಮದುರ್ಗ, ಗೋಕಾಕ ಮತ್ತು ಬೆಳಗಾವಿ ತಾಲೂಕುಗಳನ್ನು ಮತ್ತು ಗ್ರಾಮೀಣಾಭಿವೃದ್ಧಿಗಾಗಿ ಗೋಕಾಕ ತಾಲೂಕಿನ ಜನತೆಯನ್ನು ಆಯ್ದುಕೊಳ್ಳಲಾಗಿದೆ. ಮಾಹಿತಿದಾರರಿಂದ ಮಾಹಿತಿ ಸಂಗ್ರಹಣೆಯ ಸಂದರ್ಭದಲ್ಲಿ ಗರಿಷ್ಠಮಟ್ಟದ ಕಾಳಜಿ ವಹಿಸಲಾಗಿದೆ.

**೧.೮ ಅಧ್ಯಯನದ ಊಹೆಗಳು :**

ಯಾವುದೇ ಒಂದು ಸಂಶೋಧನಾ ಅಧ್ಯಯನವು ವಿಷಯದ ಸತ್ಯಾಸತ್ಯತೆಯನ್ನು ಪರಿಶೀಲನೆಗೊಳಪಡಿಸಿ ಪ್ರಕಟಪಡಿಸುವದಾಗಿದೆ. ಈ ಅಧ್ಯಯನದಲ್ಲಿ ಬೆಳಗಾವಿ ಜಿಲ್ಲೆಯಲ್ಲಿನ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಕೆಲವು ಊಹೆಗಳನ್ನು ಮಾಡಲಾಗಿದೆ. ಅವುಗಳೆಂದರೆ,

೧) ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜನಮುಖಿಯಾಗಿವೆ.

೨) ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜಿಲ್ಲೆಯ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ಹೊಂದಿದ್ದು ಸರ್ಕಾರಿ ಸಂಸ್ಥೆಗಳಿಗೆ ಮಾದರಿಯಾಗಿದೆ.

**೧.೯ ಅಧ್ಯಯನದ ಇತಿ-ಮಿತಿಗಳು :**

ಈ ಅಧ್ಯಯನವು ಬೆಳಗಾವಿ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಕೊಡುಗೆ ಒಳಗೊಂಡಿದ್ದರೂ ಸಹ, ಇದರಲ್ಲಿ ಕೆಳಗಿನ ಕ್ಷೇತ್ರಗಳನ್ನು ಅಧ್ಯಯನಗೊಳಪಡಿಸಿದೆ.

೧. ಆರೋಗ್ಯ
೨. ಶಿಕ್ಷಣ
೩. ಕಲೆ ಮತ್ತು ಸಂಸ್ಕೃತಿಕ ಚಟುವಟಿಕೆ
೪. ಮಹಿಳಾ ಸಬಲೀಕರಣ
೫. ಗ್ರಾಮೀಣಾಭಿವೃದ್ಧಿ

ನಿಜವಾಗಿ ಹೇಳಬೇಕೆಂದರೆ, ನಿರಂತರ ಅಭಿವೃದ್ಧಿಯು ಈ ಮೇಲೆ ಸೂಚಿಸಿದ ಐದು ಕ್ಷೇತ್ರಗಳಿಗೆ ಮಾತ್ರ ಸೀಮಿತಗೊಳ್ಳದೆ, ಇನ್ನೂ ಹಲವಾರು ಕ್ಷೇತ್ರದ ಅಭಿವೃದ್ಧಿಯಿಂದ ಸಾಧ್ಯವಾಗುತ್ತದೆ. ಸಮಯದ ಮಿತಿಯಿಂದ, ಅಧ್ಯಯನವನ್ನು ಐದು ಕ್ಷೇತ್ರಗಳಿಗೆ ಸೀಮಿತಗೊಳಿಸಿದೆ.

ಅದರಂತೆಯೇ, ಅಧ್ಯಯನವು ಬೆಳಗಾವಿ ಜಿಲ್ಲೆಗೆ ಸಂಬಂಧಿಸಿರುವದರಿಂದ ಇದರ ಫಲಿತಾಂಶಗಳನ್ನು ಸಾರ್ವತ್ರಿಕಗೊಳಿಸುವದು, ಸಂಶಯದಾಯಕವಾಗಿದೆ. ಪ್ರತಿಯೊಂದು ಕ್ಷೇತ್ರದಲ್ಲಿ ಹತ್ತಾರು ಸರ್ಕಾರೇತರ ಸಂಸ್ಥೆಗಳು ಕಾರ್ಯಗೈಯ್ಯುತ್ತಿರುವದು ಸತ್ಯ. ಆದರೆ ಸಮಯಾಭಾವದಿಂದ ಐದು ಕ್ಷೇತ್ರಗಳಲ್ಲಿನ ಒಂದೊಂದೇ ಸರ್ಕಾರೇತರ ಸಂಸ್ಥೆಯನ್ನು ಅಧ್ಯಯನಕ್ಕೊಳಪಡಿಸಿದೆ.

ಆದಾಗ್ಯೂ, ಸರ್ಕಾರೇತರ ಸಂಸ್ಥೆಗಳ ಸಹಭಾಗಿತ್ವದ ಮೂಲಕ ಬೆಳಗಾವಿ ಜಿಲ್ಲೆಯ ಸರ್ವಾಂಗೀಣ ಪ್ರಗತಿಯ ಅಂಶಗಳನ್ನು ಅಧ್ಯಯನ ಮಾಡುವದು ಮುಖ್ಯ ಉದ್ದೇಶವಾಗಿದೆ.

**೧.೧೦ ಅಧ್ಯಯನದ ಮಹತ್ವ :**

ದೇಶದ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳು ಮಹತ್ತರ ಪಾತ್ರವನ್ನು ವಹಿಸುತ್ತವೆ. ಸರ್ಕಾರ ಮತ್ತು ಜನರ ಮಧ್ಯೆ ಮಹತ್ತರ ಕೊಂಡಿಯಾಗಿ ಸರ್ಕಾರದ ಯೋಜನೆಗಳನ್ನು ಸದುಪಯೋಗಪಡಿಸಿಕೊಳ್ಳುವತ್ತ ಮತ್ತು ಸರ್ಕಾರದ ಆಶಯಗಳನ್ನು ಸಫಲಗೊಳಿಸುವ ಯೋಜನೆಗಳ ಮೂಲಕ ಸಾಮಾನ್ಯ ಜನರನ್ನು ತಲುಪಿ ಸಮುದಾಯದ ಅಭಿವೃದ್ಧಿಗೆ ಉತ್ತಮ ಕೊಡುಗೆಯನ್ನು

ನೀಡುತ್ತದೆ. ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಮತ್ತು ರಾಷ್ಟ್ರ ಮಟ್ಟದಲ್ಲಿ ಸರ್ಕಾರೇತರ ಸಂಸ್ಥೆಗಳು ಸರ್ಕಾರದ ನೀತಿ ನಿಯಮಗಳ ಮೇಲೆ ಸಾಕಷ್ಟು ಪ್ರಭಾವವನ್ನು ಬೀರುವಲ್ಲಿ ಸಫಲವಾಗಿದೆ.

ಪ್ರಸ್ತುತ ಅಧ್ಯಯನವು ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಗಳ ಬಗೆಗಿನ ಅಧ್ಯಯನವಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಗಮನಾರ್ಹ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದು ಹಲವು ವಿಶೇಷತೆಗಳನ್ನು ಹೊಂದಿದೆ. ಈ ಅಧ್ಯಯನದಲ್ಲಿ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳಲ್ಲಿ ಆಯ್ದ ಕೆಲವು ಸಂಸ್ಥೆಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಅಧ್ಯಯನಕ್ಕೆ ವಿಶೇಷತೆಗಳುಳ್ಳ ಸರ್ಕಾರೇತರ ಸಂಸ್ಥೆಗಳನ್ನು ಆಯ್ದುಕೊಳ್ಳಲಾಗಿದೆ. ಜೆ.ಜಿ.ಆಸ್ಪತ್ರೆ, ಬರ್ಡ್ಸ್, ಕೆ.ಎಲ್.ಇ. ಸಂಸ್ಥೆಗಳು ನೊಂದಾಯಿತ ಖಾಸಗಿ ಸರ್ಕಾರೇತರ ಸಂಸ್ಥೆಗಳಾದರೆ, ಮಹಿಳಾ ಸಮಾಖ್ಯಾ ಎಂಬುದು ಕೇಂದ್ರ ಸರ್ಕಾರ ಪ್ರಾಯೋಜಿತ ಸರ್ಕಾರೇತರ ಸಂಸ್ಥೆಯಾಗಿದೆ. ಭಾವಸಂಗಮ ಎಂಬುದು ನೊಂದಾಯಿತವಲ್ಲದ ಸರ್ಕಾರೇತರ ಸಂಸ್ಥೆ. ಬೆಳಗಾವಿ ಜಿಲ್ಲೆಯ ಮಟ್ಟಿಗೆ ಸರ್ಕಾರೇತರ ಸಂಸ್ಥೆಗಳ ಬಗೆಗೆ ಯಾವದೇ ಅಧ್ಯಯನವು ಕೂಡಾ ಆಗಿರುವುದಿಲ್ಲ. ಮತ್ತು ಸರ್ಕಾರೇತರ ಸಂಸ್ಥೆಗಳು ಸರ್ವಾಂಗೀಣ ಅಭಿವೃದ್ಧಿಯಲ್ಲಿ ಉಪಯುಕ್ತವೆ ಎನ್ನುವ ಬಗ್ಗೆ ಪರಿಶೀಲಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜಿಲ್ಲೆಯ ಅಭಿವೃದ್ಧಿಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಶಿಕ್ಷಣ ಕ್ಷೇತ್ರದಲ್ಲಿ ಕೆ.ಎಲ್.ಇ. ಸಂಸ್ಥೆಯ ಹೆಸರು ಕೇಳದವರೇ ಇಲ್ಲ. ಜಿಲ್ಲೆಯಲ್ಲಿ ಮಾತ್ರವಲ್ಲದೆ ರಾಜ್ಯಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿಯೂ ಸಹಿತ ಹೆಸರು ಮಾಡಿದೆ. ಹೀಗೆ ಬೆಳಗಾವಿ ಜಿಲ್ಲೆಯಲ್ಲಿನ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಹಿನ್ನಲೆಯಿಂದ ಪ್ರಾರಂಭವಾಗಿದ್ದರೂ ಸಹಿತ ರಾಷ್ಟ್ರೀಯ ನೆಲೆಯನ್ನು ಹೊಂದಿದೆ. ಬೆಳಗಾವಿ ಜಿಲ್ಲೆಯಲ್ಲಿನ ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿ ಪಥದಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿರುವುದು ಕಂಡು ಬರುವುದರಿಂದ ಅವುಗಳ ಬಗ್ಗೆ ಅಧ್ಯಯನ ಮಾಡುವದು ಸೂಕ್ತವಾದುದಾಗಿದೆ.

**೧.೧೧ ಅಧ್ಯಯನ ವಿನ್ಯಾಸ :**

ಈ ಅಧ್ಯಯನವನ್ನು ಒಟ್ಟು ೭ ಅಧ್ಯಾಯಗಳಲ್ಲಿ ವಿನ್ಯಾಸಗೊಳಿಸಲಾಗಿದೆ.

**ಅಧ್ಯಾಯ – ೧**

ಈ ಅಧ್ಯಾಯವು ಅಧ್ಯಯನದ ಪೀಠಿಕೆಯಂತಿದ್ದು, ಇದರಲ್ಲಿ ಸರ್ಕಾರೇತರ ಸಂಸ್ಥೆಗಳ ಸಂಕ್ಷಿಪ್ತ ನೋಟ, ಸಂಶೋಧನೆಯ ಪರಿಕಲ್ಪನೆ, ಉದ್ದೇಶಗಳು, ಮಾಹಿತಿ ಸಂಗ್ರಹದ ವಿಧಾನ ಮತ್ತು ವಿಶ್ಲೇಷಣೆ, ವ್ಯಾಪ್ತಿ, ಇತಿ ಮಿತಿ ಇತ್ಯಾದಿಗಳನ್ನು ಸೂಚಿಸಲಾಗಿದೆ.

**ಅಧ್ಯಾಯ – ೨**

ಇದು ಸರ್ಕಾರೇತರ ಸಂಸ್ಥೆಗಳ ಪರಿಕಲ್ಪನೆ, ಅರ್ಥವ್ಯಾಪ್ತಿ ಪ್ರಕಾರಗಳು, ಸೈದ್ಧಾಂತಿಕ ಅಧ್ಯಯನಗಳು ಮತ್ತು ಅವುಗಳಿಗೆ ಸಂಬಂಧಿಸಿದ ಸಾಹಿತ್ಯದ ಪರಿಶೀಲನೆಯನ್ನು ಒಳಗೊಂಡಿದೆ.

**ಅಧ್ಯಾಯ – ೩**

ಇದರಲ್ಲಿ ಅಧ್ಯಯನಕ್ಕೊಳಪಡಿಸಿದ ಬೆಳಗಾವಿ ಜಿಲ್ಲೆಯ ಅಭಿವೃದ್ಧಿಯ ಪಕ್ಷಿನೋಟವನ್ನು ಚಿತ್ರಿಸಿದ್ದು, ಅಲ್ಲಿ ಜಿಲ್ಲೆಯ ಇತಿಹಾಸ, ಆಡಳಿತ, ಜನಸಂಖ್ಯೆ, ಭೌಗೋಳಿಕ ವಿಷಯಗಳು, ಅಭಿವೃದ್ಧಿಯ ವಿಶೇಷತೆಗಳು ಇತ್ಯಾದಿಗಳನ್ನು ಚರ್ಚಿಸಲಾಗಿದೆ.

**ಅಧ್ಯಾಯ – ೪**

ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ೫ ಸರ್ಕಾರೇತರ ಸಂಸ್ಥೆಗಳ ಸ್ಥೂಲ ಚಿತ್ರಣವನ್ನು ಅಂದರೆ ಸ್ಥಾಪನೆ, ಉದ್ದೇಶ, ಬೆಳವಣಿಗೆ, ವಿಸ್ತರಣೆ, ಸೌಲಭ್ಯ, ಸೇವೆಗಳು ಮುಂತಾದ ಅಂಶಗಳನ್ನು ವಿವರವಾಗಿ ಸಂಬಂಧಿಸಿದ ಸೂಕ್ತವಾದ ಕೋಷ್ಟಕಗಳೊಂದಿಗೆ ಚರ್ಚಿಸಲಾಗಿದೆ.

**ಅಧ್ಯಾಯ – ೫**

ಇದು ಅಧ್ಯಯನದ ಮುಖ್ಯ ಭಾಗವಾಗಿದ್ದು ಪ್ರತಿಸ್ಪಂದಿಗಳ ವೈಯಕ್ತಿಕ, ಸಾಮಾಜಿಕ, ಆರ್ಥಿಕ, ಸರ್ಕಾರೇತರ ಸಂಸ್ಥೆಗಳಲ್ಲಿ ಪಾಲ್ಗೊಳ್ಳುವಿಕೆ ಇತ್ಯಾದಿ ಕುರಿತು ಅವರಿಂದ ಪಡೆದ ಅಭಿಪ್ರಾಯಗಳನ್ನು ಆಧರಿಸಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ – ೬**

ಇದೂ ಕೂಡಾ ಅಧ್ಯಯನದ ಮತ್ತೊಂದು ಮುಖ್ಯ ಭಾಗವಾಗಿದ್ದು ಇದರಲ್ಲಿ ೫ ಕ್ಷೇತ್ರಗಳಲ್ಲಿಯ ಆಯ್ದ ಸಂಸ್ಥೆಯ ಕುರಿತು ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ – ೭**

ಈ ಅಧ್ಯಾಯವು ಒಟ್ಟು ಅಧ್ಯಯನದ ಸಾರಾಂಶ ರೂಪದ ಉಪಸಂಹಾರವನ್ನು, ಫಲಿತಗಳನ್ನು ಮತ್ತು ಸರ್ಕಾರೇತರ ಸಂಸ್ಥೆಗಳ ಸುಧಾರಣೆ, ನಿಯಂತ್ರಣ, ಉತ್ತರದಾಯಿತ್ವ, ಗುಣಮಟ್ಟ ಉನ್ನತೀಕರಣ ಮುಂತಾದ ಸಲಹೆ ಸೂಚನೆಗಳನ್ನು ಒಳಗೊಂಡಿದೆ.

ಪ್ರಸ್ತುತ ಅಧ್ಯಯನ ಬೆಳಗಾವಿ ಜಿಲ್ಲೆಯ ಮಿತಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಕಾರ್ಯವೈಖರಿ, ಜನಸ್ಪಂದನ, ಪ್ರಗತಿಗಳನ್ನು ಪರಿಶೀಲಿಸುತ್ತ ಜಿಲ್ಲೆಯ ಸಮಗ್ರ ಅಭಿವೃದ್ಧಿಯಲ್ಲಿ ಪಡೆದುಕೊಂಡಿರುವ ಪಾಲುದಾರಿಕೆಯನ್ನು ಗುರುತಿಸಲು ಪ್ರಯತ್ನಿಸುತ್ತದೆ.

# ಅಧ್ಯಾಯ – ೨

# ಸರ್ಕಾರೇತರ ಸಂಸ್ಥೆಗಳ ಸೈದ್ಧಾಂತಿಕ ಅಧ್ಯಯನಗಳು ಹಾಗೂ ಸಾಹಿತ್ಯ ಪರಿಶೀಲನೆ

ಅಧ್ಯಾಯ –೨

# ಸರ್ಕಾರೇತರ ಸಂಸ್ಥೆಗಳ ಸೈದ್ಧಾಂತಿಕ ಅಧ್ಯಯನಗಳು ಹಾಗೂ ಸಾಹಿತ್ಯ ಪರಿಶೀಲನೆ

**೨.೧ ಸರ್ಕಾರೇತರ ಸಂಸ್ಥೆಗಳ ಪರಿಕಲ್ಪನೆ ಮತ್ತು ಅರ್ಥವ್ಯಾಪ್ತಿ :**

'ವ್ಹಾಲಂಟೀಸಂ' ಎಂಬ ಆಂಗ್ಲ ಪದವು ಲಾಟಿನ್ ಭಾಷೆಯ 'ವ್ಹಾಲಂಟಾಸ್' ಎಂಬ ಮೂಲಪದದಿಂದ ಬಂದದ್ದಾಗಿದೆ. ಅದನ್ನು ಕನ್ನಡ ಭಾಷೆಯಲ್ಲಿ 'ಸ್ವಯಂಸೇವಾವಾದ'ವೆಂದು ಅರ್ಥೈಸಬಹುದು ಅಥವಾ 'ಸ್ವಯಂ ಪ್ರೇರಣಾವಾದ'ವೆಂದು ಹೇಳಬಹುದು. ಲ್ಯಾಟಿನ್ ಶಬ್ಧವನ್ನು ಹೊರಹೊಮ್ಮುವ ಮನಸ್ಸಿಚ್ಛೆಯ ಪ್ರವೃತ್ತಿ, ಭಾವೋದ್ವೇಗ, ಹಸಿವು ಅಥವಾ ಬಯಕೆಯೆಂದು ಹಲವು ರೀತಿಯಾಗಿ ಅರ್ಥೈಸಬಹುದು. ಸ್ವಯಂಸೇವಾವಾದವು ಮಾನವೀಯತೆ ಅಧಾರಿತವಾಗಿದೆ. ಜಾತಿ–ಜನಾಂಗಗಳ ಬೇಧಗಳಿಗೆ ಅವಕಾಶವಿಲ್ಲದಿರುವುದೇ ಮಾನವೀಯತೆಯೆನಿಸುತ್ತದೆ.

ಸರ್ಕಾರೇತರ ಸಂಸ್ಥೆಗಳನ್ನು ಸರಳವಾಗಿ ವ್ಯಾಖ್ಯಾನಿಸುವದು ಸುಲಭವಲ್ಲ. ಆದ್ದರಿಂದ, ಅವುಗಳ ಲಕ್ಷಣಗಳು, ಪ್ರಕಾರಗಳು ಮತ್ತು ಕಾರ್ಯಗಳನ್ನು ಆಧರಿಸಿ ಅರ್ಥವಿವರಣೆ ನೀಡಬೇಕಾಗುತ್ತದೆ. ಆದಾಗ್ಯೂ, ಸರ್ಕಾರೇತರ ಸಂಸ್ಥೆಗಳ ವಿವರಣೆ ನೀಡುವ ಕೆಲವು ವ್ಯಾಖ್ಯೆಗಳನ್ನು ಕೆಳಗಿನಂತೆ ನೀಡಲಾಗಿದೆ.

ಸರ್ಕಾರೇತರ ಸಂಸ್ಥೆಗಳು ಒಂದು ಸಾಮಾಜಿಕ ಸೇವೆ ಮತ್ತು ಅಭಿವೃದ್ಧಿಯ ಸಂಘಟನೆಯಾಗಿದ್ದು ತನ್ನ ಸೇವೆಯ ಮೂಲಕ ಸಮಾಜದಲ್ಲಿನ ಅವಶ್ಯಕತೆ ವಂಚಿತ ಜನರ ಅಪೇಕ್ಷಿತ ಬೇಡಿಕೆಗಳನ್ನು ನೇರವಾಗಿ ಪೂರೈಸುವಲ್ಲಿ ಶ್ರಮಿಸುವ ಅಥವಾ ಅವುಗಳ ಪೂರೈಕೆಗಾಗಿ ಅಪ್ರತ್ಯಕ್ಷವಾಗಿ ಸಹಾಯಹಸ್ತ ನೀಡುವ ಸಂಸ್ಥೆಗಳಾಗಿವೆ. ಅದು ಸಂಘಟನೆಯ ರೂಪದಲ್ಲಿರುತ್ತದೆ.

**ಬೋರ್ಡಿಲಾನ್**[೧]ರವರ ಅಭಿಪ್ರಾಯದಲ್ಲಿ ಸ್ವಸೇವಾ ಸಂಸ್ಥೆ ಯೆಂದರೆ "ತಮ್ಮ ಅಕಾಂಕ್ಷೆಗಳನ್ನು ಪ್ರಾಮಾಣಿಕತೆಯಿಂದ ಸಾಧಿಸಲು ಸತತವಾಗಿ ಪ್ರಯತ್ನಿಸುವ ಹಾಗೂ ಕೆಲವು ಜನರಲ್ಲಿ ರಕ್ತಗತ ಗುಣದಿಂದ, ಶ್ರಮದಿಂದ ಮತ್ತು ಕಷ್ಟಗಳಿಂದ ಹೊರಹೊಮ್ಮುವ ಸಂಘಟನೆ"ಯಾಗಿದೆ.

**ಸಿಲ್ಸ್**[೨]ರವರ ಇಂಗಿತದಲ್ಲಿ 'ತನ್ನ ಸದಸ್ಯರ ಸಾಮಾನ್ಯ ಇಚ್ಛೆಯನ್ನು ಈಡೇರಿಸಲು ಸರ್ಕಾರದ ನಿಯಂತ್ರಣ ಹೊಂದಿರದ ಜನರ ಸ್ವಯಂ ಸದಸ್ಯತ್ವದ ಆಧಾರದಿಂದ ಸಂಘಟಿತಗೊಂಡಿರುವ ಜನರ–ಗುಂಪು' ಎಂದು ಗುರುತಿಸಿದ್ದಾರೆ.

**ಜಾನ್‌ಸನ್**[೩]ರವರು ಸರ್ಕಾರೇತರ ಸಂಸ್ಥೆಯನ್ನು ನಾಲ್ಕು ಅಂಶಗಳಿಂದ ಗುರುತಿಸಬಹುದೆಂದು ಅಭಿಪ್ರಾಯಿಸುತ್ತಾರೆ.

ಅವು –

೧) ರಚನಾಕ್ರಮ : ಅದು ಸ್ವಯಂ ಪ್ರೇರಿತ ಜನರನ್ನು ಹೊಂದಿರುತ್ತದೆ.

೨) ನಿರ್ವಹಣಾ ಪದ್ಧತಿ : ಸ್ವಯಂ ಆಡಳಿತ ಹೊಂದಿದ್ದು.

೩) ಕಾರ್ಯವೈಖರಿ : ಕನಿಷ್ಠ ಒಂದು ಸ್ವಯಂ ಮೂಲದಿಂದಾದರೂ ಆದಾಯವನ್ನು ಸಂಗ್ರಹಿಸಿ ಕಾರ್ಯ ರೂಪಿಸಿರಬೇಕು

೪) ಲಾಭ ರಹಿತ ಪ್ರೇರಣೆಯ ಕಾರ್ಯ.

**ಸ್ಮಿತ್** ಮತ್ತು **ಫ್ರೀಡಮಾನ್**[೪]ರವರು, ಸರ್ಕಾರೇತರ ಸಂಸ್ಥೆಗಳನ್ನು "ರಚನೆಯ ರೂಪದಲ್ಲಿ ಅನೌಪಚಾರಿಕ ಗುಂಪುಗಳಿಗೆ ತದ್ವಿರುದ್ಧವಾಗಿ ಔಪಚಾರಿವಾಗಿ ಸಂಘಟಿತಗೊಂಡ ಖಾಯಂ ಅನುಷಂಗಿಕ ಗುಂಪುಗಳೆಂದು" ಪರಿಗಣಿಸುತ್ತಾರೆ.

**ಲಾರ್ಡ್ ಬಿವ್‌ರೇಜ್**[೫] ಅವರ ಪ್ರಕಾರ.

"ಸ್ಪಷ್ಟವಾಗಿ ಹೇಳಬೇಕೆಂದರೆ, ಸರ್ಕಾರೇತರ ಸಂಸ್ಥೆ ಎಂದರೆ ಬಾಹ್ಯ ನಿಯಂತ್ರಣವಿಲ್ಲದೆ ತನ್ನ ಆಡಳಿತ ವೈಖರಿಯನ್ನು ತಾವೇ ನಿರ್ಧರಿಸುವ ವ್ಯವಸ್ಥೆಯೊಂದಿಗೆ ಕಾರ್ಯನಿರ್ವಾಹಕರಿಗೆ ಪಾವತಿಸುವ ಅಥವಾ ಪಾವತಿಸದೇ ಇರುವ ಸಂಘಟನೆಯಾಗಿದೆ".

ಭಾರತೀಯ ಸಂದರ್ಭದಲ್ಲಿ **ಡಾ.ಎನ್.ಆರ್.ಇನಾಮ್‌ದಾರ**[೬] ರವರು ವ್ಯಾಖ್ಯಾನಿಸಿದ್ದು, "ಅಭಿವೃದ್ಧಿಯಲ್ಲಿ ಸ್ವಯಂಯತೆ ಎಂಬುದು ಸರ್ಕಾರೇತರ ಸಂಸ್ಥೆಗಳ ಭಾಗಿತ್ವದ ಲಕ್ಷಣವನ್ನು

ಹೊಂದಿದ್ದು ಅಂದರೆ, ವ್ಯಕ್ತಿಗಳ ಗುಂಪು ಅಥವಾ ಸಾಮಾನ್ಯ ಉದ್ದೇಶಗಳನ್ನು ಹೊಂದಿದ ಸಂಘವೆಂದು ಅರ್ಥ.

**ಪ್ರಭಾಕರನ್**[೭] ವಿಚಾರದಲ್ಲಿ, ಸರ್ಕಾರೇತರ ಸಂಸ್ಥೆ ಎಂದರೆ ಸಂಘಟಿತ ಅಥವಾ ಅಸಂಘಟಿತ ಸಂಸ್ಥೆ, ನಿರ್ದಿಷ್ಠ ರಚನೆ ಹೊಂದಿದ ಅಥವಾ ಹೊಂದಿರದ ಸಂಸ್ಥೆಯಾಗಿದ್ದು ಯಾವುದೇ ಪ್ರದೇಶದ ಸಮುದಾಯದ ಒಳಿತಿಗಾಗಿ ಕಾರ್ಯಗೈಯ್ಯುವಂತಾಗಿರುವಂತದ್ದು.

**ದುಗ್ಗಲ್**[೮] ರವರ ನೇರನುಡಿಯಲ್ಲಿ, ಸರ್ಕಾರೇತರ ಸಂಸ್ಥೆಯು ನೊಂದಾಯಿಸಲ್ಪಟ್ಟಿರಬೇಕು ಮತ್ತು ಅದರ ಕಾರ್ಯಕ್ರಮಗಳು ಜನರ ಕಲ್ಯಾಣ ಉದ್ದೇಶ ಹೊಂದಿದ್ದು, ಅದಕ್ಕೆ ಸರ್ಕಾರದಿಂದ ಅಥವಾ ಖಾಸಗಿಯವರಿಂದ ಸಂಪನ್ಮೂಲ ದೊರಕಿರಬಹುದು ಆದರೆ, ಕಾರ್ಯವು ಲಾಭರಹಿತತೆಯಾಗಿರಬೇಕು.

**ಡಿ.ರಾಜಶೇಖರ**[೯] ರವರು ಸರ್ಕಾರೇತರ ಸಂಸ್ಥೆಯನ್ನು ಪರೀಕ್ಷಿಸುತ್ತ, ಅಭಿಪ್ರಾಯಿಸಿದ್ದೇನೆಂದರೆ "ಯಾವ ಸಂಸ್ಥೆಯು ಸ್ವಯಂ ಕಾರ್ಯವನ್ನು ಸಾಮಾಜಿಕ ಕಾರ್ಯಕ್ರಮಗಳನ್ನು ಮತ್ತು ಸಾಮಾಜಿಕ ಚಳುವಳಿಯನ್ನು ರೂಪಿಸುವ ಮತ್ತು ಕಾರ್ಯರೂಪಕ್ಕಿಳಿಸುವ ಕಾರ್ಯ ನಿರ್ವಹಿಸುವದೋ ಅದೇ ಸರ್ಕಾರೇತರ ಸಂಸ್ಥೆ ಯಾಗಿದೆ". ಅವರ ನಿಲುವಿನ ಪ್ರಕಾರ, ಈ ನಾಲ್ಕು ಲಕ್ಷಣಗಳು ಸರ್ಕಾರೇತರ ಸಂಸ್ಥೆಯನ್ನು ಇತರ ಸಂಸ್ಥೆಗಳಿಂದ ಬೇರ್ಪಡಿಸುತ್ತವೆ. ಅವುಗಳೆಂದರೆ, ಸ್ವಯಂ ನಿರ್ಮಾಣ, ಕಷ್ಟ ಅನುಭವಿಸುವ ಜನರ ಅಭಿವೃದ್ಧಿಗಾಗಿ ಕಾರ್ಯಗೈಯ್ಯುವದು, ಸ್ವಾರ್ಥ ರಹಿತ ಗುರಿಗಳಿಗಾಗಿ ಕಾರ್ಯಕ್ರಮ ರೂಪಿಸುವದು ಮತ್ತು ಅವಶ್ಯಕ ಸ್ವತಂತ್ರ್ಯತೆಯನ್ನು ಹೊಂದಿರುವದು.

ಈ ಮೇಲಿನ ವಿವಿಧ ವ್ಯಾಖ್ಯೆಗಳು ಮತ್ತು ಲಭ್ಯವಿರುವ ಗ್ರಂಥ ಸಾಹಿತ್ಯವು ಸರ್ಕಾರೇತರ ಸಂಸ್ಥೆಗಳ ಎರಡು ಪ್ರಮುಖ ಲಕ್ಷಣಗಳನ್ನು ಸೂಚಿಸುತ್ತವೆ. **ಪ್ರಥಮವಾಗಿ,** ಸಮಾಜದ ಎಲ್ಲ ಹಂತದಲ್ಲಿ ಉತ್ತಮಿಕೆಯನ್ನು ತರುವದಕ್ಕಾಗಿಯೇ ಅದರ ಪ್ರಯತ್ನಗಳ ಗುರಿಯಾಗಿರುತ್ತದೆ. **ಎರಡನೆಯದಾಗಿ,** ಅವು ಸೇವೆಯ ಅವಶ್ಯಕತೆ ಬಯಸುವ ಜನರ ಗುಂಪಿಂದಲೇ ರಚಿತವಾಗಿರುವದರಿಂದ ಅವು ಪ್ರಜಾಸತ್ತಾತ್ಮಕತೆ ಹೊಂದಿರುತ್ತವೆ, ಮತ್ತು ಅವುಗಳು ಜನರ ಸೇವೆಗಾಗಿ ಜನರ ಶಕ್ತಿಯನ್ನು ಬಳಸಿಕೊಳ್ಳುತ್ತವೆ.

**೨.೨ ಸರ್ಕಾರೇತರ ಸಂಸ್ಥೆಗಳ ಗುಣ ಲಕ್ಷಣಗಳು ಹಾಗೂ ವಿಶೇಷತೆಗಳು :**

**ಜೆ.ಬಿ.ಸಿಂಗ್**[೧೦] ರವರ ಅಭಿಪ್ರಾಯದಂತೆ, ಸರ್ಕಾರೇತರ ಸಂಸ್ಥೆಯು ತನ್ನ ಅಸ್ತಿತ್ವಕ್ಕೆ ಮತ್ತು ಉತ್ತಮ ಕಾರ್ಯನಿರ್ವಹಿಸಲು ಈ ಕೆಳಗಿನ ಮೂಲಭೂತ ಮತ್ತು ಅವಶ್ಯಕ ಅಂಶಗಳನ್ನು ಹೊಂದಿರಬೇಕು.

(ಅ) ಒಂದು ಮಾದರಿ ಸಂಸ್ಥೆಯಾಗಿ ಕಾರ್ಯ ರೂಪಿಸುವದು

(ಬ) ಅದು ನೋಂದಾಯಿಸಲ್ಪಟ್ಟಿರಬೇಕು

(ಕ) ತನ್ನ ಕಾರ್ಯಗಳಲ್ಲಿ ಸ್ವಾಯತ್ತತೆಯನ್ನು ಹೊಂದಿರಬೇಕು

(ಡ) ಸ್ಥಳೀಯರ ಆಶಯಗಳಿಗೆ ಸ್ಪಂದಿಸುವಂತಹ ಸ್ಪಷ್ಟಗೊಳಿಸಿದ ಕಾರ್ಯಯೋಜನೆಗಳು, ಜನತೆಗೆ ಸೇವೆ ನೀಡುವ ನಿಜವಾದ ಕಳಕಳಿ ಮತ್ತು ಕಾರ್ಯದಲ್ಲಿ ಸ್ವತಂತ್ರತೆ

(ಇ) ಬದ್ಧತೆ ಮತ್ತು ಅರ್ಪಣಾಭಾವ ಹೊಂದಿದ ಕಾರ್ಯಪಡೆ

(ಟ) ಸಂಪನ್ಮೂಲ ಕ್ರೋಢೀಕರಿಸುವ ಸಾಮರ್ಥ್ಯ

ಭಾರತ ಸರ್ಕಾರವು ಭಾರತದಲ್ಲಿನ ಸಂದರ್ಭದಲ್ಲಿ ಸರ್ಕಾರೇತರ ಸಂಸ್ಥೆಯ ಬಗ್ಗೆ ೭ನೆಯ ಪಂಚವಾರ್ಷಿಕ ಯೋಜನೆಯ ಕರಡು ಪ್ರತಿಯಲ್ಲಿ ವಿವರಿಸಿದ ಪ್ರಕಾರ ಅದು ಗ್ರಾಮೀಣ ಪ್ರದೇಶಾಧಾರಿತವಾಗಿದ್ದು, ಕನಿಷ್ಠ ೩ವರ್ಷಗಳವರೆಗೆ ಅಲ್ಲಿ ಕಾರ್ಯನಿರ್ವಹಿಸಿರಬೇಕು.

(ಅ) ಅದು ಲಾಭಗಳಿಕೆಗೆ ಕಾರ್ಯಮಾಡದೆ, ನಷ್ಟ–ಲಾಭ ರಹಿತದಂತೆ ಕಾರ್ಯ ಮಾಡಬೇಕು.

(ಆ) ಅದರ ಕಾರ್ಯಗಳಲ್ಲಿ ಭಾಗವಹಿಸಲಿಕ್ಕೆ ಎಲ್ಲರಿಗೂ ಮುಕ್ತ ಅವಕಾಶ ಇರಬೇಕು.

(ಇ) ಅದರ ಆಡಳಿತ ಜವಾಬ್ದಾರಿ ಹೊಂದಿರುವವರು ಯಾವುದೇ ರಾಜಕೀಯ ಪಕ್ಷಗಳಿಂದ ಚುನಾಯಿತರಾಗಿರಬಾರದು.

(ಈ) ಅದು ಅಭಿವೃದ್ಧಿ ಪರ ಕಾರ್ಯಗಳನ್ನು ಸಂವಿಧಾನಾತ್ಮಕ ರೀತಿಯಲ್ಲಿ ನಿರ್ವಹಿಸುವದಾಗಿ ಘೋಷಿಸಬೇಕು.

ವಿವಿಧ ವಿದ್ವಾಂಸರು ವಿವರಿಸಿದ ಸರ್ಕಾರೇತರ ಸಂಸ್ಥೆಗಳ ವಿಶೇಷತೆಗಳನ್ನು ಈ ರೀತಿ ಸ್ಥೂಲವಾಗಿ ಹೇಳಬಹುದು

**(ಅ) ಸ್ವಯಂ ಪ್ರೇರಿತ:**

ನಿಶ್ಚಿತ ಬದ್ಧತೆ ಹೊಂದಿದ ಅವುಗಳು ಸ್ವಯಂ ಪ್ರೇರಣೆಯಿಂದ ರಚಿತಗೊಂಡಿದ್ದು, ಸ್ಥಳೀಯ ಜನರನ್ನು ಒಳಗೊಂಡಿರುತ್ತವೆ. ಅದು ವ್ಯಕ್ತಿ ಅಥವಾ ಜನರ ಗುಂಪು ಆಗಿರಬಹುದು.

**(ಆ) ಕಾನೂನಿನ ಸ್ಥಾನ–ಮಾನ :**

ಸರ್ಕಾರೇತರ ಸಂಸ್ಥೆಗಳು ತಮ್ಮ ರಾಜ್ಯದ ಮತ್ತು ಕೇಂದ್ರ ಸರ್ಕಾರದ ಕಾನೂನುಗಳಡಿಯಲ್ಲಿ ನೋಂದಾಯಿಸಲ್ಪಟ್ಟಿರುತ್ತವೆ. ಆದರೆ, ದೇಶದಲ್ಲಿ ಅಸಂಖ್ಯಾತ ಸರ್ಕಾರೇತರ ಸಂಸ್ಥೆಗಳು ನೊಂದಾಯಿಸದೇ ಕಾರ್ಯ ಮಾಡುತ್ತಿವೆ. ಅವು ಅಸಹಾಯಕ ಜನರನ್ನು ಮೇಲಕ್ಕೆತ್ತಲು ಪರಿಶ್ರಮದಿಂದ ದುಡಿಯುತ್ತಿವೆ.

**(ಇ) ಸ್ವತಂತ್ರತೆ :**

ತಮ್ಮ ಯೋಜನೆ ರೂಪಿಸುವಲ್ಲಿ ಮತ್ತು ಕಾರ್ಯರೂಪಕ್ಕಿಳಿಸುವಲ್ಲಿ ಸರ್ವಸ್ವತಂತ್ರರಾಗಿರುತ್ತವೆ. ಸರ್ಕಾರದ ಸಂಸ್ಥೆಗಳಲ್ಲಿರುವಂತೆ ಅವು ಯಾವುದೇ ತೆರನಾದ ಕಠಿಣ ನಿಯಮ–ಕಟ್ಟಳೆಗಳಿಂದ ಬಂಧಿತಗೊಂಡಿರುವದಿಲ್ಲ.

**(ಈ) ನಮ್ರತೆ :**

ಸರ್ಕಾರೇತರ ಸಂಸ್ಥೆಗಳು ಯಾವುದೇ ರೀತಿಯ ವಿಲಕ್ಷಣ ನೀತಿ ಹಾಗೂ ಅಧಿಕಾರಿಯ ಅಡೆತಡೆಗಳನ್ನು ಹೊಂದಿರದೆ, ಕಾರ್ಯಕ್ರಮಗಳಲ್ಲಿ ನಮ್ರತೆ ಹೊಂದಿರುತ್ತವೆ.

**(ಉ) ತೀವ್ರವಾದ ನಿರ್ಣಯಿಸುವಿಕೆ :**

ಸಮುದಾಯಕ್ಕೆ ಅವಶ್ಯವಿರುವ ಸೇವೆಯನ್ನು ತೀವ್ರವಾಗಿ ಲಭ್ಯಗೊಳಿಸಲು ತಕ್ಷಣ ನಿರ್ಣಯಗಳನ್ನು ತೆಗೆದುಕೊಳ್ಳುತ್ತವೆ. ಆದ್ದರಿಂದ, ಜನರಿಗೆ ಸಮಯಾನುಸಾರ ಸೇವೆಯನ್ನು ನೀಡುತ್ತವೆ.

**(ಊ) ಲಾಭರಹಿತತೆ :**

ಸರ್ಕಾರೇತರ ಸಂಸ್ಥೆಗಳ ಮುಖ್ಯಗುರಿಯನ್ನು ಸಾಧಿಸಲು ಲಾಭದ ಅಂಶಗಳನ್ನು ಪರಿಗಣಿಸದೆ ಇರುವುದು ಮತ್ತೊಂದು ವಿಶೇಷತೆ. ಲಾಭ–ನಷ್ಟಗಳೆರಡೂ ಇಲ್ಲದಂತೆ ಕಾರ್ಯ ನಿರ್ವಹಿಸುತ್ತವೆ.

**(ಋ) ಸ್ವ–ಹಿತ ಇಲ್ಲದ ಸೇವೆ :**

ಸರ್ಕಾರೇತರ ಸಂಸ್ಥೆಗಳ ಸೇವೆಯು ಅದರ ಪ್ರವರ್ತಕ ಮುಂದಾಳುಗಳಿಗೆ ಅಥವಾ ನಿರ್ವಹಣೆ ಹೊತ್ತಂತಹ ಮುಖಂಡರಿಗಲ್ಲ! ಅವುಗಳು ಪ್ರಮುಖವಾಗಿ, ಬಡಜನತೆಗಾಗಿ ಮತ್ತು ಸೇವಾಕಾಂಕ್ಷಿಗಳಿಗೆ ಮೀಸಲು. ಸಂಸ್ಥೆಯ ಸದಸ್ಯರಿಗೆ 'ಸೇವಾಕಾಂಕ್ಷಿಗಳ' ಸಹಕಾರ ಮತ್ತು ಪ್ರತಿಕ್ರಿಯೆಗಳೆ ಪೋಷಣೆ–

ಪ್ರೇರಣೆ. ಇದುವೇ ಸದಸ್ಯರಿಗೆ ಮಾನಸಿಕ ನೆಮ್ಮದಿ ಹಾಗೂ ಸಮಾಧಾನ ನೀಡುತ್ತದೆ. ಆದ್ದರಿಂದಲೆ, ಸೇವೆಯ ಉತ್ಕೃಷ್ಟತೆಯ ಬಗ್ಗೆ ಚಿಂತನ ನಡೆಸಲು ದಾರಿ ಕಾಣುತ್ತದೆ.

**(೩) ಉನ್ನತ ಪ್ರೇರಣೆ :**

ಸರ್ಕಾರೇತರ ಸಂಸ್ಥೆಗಳ ಸದಸ್ಯರುಗಳು ಬಡ ಜನತೆಯ ಸೇವೆ ಮಾಡಬೇಕೆಂಬ ಅಪಾರ ಆಸಕ್ತಿ ಮತ್ತು ಸ್ವಪ್ರತಿಭೆ ಹೊಂದಿದವರಾಗಿರುತ್ತಾರೆ. ಸಮಯದ ಪರಿವೆಯೇ ಇಲ್ಲದೆ ಸೇವೆ ನೀಡುವುದು ಅವರ ಹಂಬಲವಾಗಿರುತ್ತದೆ. ಸೇವೆಯ ಚೈತನ್ಯದಿಂದ ಮುಂದುವರೆಯುತ್ತ ಜನರ ಪ್ರಯೋಜನಕ್ಕಾಗಿಯೇ ಸದಸ್ಯರು ಸಿದ್ದರಾಗಿರುತ್ತಾರೆ.

**(ಎ) ಕಾರ್ಯದಲ್ಲಿ ಸ್ವತಂತ್ರತೆ :**

ಸರ್ಕಾರೇತರ ಸಂಸ್ಥೆಗಳು ಕಾರ್ಯ ಯೋಜನೆ ರೂಪಿಸಿ, ಕಾರ್ಯ ರೂಪಕ್ಕೆ ತರುವಲ್ಲಿ ಸಮುದಾಯದ ಹಿತದೃಷ್ಟಿಯಿಂದ ಅವಶ್ಯಕ ನಿರ್ಣಯ ತೆಗೆದು ಕೊಳ್ಳುವಲ್ಲಿ ಸಂಪೂರ್ಣ ಸ್ವಾತಂತ್ರ್ಯ ಹೊಂದಿರುತ್ತಾರೆ.

**(ಏ) ಮೌಲ್ಯಾಧಾರಿತ :**

ಸರ್ಕಾರೇತರ ಸಂಸ್ಥೆಗಳು ಸಮಾಜಕ್ಕೆ ಮೌಲ್ಯಗಳನ್ನು ಸೇರಿಸಲು, ಕಾಪಾಡಲು ಮತ್ತು ಅಭಿವೃದ್ಧಿಪಡಿಸಲು ಶ್ರಮಿಸುವಲ್ಲಿ ಹೆಸರು ಗಳಿಸಿವೆ. ಅವುಗಳನ್ನಾಧರಿಸಿಯೇ ಸದಸ್ಯರಿಗೆ ತರಬೇತಿ ಆಯೋಜಿಸಲಾಗುತ್ತದೆ.

**(ಐ) ಜನ-ಸಮುದಾಯ ಕೇಂದ್ರೀಕೃತ :**

ಸರ್ಕಾರೇತರ ಸಂಸ್ಥೆಗಳಿಗೆ ಜನ ಸಮುದಾಯವೇ ಕೇಂದ್ರ ಬಿಂದು. ಜನರೊಂದಿಗೆ ಬೆರೆತು ಯೋಜನೆಗಳನ್ನು ಸಿದ್ಧ-ಗೊಳಿಸುತ್ತಾರೆ, ಕಾರ್ಯರೂಪಕ್ಕಿಳಿಸುತ್ತಾರೆ. ಅವರ ಒಳಿತೇ ಮುಖ್ಯ ಉದ್ದೇಶ. ಆದ್ದರಿಂದ, ಸರ್ಕಾರೇತರ ಸಂಸ್ಥೆಗಳೆಂದರೆ ಜನರಿಂದ, ಜನರಿಗಾಗಿ ಮತ್ತು ಜನರಿಗೋಸ್ಕರ ಸ್ಥಾಪನೆಯಾದ ಸಂಘಟನೆಗಳೆಂದರೆ ತಪ್ಪಾಗಲಾರದು.

**೨.೩. ಸರ್ಕಾರೇತರ ಸಂಸ್ಥೆಗಳ ವಿಧಗಳು :**

ಸಾಮಾನ್ಯವಾಗಿ ಸರ್ಕಾರೇತರ ಸಂಸ್ಥೆಗಳನ್ನು ಔಪಚಾರಿಕ, ಕಾರ್ಯಾತ್ಮಕ ಮತ್ತು ಕಾರ್ಯವಿಧಾನ ಆಧಾರಿತಗಳೆಂದು ವಿಂಗಡಿಸಬಹುದು. ಈ ಕ್ಷೇತ್ರದಲ್ಲಿನ ಹಲವಾರು ವಿದ್ವಾಂಸರು ತಮ್ಮದೇ ದೃಷ್ಟಿ ಕೋನದಿಂದ ಸರ್ಕಾರೇತರ ಸಂಸ್ಥೆಗಳನ್ನು ವಿಂಗಡಿಸಿದ್ದಾರೆ. ಇವುಗಳನ್ನು ಸಾಮಾನ್ಯವಾಗಿ ಗಾತ್ರ,

ಆಂತರಿಕ ರಚನೆ, ಅವಲಂಬನೆ, ಅನಾವಲಂಬನೆ, ಕಾರ್ಯಗಳು, ಸಂಪನ್ಮೂಲ ಸಂಗ್ರಹಿಸುವ ಮೂಲ, ಕಾರ್ಯಕ್ಷೇತ್ರ, ಕೇಂದೀಕೃತ ಜನಸಮುದಾಯ ಹಾಗೂ ಚಟುವಟಿಕೆಗಳನ್ನು ಆಧರಿಸಿ ವಿಂಗಡಿಸುತ್ತಾರೆ.

**ಡೆವಿಡ್ ಎಲ್.ಸಿಲ್ಸ್**[೧೧]ರವರು ರಚನೆಯ ವಿಭಿನ್ನತೆ ಮತ್ತು ಸದಸ್ಯತ್ವದ ಪದ್ಧತಿ ಆಧಾರದಿಂದ ಸಾಂಘಿಕ ಮತ್ತು ಒಕ್ಕೂಟದ ಸರ್ಕಾರೇತರ ಸಂಸ್ಥೆಗಳೆಂದು ವಿಂಗಡಿಸಿದ್ದಾರೆ.

**ಡಾ. ಇನಾಮ್‌ದಾರ**[೧೨] ಅವರು ಸರ್ಕಾರೇತರ ಸಂಸ್ಥೆಗಳನ್ನು ೭ ವಿಧಗಳಲ್ಲಿ ವಿಂಗಡಿಸುತ್ತಾರೆ. ಅವುಗಳೆಂದರೆ

೧. ರಾಜ್ಯ ಸರ್ಕಾರದೊಂದಿಗೆ ಪೂರ್ತಿಯಾಗಿ 'ಮೈತ್ರಿಹೊಂದಿದ' ಸರ್ಕಾರೇತರ ಸಂಸ್ಥೆಗಳು.

೨. ಆದರ್ಶವಾದ ಸರ್ಕಾರೇತರ ಸಂಸ್ಥೆಗಳು.

೩. ಸ್ಥಳೀಕವಾಗಿ ಜನರ ಸೇವಾಕಾಂಕ್ಷೆಗಳನ್ನು ಪೂರೈಸಲು ಅನುಕೂಲವಾಗುವಂತೆ ರಚನೆಗೊಂಡಂತಹ ಗ್ರಾಮೀಣ ಹಾಗೂ ಪಟ್ಟಣದ ಸರ್ಕಾರೇತರ ಸಂಸ್ಥೆಗಳು.

೪. 'ಲಿಂಗಾಧಾರಿತ' (ಪುರುಷರ ಮತ್ತು ಸ್ತ್ರೀಯರ) ಸರ್ಕಾರೇತರ ಸಂಸ್ಥೆಗಳು.

೫. ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಉನ್ನತೀಕರಣದ ಸರ್ಕಾರೇತರ ಸಂಸ್ಥೆಗಳು.

೬. ಸ್ಥಳೀಯ ಮತ್ತು ಅಂತರಾಷ್ಟ್ರೀಯ ಸರ್ಕಾರೇತರ ಸಂಸ್ಥೆಗಳು.

೭. ಏಕೋದ್ದೇಶ ಮತ್ತು ವಿವಿದೋದ್ದೇಶ ಸರ್ಕಾರೇತರ ಸಂಸ್ಥೆಗಳು.

**ಜೆ.ಪಿ.ಸಿಂಗ್**[೧೩]ಅವರು ಸರ್ಕಾರೇತರ ಸಂಸ್ಥೆಗಳ ಗುರಿ ತಲುಪಲು ಅನ್ವಯಿಸುವ ರೀತಿಗೆ ಅನುಗುಣವಾಗಿ ಏಳು ರೀತಿಯಲ್ಲಿ ವಿಂಗಡಿಸುತ್ತಾರೆ.

ಅವುಗಳೆಂದರೆ–

೧. ದಾನ – ಧರ್ಮದ ಸರ್ಕಾರೇತರ ಸಂಸ್ಥೆಗಳು.

೨. ಕಲ್ಯಾಣದ ಸರ್ಕಾರೇತರ ಸಂಸ್ಥೆಗಳು.

೩. ಪರಿಹಾರದ ಸರ್ಕಾರೇತರ ಸಂಸ್ಥೆಗಳು.

೪. ಪುನರ್ವಸತಿಯ ಸರ್ಕಾರೇತರ ಸಂಸ್ಥೆಗಳು.

೫. ಸೇವೆಯ ಸರ್ಕಾರೇತರ ಸಂಸ್ಥೆಗಳು.

೬. ಸಾಮಾಜಿಕ, ಆರ್ಥಿಕ – ಪರಿಸರದ ಅಭಿವೃದ್ಧಿಯ ಸರ್ಕಾರೇತರ ಸಂಸ್ಥೆಗಳು.

೭. ಮಾನವ – ಜನಾಂಗದ ಅಭಿವೃದ್ಧಿಯ ಸರ್ಕಾರೇತರ ಸಂಸ್ಥೆಗಳು.

ಆದರೆ **ವ್ಹಿ.ಜಿ.ನಾಂದೇಡಕರ್**[೧೪] ಅವರು ಸರ್ಕಾರೇತರ ಸಂಸ್ಥೆಗಳನ್ನು ಹತ್ತು ವಿಧಗಳಲ್ಲಿ ವಿಂಗಡಿಸುತ್ತಾರೆ.

ಅವುಗಳು –

೧. ವೈಯಕ್ತಿಕ ಧರ್ಮಾಚರಣೆಗೆ ಸಹಾಯ ನೀಡುವ ಸರ್ಕಾರೇತರ ಸಂಸ್ಥೆಗಳು.

೨. ಧಾರ್ಮಿಕ ಸಂಸ್ಥೆಗಳು.

೩. ಲೋಕೋಪಕಾರ ಚಟುವಟಿಕೆಗಳ ವೈಯಕ್ತಿಕ ಸರ್ಕಾರೇತರ ಸಂಸ್ಥೆಗಳು.

೪. ಸಾಮಾಜಿಕ ಸೇವೆ ಮತ್ತು ಸಾಂಸ್ಕೃತಿಕ ಸರ್ಕಾರೇತರ ಸಂಸ್ಥೆಗಳು.

೫. ವೃತ್ತಿ ಪರ ಸಲಹಾ ಸರ್ಕಾರೇತರ ಸಂಸ್ಥೆಗಳು.

೬. ಕಾರ್ಯಾತ್ಮಕ ಸರ್ಕಾರೇತರ ಸಂಸ್ಥೆಗಳು.

೭. ಅಗ್ರಮಾನ್ಯ ಸರ್ಕಾರೇತರ ಸಂಸ್ಥೆಗಳು.

೮. ಕ್ರಿಯಾ ಆಧಾರಿತ ಸರ್ಕಾರೇತರ ಸಂಸ್ಥೆಗಳು.

೯. ಪ್ರತಿಭಟನೆಯ ಸರ್ಕಾರೇತರ ಸಂಸ್ಥೆಗಳು.

೧೦. ಸಾರ್ವಜನಿಕರಿಗೆ ಮಾಹಿತಿ ನೀಡುವ ಸರ್ಕಾರೇತರ ಸಂಸ್ಥೆಗಳು.

**ಡಿ.ರಾಜಶೇಖರ**[೧೫] ರವರ ಪ್ರಕಾರ ವಿಚಾರದಲ್ಲಿ ಸರ್ಕಾರೇತರ ಸಂಸ್ಥೆಗಳಲ್ಲಿ ನಾಲ್ಕು ವಿಧಗಳಿವೆ.

ಅವುಗಳು–

೧. ಜನಸಾಮಾನ್ಯ ಮಟ್ಟದ ಸರ್ಕಾರೇತರ ಸಂಸ್ಥೆಗಳು.

೨. ಬೆಂಬಲ ನೀಡುವ ಸರ್ಕಾರೇತರ ಸಂಸ್ಥೆಗಳು.

೩. ಕ್ರೀಯಾ ಜಾಲ ಹೊಂದಿದ ಸರ್ಕಾರೇತರ ಸಂಸ್ಥೆಗಳು.

೪. ನಿಧಿ ಸಹಾಯದ ಸರ್ಕಾರೇತರ ಸಂಸ್ಥೆಗಳು.

ಈ ಎಲ್ಲಾ ತರಹದ ವಿಧಗಳನ್ನು ಆಧರಿಸಿ ಒಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

**(೧) ದಾನ ನೀಡುವ ಸರ್ಕಾರೇತರ ಸಂಸ್ಥೆಗಳು :**

ದಾನ ನೀಡುವುದು ಸರ್ಕಾರೇತರ ಸಂಸ್ಥೆಗಳು ಅಳವಡಿಸಿಕೊಂಡ ಸಾಂಪ್ರಾದಾಯಿಕ ಕಾರ್ಯ. ಉದಾಹರಣೆಗಾಗಿ– ಅಹಾರ ಪೂರೈಸುವುದು, ತಬ್ಬಲಿಗಳಿಗೆ ಬಟ್ಟೆ ಕೊಡುವುದು, ನಿರ್ಗತಿಕರಿಗೆ ಸಹಾಯ ಮಾಡುವುದು. ಅಸಹಾಯಕರಿಗೆ ಸಹಾಯವೆಂದರೆ ದೇವರಿಗೆ ಅರ್ಪಿಸಿದಂತೆ ಎನ್ನುವ ಭಾವನೆ ಸಾಕಷ್ಟು ಸದಸ್ಯರ ನಂಬಿಕೆಯಾಗಿರುತ್ತದೆ.

**(೨) ಪರಿಹಾರ– ಪುನರ್ವಸತಿ ಕಲ್ಪಿಸುವ ಸರ್ಕಾರೇತರ ಸಂಸ್ಥೆಗಳು. :**

ಅತೀ ಅವಶ್ಯದ ಸಮಯದಲ್ಲಿ ಜನ–ಸಮೂಹಕ್ಕೆ ಪರಿಹಾರ ಮತ್ತು ಪುನರ್ವಸತಿ ನೀಡುವುದರ ಮೂಲಕ ಸಹಾಯ ನೀಡುವುದೇ ಈ ವಿಧಧ ಸಂಸ್ಥೆಗಳ ಉದ್ದೇಶವಾಗಿರುತ್ತದೆ. ನೈಸರ್ಗಿಕ ವಿಕೋಪಗಳು, ನೆರೆಹಾವಳಿ, ಅಗ್ನಿ ದುರಂತ, ಸಾಂಕ್ರಾಮಿಕ ರೋಗಗಳು, ಮಾನವೀಯ ವಿಪತ್ತುಗಳಾದ ಯುದ್ಧ, ಜನಾಂಗೀಯ ದ್ವೇಷ ಮುಂತಾದ ಸಂದರ್ಭಗಳಲ್ಲಿ ಸಿಕ್ಕು ತೊಳಲುವ ಸಮೂಹಕ್ಕೆ ಅಹಾರದ ಪೊಟ್ಟಣಗಳು, ಬಟ್ಟೆಗಳು, ಆರೋಗ್ಯ ಸೇವೆಗಳನ್ನು ನೀಡುತ್ತವೆ. ಸರ್ಕಾರದ ಜೊತೆ–ಜೊತೆಯಾಗಿ ಸಹಾಯಕ್ಕೆ ನಿಲ್ಲುತ್ತವೆ. ಜನರ ರಕ್ಷಣೆಗಾಗಿ ಹೋರಾಡುತ್ತವೆ.

**(೩) ಸೇವಾ ಕೈಂಕರ್ಯದ ಸರ್ಕಾರೇತರ ಸಂಸ್ಥೆಗಳು.:**

ಜನ ಸಮೂಹದ ಕಲ್ಯಾಣ– ಏಳ್ಗೆಗಾಗಿ ಶ್ರಮಿಸುವ ಉದ್ದೇಶದಿಂದ ಬಡ ಮತ್ತು ಕನಿಷ್ಠ ಜೀವನ ನಡೆಸುತ್ತಿರುವ ಜನರಿಗೆ ಸೇವೆ ನೀಡುತ್ತವೆ. ತ್ಯಾಗ ಭಾವನೆಯಿಂದ ದಕ್ಷವಾಗಿ– ಬದ್ದತೆಯಿಂದ– ಅರ್ಪಣಾ ಮನೊಭಾವದಿಂದ ಈ ಸೇವೆಗಳನ್ನು ನೀಡುತ್ತವೆ.

**(೪) ಸಾಮಾಜಿಕ ಅಭಿವೃದ್ಧಿ ಸರ್ಕಾರೇತರ ಸಂಸ್ಥೆಗಳು. :**

ಸಮಾಜದ ಸಾಮಾಜಿಕ ಸಮಸ್ಯೆಗಳ ಮೇಲೆ ಆಸಕ್ತಿ ವಹಿಸುವ ಸರ್ಕಾರೇತರ ಸಂಸ್ಥೆಗಳಾಗಿದ್ದು, ಸಮಾಜದ ಜನರಲ್ಲಿ ತಿಳುವಳಿಕೆಯನ್ನು ಹೆಚ್ಚಿಸುವ ಮತ್ತು ಅಭಿವೃದ್ಧಿಯ ಕಾರ್ಯಗಳಲ್ಲಿ ಅವರನ್ನು ತೊಡಗಿಸಿಕೊಳ್ಳುವಂತೆ ಪ್ರೇರೇಪಿಸುವ ಕಾರ್ಯದಲ್ಲಿ ತೊಡಗಿದ ಸಂಸ್ಥೆಗಳಾಗಿವೆ. ಜನರು ಭಾಗಿಯಾಗಿ ಅಭಿವೃದ್ಧಿಯನ್ನು ಹೊಂದುವಂತಹ ಕಾರ್ಯಕ್ರಮಗಳನ್ನು ರೂಪಿಸುವದಕ್ಕೆ ಆದ್ಯತೆ ನೀಡುತ್ತವೆ. ಜನರಲ್ಲಿ ಸಂಘಟಿಸಿ, ಸಾಮಾಜಿಕ ಶಿಕ್ಷಣ ನೀಡಿ–ಅರಿವು ಮೂಡಿಸುತ್ತವೆ. ಜನರಲ್ಲಿ ಸಂವೇದನೆ–ಪ್ರಜ್ಞೆ ಹೆಚ್ಚಿಸಿ, ತಮ್ಮ ಸಮಸ್ಯೆಗಳಿಗೆ ತಾವೇ ಪರಿಹಾರ ಕಂಡುಕೊಳ್ಳುವಂತೆ ಸಿದ್ಧಗೊಳಿಸುತ್ತವೆ. ಆರ್ಥಿಕ

ಅಭಿವೃದ್ಧಿ ಯೋಜನೆಗಳಲ್ಲಿ ತಾವೇ ನಿರ್ವಹಣಾತ್ಮಕ ಕಾರ್ಯಗಳನ್ನು ಕೈಗೊಳ್ಳುವಂತೆ ಜನರಲ್ಲಿ ಸಾಮರ್ಥ್ಯ ವೃದ್ಧಿಸುವ ಶಿಕ್ಷಣ ನೀಡುತ್ತವೆ. ಜನರಲ್ಲಿಯೇ ಮುಂದಾಳತ್ವದ ಗುಣಗಳನ್ನು ಹೆಚ್ಚಿಸುತ್ತವೆ.

**(೫) ಆರ್ಥಿಕಾಭಿವೃದ್ಧಿ ಸರ್ಕಾರೇತರ ಸಂಸ್ಥೆಗಳು :**

ಜನರನ್ನು ಆರ್ಥಿಕವಾಗಿ ಸಬಲರನ್ನಾಗಿಸುವುದು ಈ ಸಂಸ್ಥೆಗಳ ಮುಖ್ಯ ಉದ್ದೇಶವಾಗಿದ್ದು, ಅವರು ಉತ್ತಮ ಗುಣಮಟ್ಟದ ಜೀವನದ ಬಗ್ಗೆ ಚಿಂತಿಸುವಂತೆ ಕಾರ್ಯಯೋಜನೆ ಮಾಡುತ್ತವೆ. ಆರ್ಥಿಕ ಬದಲಾವಣೆಯೇ ಸಾಮಾಜಿಕ ಬದಲಾವಣೆಗೆ ನಾಂದಿಯಾಗುತ್ತದೆ. ರೈತರಿಗೆ ಉದ್ಯೋಗ ನೀಡುವ, ಗ್ರಾಮಗಳಲ್ಲಿ ಆದಾಯ ಹೆಚ್ಚಿಸುವ ಕಾರ್ಯಗಳು, ಸರ್ಕಾರದ ನೆರವಿನ ಯೋಜನೆಗಳು ಮತ್ತು ಇತರ ಮೂಲಗಳಿಂದ ಸಂಪನ್ಮೂಲ ಹರಿದು ಬರುವಂತೆ ಯೋಜನೆ ರೂಪಿಸುತ್ತವೆ. ದಲಿತರು ಮತ್ತು ದೌರ್ಜನ್ಯಕ್ಕೊಳಗಾದ ಜನರಿಗೆ ಹೆಚ್ಚಿನ ಅವಕಾಶಗಳು ದೊರೆತು, ಆದಾಯ ಹೆಚ್ಚಿಸಿಕೊಳ್ಳುವ ಮತ್ತು ಅವರನ್ನು ಮೇಲೆತ್ತುವ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತವೆ. ಸಾಮಾಜಿಕ ಅನ್ಯಾಯದ ಸವಾಲನ್ನು ಎದುರಿಸುವಲ್ಲಿ ಹೋರಾಡುತ್ತವೆ.

**(೬) ಸಬಲೀಕರಣದ ಸರ್ಕಾರೇತರ ಸಂಸ್ಥೆಗಳು :**

ಜನರು ಸಂಪನ್ಮೂಲ ಪಡೆಯಲು ಮತ್ತು ಅವುಗಳನ್ನು ತಮ್ಮ ಜೀವನಕ್ಕಾಗಿ ಬಳಸಿಕೊಳ್ಳಲು ಅವಶ್ಯವಿರುವ ಅಧಿಕಾರ ಮತ್ತು ಸಬಲತೆಯನ್ನು ಹೊಂದುವಂತೆ ಜನರನ್ನು ತಯಾರು ಮಾಡುವ ಸೇವೆಯಲ್ಲಿ ತೊಡಗಿಕೊಂಡಿರುತ್ತವೆ. ಇಂತಹ ಸರ್ಕಾರೇತರ ಸಂಸ್ಥೆಗಳು ಯೋಜನೆ ರೂಪಿಸುವ ಹಂತದಲ್ಲಿ ಭಾಗವಹಿಸಿ, ಸರಿಯಾದ ನೀತಿ ರೂಪಿಸುವಂತೆ ನಿಗಾ ವಹಿಸಿ, ಜನರು ಸಬಲರಾಗುವಂತೆ ಲಕ್ಷ್ಯವಹಿಸುತ್ತವೆ. ಅಶಕ್ತರನ್ನು ಸಶಕ್ತರನ್ನಾಗಿಸುವಂತೆ ಅತೀ ಕೆಳಮಟ್ಟದಲ್ಲಿರುವ ಜನರನ್ನು ಶಕ್ತಿವಂತರನ್ನಾಗಿಸುವ ವಿಶಾಲ ಮನೋಭಾವನೆಯನ್ನು ಅಳವಡಿಸಿಕೊಂಡು ಅವರಲ್ಲಿ ನಿಖರತೆ ತರುವಲ್ಲಿ ಪ್ರಯತ್ನಿಸುತ್ತವೆ. ಬಡಜನರ ಉದ್ಧಾರದ ನೀತಿ ರೂಪಿಸುವ ಸರ್ಕಾರದ ಮೇಲೆ ಒತ್ತಡ ಹೇರುತ್ತವೆ.

**(೭) ಬೆಂಬಲ ಒದಗಿಸುವ ಸರ್ಕಾರೇತರ ಸಂಸ್ಥೆಗಳು**

ಸಮಾಜದಲ್ಲಿ ಕೆಳಹಂತದಲ್ಲಿ ಸೇವಾನಿರತರಾಗಿರುವ ಸರ್ಕಾರೇತರ ಸಂಸ್ಥೆಗಳಿಗೆ ಸರ್ವರೀತಿಯ ಬೆಂಬಲ ಪೂರೈಸುವದಕ್ಕೆ ಸ್ಥಾಪನೆಗೊಂಡ ನವೀನ ರೀತಿಯ ಸರ್ಕಾರೇತರ ಸಂಸ್ಥೆಗಳು ವ್ಯವಸ್ಥೆಯಲ್ಲಿ ಹುಟ್ಟಿಕೊಳ್ಳುತ್ತಿವೆ. ಸಂದರ್ಭಕ್ಕನುಸಾರವಾಗಿ ಅವಶ್ಯವಿರುವ ಬೆಂಬಲ ಯೋಜನೆ ರೂಪಿಸುತ್ತವೆ. ಗ್ರಾಮೀಣ ಮಟ್ಟದಲ್ಲಿ ಕಾರ್ಯನಿರ್ವಹಿಸುವ ಸಂಸ್ಥೆಗಳು ಪರಿಣಾಮಕಾರಿಯಾಗಿ ಕಾರ್ಯಗೈಯ್ಯಲು

ಸಹಾಯವಾಗುವಂತಹ ಮೂಲ ಸೌಕರ್ಯಗಳನ್ನು ಪೂರೈಸುವದರಲ್ಲಿ ತೊಡಗಿಕೊಂಡಿರುತ್ತವೆ. ಸೇವೆಯ ಸ್ಪಷ್ಟ ಕಲ್ಪನೆ ನೀಡಿ, ಸರ್ಕಾರೇತರ ಸಂಸ್ಥೆಗಳ ಮುಖ್ಯ ಉದ್ದೇಶದ ಬಗ್ಗೆ ಅರಿವು ಮೂಡಿಸುವ ಅವಕಾಶಗಳ ಲಭ್ಯತೆ ತಿಳಿಸುವ ಮತ್ತು ಸ್ವ-ವಿಮರ್ಶೆ ಮಾಡಿಕೊಳ್ಳುವಂತೆ ಮಾರ್ಗದರ್ಶನ ನೀಡುತ್ತವೆ.

**(೮) ಸಾಂದರ್ಭಿಕ ಸರ್ಕಾರೇತರ ಸಂಸ್ಥೆಗಳು :**

ಎಂಭತ್ತರ ದಶಕದಲ್ಲಿ ಹೊಸದಾಗಿ ಕಾಣಿಸಿಕೊಂಡ ಅಪರೂಪದ ಸರ್ಕಾರೇತರ ಸಂಸ್ಥೆಗಳು, ಮಿತ ಉದ್ದೇಶ ಹೊಂದಿ, ಕೆಲವು ವಿಶಿಷ್ಠ ಸಮಯ ಸಂದರ್ಭಗಳಲ್ಲಿ ಒಟ್ಟುಗೂಡಿಸಿದ ಜಾಲದಂತೆ ಕಾರ್ಯನಿರ್ವಸುವ ಸಂಸ್ಥೆಗಳಿವು. ಸಾಮಾನ್ಯ ಸಮಸ್ಯೆ-ಸವಾಲುಗಳನ್ನು ಎದುರಿಸಲು ಒಟ್ಟುಕೂಡಿಕೊಂಡು ಕಾರ್ಯಗೈಯುವ ಸರ್ಕಾರೇತರ ಸಂಸ್ಥೆಗಳು ಸಾಮಾನ್ಯವಾಗುತ್ತಿವೆ. ಸಾಂಘಿಕ ಕಾರ್ಯ, ಮುಂದಾಳತ್ವ, ಚಾಕಚಕ್ಯತೆ, ನೈಪುಣ್ಯತೆಯಿಂದ ಪರಿಹರಿಸಬೇಕಾದ ಸವಾಲುಗಳು ಎದುರಾದಾಗ ಬಹು-ಸಂಸ್ಥೆಗಳಲ್ಲಿನ 'ಪರಿಣಿತ' ಸದಸ್ಯರು ತಮ್ಮ ಜ್ಞಾನ ಅನ್ವಯಿಸುವದಕ್ಕೆ ಅವಕಾಶ ಮಾಡಿಕೊಡುವ ಸಂಸ್ಥೆಗಳಾಗಿವೆ. ಕೆಲವು ಸರ್ಕಾರದ ಧೋರಣೆ ಮತ್ತು ಕಾನೂನಿನ ಚೌಕಟ್ಟುಗಳನ್ನು ರೂಪಿಸುವದರ ಮೇಲೆ ಒತ್ತಡ-ಪ್ರಭಾವ ಬೀರುವದಕ್ಕೆ ಶ್ರಮಿಸುತ್ತವೆ. ಇದಕ್ಕಾಗಿ, ಕೆಳ-ಮಟ್ಟದಲ್ಲಿರುವ ಸರ್ಕಾರೇತರ ಸಂಸ್ಥೆಗಳ ಪರಿಣಿತಿಯನ್ನು ಅನುಭವಗಳನ್ನು ಮತ್ತು ಸಮಸ್ಯೆಗಳನ್ನು ಅಳವಡಿಸುತ್ತವೆ.

ಈ ರೀತಿಯಾಗಿ, ಸರ್ಕಾರೇತರ ಸಂಸ್ಥೆಗಳ ವಿಸ್ತಾರದ ಪರಿಕಲ್ಪನೆಯನ್ನು ನಾವು ಕಂಡುಕೊಳ್ಳಬಹುದು. ಆದರೆ, ಇವುಗಳೇ ಭದ್ರವಾದ ಲಕ್ಷಣಗಳೆಂದು ಹೇಳಲಾಗದು. ಇನ್ನೂ ಬೇರೆ ರೀತಿಯ-ಉದ್ದೇಶದ ಸರ್ಕಾರೇತರ ಸಂಸ್ಥೆಗಳು ವ್ಯವಸ್ಥೆಯಲ್ಲಿ ಕಾಣಬಹುದಾಗಿದೆ. ಹೀಗಾಗಿ, ಪ್ರಸ್ತುತ ಪರಿಸ್ಥಿತಿಯಲ್ಲಿ ಹತ್ತಾರು ರೀತಿಯ ಸರ್ಕಾರೇತರ ಸಂಸ್ಥೆಗಳು ಅಸ್ತಿತ್ವದಲ್ಲಿದ್ದು ಅವು ಬಹು ಲಕ್ಷಣ ಮತ್ತು ಬಹು-ವಿಧದ ರೀತಿಯಲ್ಲಿ ತೊಡಗಿಕೊಂಡಿರುವ ಸಂಸ್ಥೆಗಳಾಗಿವೆ ಎಂಬುದನ್ನು ಮನದಲ್ಲಿಟ್ಟುಕೊಂಡು, ಅಧ್ಯಯನ ಮಾಡುವ ಅವಶ್ಯಕತೆಯಿದೆ.

**೨.೪ ಸೈದ್ಧಾಂತಿಕ ಅಧ್ಯಯನ :**

ಸರ್ಕಾರೇತರ ಸಂಸ್ಥೆಗಳ ಬಗ್ಗೆ ವಿವಿಧ ತಜ್ಞರು ಕೈಗೊಂಡಿರುವ ಅಧ್ಯಯನಗಳನ್ನು ವಿಶ್ಲೇಷಿಸುವ ಮುನ್ನ ಈ ವಿಷಯದ ಬಗೆಗಿರುವ ಸೈದ್ಧಾಂತಿಕ ಪರಿಕಲ್ಪನೆಗಳನ್ನು ಪರಿಶೀಲಿಸುವುದು ಒಳಿತು. ಸ್ವಯಂಸೇವೆ ಹಾಗೂ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಸೀಮಿತ ಸಿದ್ಧಾಂತಗಳಿವೆ. ಸಿದ್ಧಾಂತಗಳ ಒಳದೃಷ್ಟಿ ತಿಳಿದುಕೊಳ್ಳಲು, ಇಲ್ಲಿ ಕೆಲವು ಸಿದ್ಧಾಂತಗಳನ್ನು ಚರ್ಚಿಸಲಾಗಿದೆ.

ಸರ್ಕಾರೇತರ ಸಂಸ್ಥೆಗಳ ಬಗೆಗಿನ ಸಿದ್ಧಾಂತಗಳು ಸಾಮಾಜಿಕ, ಮಾನಸಿಕ, ಮತಧರ್ಮ ಅಥವಾ ಆಧ್ಯಾತ್ಮಿಕ ಶಾಸ್ತ್ರಕ್ಕೆ ಸಂಬಂಧಿಸಿರಬಹುದು. 'ಸ್ವ ಇಚ್ಛೆ'ಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಇವು ಸ್ವರೂಪ ಹಾಗೂ ಅನುಭವಗಳ ವಿವಿಧ ವಿಷಯಗಳನ್ನು ವಿವರಿಸುತ್ತವೆ.

**ಎಮಿಲ್ ಡರ್ಕಹೀಮ್ಸ್**[೧೬] ರವರ ಸಿದ್ಧಾಂತದಲ್ಲಿ ವ್ಯಕ್ತಿಯ ಸ್ವಕ್ರೀಯೆ ಹಾಗೂ ನಡವಳಿಕೆಗಳ ಮೇಲೆ ಸಮಾಜದ ಪ್ರಭಾವ ಸ್ಪಷ್ಟವಾಗಿದೆ. 'ಸಾಮಾಜಿಕ ವಾಸ್ತವ' ಎಂಬ ಉಕ್ತಿ ಬಳಸಿ ಸಮಾಜವು ವ್ಯಕ್ತಿಯ ಭಾವನೆಗಳ ಮೇಲೆ, ನಟನೆಯ ಮೇಲೆ ಹಾಗೂ ಆಲೋಚನೆ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂಬುದಕ್ಕೆ ಅರ್ಥ ನೀಡುತ್ತಾರೆ. ನೈತಿಕತೆ ಮತ್ತು ಸಮೂಹ ಪ್ರಜ್ಞೆಗಳು ವ್ಯಕ್ತಿಯ ಮೇಲೆ ಹೇಗೆ ಪರಿಣಾಮ ಬೀರುತ್ತವೆ ಹಾಗೂ ಸಾಮಾಜಿಕ ಶಕ್ತಿಯಾಗಿ ಹೇಗೆ ಬಂಧಿಸುತ್ತವೆಯೆಂದು ವಿವರಿಸುತ್ತಾರೆ. ಸಮಾಜಕ್ಕೆ ಮಧ್ಯಂತರ ಸಮೂಹಗಳು ಅತ್ಯವಶ್ಯಕ ಘಟಕಗಳಾಗಿದ್ದು ವ್ಯಕ್ತಿಯನ್ನು ರಾಜ್ಯದೊಂದಿಗೆ ಸಂಪರ್ಕಿಸುತ್ತವೆ ಎಂದು ಅಭಿಪ್ರಾಯಿಸುತ್ತಾರೆ. ಈ ಮದ್ಯವರ್ತಿ ಗುಂಪುಗಳು ಸಾಂಪ್ರದಾಯಿಕ ಮೌಲ್ಯಗಳನ್ನು ಅಳಿಸಿಹಾಕುತ್ತಿರುವ ಜಾತ್ಯಾತೀತ ಸಮಾಜಗಳಲ್ಲಿ ಮೌಲಿಕ ನಿಬಂಧನೆಗಳನ್ನು ನೀಡಿದವು. ಸೀಮಿತ ಉದ್ದೇಶಗಳ ಸಾಧನೆಗಳಲ್ಲಿ ನಿರತವಾದ ವ್ಯಕ್ತಿಗಳನ್ನು ಮಾತ್ರ ಹೊಂದಿದ ಸಮಾಜ ಬಹುಕಾಲ ಬದುಕಲು ಸಾಧ್ಯವಿಲ್ಲ. ಇಂತಹ ಅಪಾಯದಿಂದ ದೂರವಾಗಲು ಸಮಾಜದಲ್ಲಿ ನೈತಿಕತೆಯ ಸರ್ಕಾರೇತರ ಸಂಸ್ಥೆಗಳ ಜಾಲದ ಅವಶ್ಯಕತೆ ಇದೆ. ಆದ್ದರಿಂದ 'ನಂಬಿಗೆ'ಯ ಸಾಮಾಜಿಕ ಬಂಧನಗಳನ್ನು ಏರ್ಪಡಿಸುವುದರ ಮೂಲಕ ಸ್ವ–ಸಾಧನೆಗೆ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತವೆ.

೧೯೩೭ ರಲ್ಲಿ ಅಮೇರಿಕಾದ ಸಮಾಜಶಾಸ್ತ್ರಜ್ಞರಾದ **ಟಾಲ್ಕಾಟ್ ವಾರ್ಸನ್ನ** ಎಂಬುವರು ಕ್ರಿಯೆಯ ಸ್ವಯಂಸೇವಾ ಸಿದ್ಧಾಂತವನ್ನು ಅಭಿವೃದ್ಧಿ ಪಡಿಸಿದರು. ಅದರಲ್ಲಿ ಸಾಮಾಜಿಕ ಜಗತ್ತಿನ ಸ್ವಯಂಸೇವೆಯ ಸ್ವರೂಪವನ್ನು ವಿಶ್ಲೇಷಿಸಿದರು. ಸರ್ಕಾರೇತರ ಸಂಸ್ಥೆಗಳು ಅಥವಾ ಸ್ವಯಂ ಸೇವಾ ಸಂಸ್ಥೆಯು ಸಾಮಾಜಿಕ ಜಗತ್ತಿನ ಅವಿಭಾಜ್ಯ ಭಾಗವಾಗಿದ್ದು, ಸಿದ್ಧಾಂತಗಳ ರಚನೆಯಲ್ಲಿಯೂ ಮುಖ್ಯವಾದ ಸ್ಥಾನವನ್ನ ಹೊಂದಿವೆ. ಈ ಸಿದ್ಧಾಂತದಲ್ಲಿ ವ್ಯಕ್ತಿಗಳ ಕ್ರಿಯೆಯಿಂದ ಸಾಮಾಜಿಕ ವ್ಯವಸ್ಥೆಯ ಬಗ್ಗೆ ವಿವರಿಸಿ ವ್ಯಕ್ತಿಗತ ಕ್ರಿಯೆಯು ನಿಯಮಗಳ ಕ್ರಮಗತದಲ್ಲಿ ವೈಯಕ್ತಿಕ ಆಯ್ಕೆಯಾಗಿರುತ್ತದೆ ಎಂಬುದನ್ನು ವಿವರಿಸಿದ್ದಾರೆ.

**ಜಿಯೋಲ್ ಭೋಸ್**[೧೭] ಎಂಬುವರು ತಮ್ಮ ಸ್ವಯಂಸೇವಾಸಂಸ್ಥೆಗಳು ಹಾಗೂ ಗ್ರಾಮೀಣ ಅಭಿವೃದ್ಧಿ–ಸಿದ್ಧಾಂತ ಹಾಗೂ ಆಚರಣೆ ಎಂಬ ಅಧ್ಯಯನದಲ್ಲಿ, 'ಸ್ವಯಂ ಸೇವಾ ಸಿದ್ಧಾಂತ'ವನ್ನು ಪ್ರಸ್ತಾಪಿಸುತ್ತಾರೆ. ಸರ್ಕಾರೇತರ ಸಂಸ್ಥೆಗಳು ಸ್ವಯಂ ಸೇವೆಯ ಅಭಿಪ್ರೇರಣೆಗಳಿಂದಲೇ

ಹುಟ್ಟಿಕೊಂಡಿವೆ. ಏಕಮನಸ್ಸಿನ ವ್ಯಕ್ತಿಗಳ ಗುಂಪುಗಳ ಪ್ರೇರಣೆಯಿಂದ ಸರ್ಕಾರೇತರ ಸಂಸ್ಥೆಗಳು ಪ್ರವರ್ತನಗೊಂಡಿವೆ. ವ್ಯಕ್ತಿ ಒಳ್ಳೆಯವನಾಗಿದ್ದರೆ. ಸಂಘಟಣೆಯೂ ಸ್ವಾಭಾವಿಕವಾಗಿ ಒಳ್ಳೆಯದಾಗಿರುತ್ತದೆ. ವ್ಯಕ್ತಿಗಳ ಆಂತರಿಕ ಪ್ರೇರಣೆ, ಅಭೀಪ್ಸೆ ಮಾನವೀಯ ಕಳಕಳಿ, ಪರಸೇವೆಯ ಪ್ರೀತಿ, ಮುಂತಾದವುಗಳು 'ಸ್ವಯಂ ಸೇವೆ'ಯ ರೂಪ ಪಡೆದುಕೊಳ್ಳುತ್ತವೆ.

**ಘೋಸ್**ರವರು, ಸ್ವಯಂ ಸೇವೆ ಸಿದ್ಧಾಂತವನ್ನು ವಿವರಿಸಿ, ಈ ಕೆಳಗಿನ ಹಲವು ಪ್ರಕಾರದ ಸ್ವಯಂಸೇವೆಗಳನ್ನು ದಾಖಲಿಸುತ್ತಾರೆ.

***ಕೋಷ್ಟಕ–೨.೧ : ಸ್ವಯಂ ಸೇವಾ ಸಿದ್ಧಾಂತ***

| ಅ. ನಂ | ವಿವರ | ಶೇಕಡಾ |
|---|---|---|
| ೧ | ತ್ಯಾಗ ಪ್ರೇರಿತ ಸ್ವಯಂಸೇವೆ | ಕೇವಲ ೧% |
| ೨ | ವೃತ್ತಿಪರ ಸ್ವಯಂ ಸೇವೆ | ೧೦ ರಿಂದ ೧೫% |
| ೩ | ನಕಲು ಸ್ವಯಂ ಸೇವೆ | ೨೦ ರಿಂದ ೨೫% |
| ೪ | ಗವಾಕ್ಷಿ ಧಾರಾಳತನ ಸ್ವಯಂ ಸೇವೆ | ೫ ರಿಂದ ೧೦% |
| ೫ | ಉಳಿವಿಗಾಗಿ ಸ್ವಯಂ ಸೇವೆ | ೨೫ ರಿಂದ ೩೦% |
| ೬ | ತೋರಿಕೆಯ /ಮಿಥ್ಯಾ ಸ್ವಯಂ ಸೇವೆ | ೨೫ ರಿಂದ ೩೫% |

### ೨.೧.೧ ತ್ಯಾಗ ಪ್ರೇರಿತ ಸ್ವಯಂ ಸೇವೆ

ಸ್ವಯಂ ಪ್ರೇರಣೆಯ ಸ್ಫೂರ್ತಿ ಇರುವ ಜನರು, ತಮ್ಮ ಜೀವಿತದ ಕೊನೆಯ ಕ್ಷಣದವರೆಗೂ ಬಡವರ ಪ್ರಗತಿ, ನಿರ್ಲಕ್ಷಿತರ ಸೇವೆ, ಹಾಗೂ ಅಲ್ಪಸಂಖ್ಯಾತರ ಶ್ರೇಯಕೋಸ್ಕರ ಕಾರ್ಯಮಾಡುತ್ತಾರೆ. ಇದೇ ದೂರದೃಷ್ಟಿಯ ಸಾಧನೆಗೋಸ್ಕರ ತಮ್ಮ ಜೀವನವನ್ನೇ ಮುಡಿಪಿಟ್ಟಿರುತ್ತಾರೆ. ಎಂತಹ ಪ್ರತಿರೋಧಧ ಮಧ್ಯದಲ್ಲೂ ಅವರು ಅಮೂಲ್ಯ ಸೇವೆಗಳನ್ನು ಸಲ್ಲಿಸುತ್ತಾರೆ. ಅವರ ಬದುಕೆ ಇತರರಿಗಾಗಿ ಮುಡಿಪು ಹಾಗೂ ಅತ್ಯುನ್ನತ ಮೌಲ್ಯದ ಕಾರಣಕ್ಕೆ ತ್ಯಾಗ ಮಾಡಲು ಸಿದ್ದ.

ಮಹಾತ್ಮಾ ಗಾಂಧೀಜಿ, ಸ್ವಾಮಿ ವಿವೇಕಾನಂದ, ರಾಜಾರಾಮ್ ಮೋಹನರಾಯ್, ಮದರ್ ಥೇರೆಸಾ ಮುಂತಾದವರನ್ನು ಇಂಥ ವ್ಯಕ್ತಿತ್ವದ ಪಟ್ಟಿಯಲ್ಲಿ ಸೇರಿಸಬಹುದು. ಹೆಸರಿನ ಪ್ರಚಾರಕ್ಕೆ ಸಿಲುಕದ ಅನೇಕ ವ್ಯಕ್ತಿಗಳನ್ನು ತಮ್ಮದೇ ಸ್ವಯಂ ಸ್ಫೂರ್ತಿ ಸೇವೆಯಲ್ಲಿ ತೊಡಗಿಸಿಕೊಂಡವರನ್ನು ಪ್ರಪಂಚದಲ್ಲಿ ಗುರುತಿಸಿ ಗೌರವಿಸಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ಜೀವನಾನುಭವದ

ಯಾತ್ರೆಯಲ್ಲಿ ಹಲವಾರು ಸ್ವಯಂ ಸೇವಕರು ಜನ್ಮತಾಳುತ್ತಾರೆ. ಸರಳ ಜೀವನ, ಉನ್ನತ ವಿಚಾರವೇ ಅವರ ಸಿದ್ಧಾಂತವಾಗಿರುತ್ತದೆ. ನಾವು ಕೂಡ ಅವರ ಸ್ವಯಂ ಸೇವೆಯನ್ನು ತಡೆಯದಷ್ಟು ಅವರಲ್ಲಿ ಬದ್ಧತೆ ಹಾಗೂ ಮನಃಶಕ್ತಿಯಿರುತ್ತದೆ. ಸ್ವಯಂ ಸೇವಾ ತತ್ವಗಳನ್ನು ತಿಳಿಯಲು ಅವರು ಯಾವುದೇ ಶಿಕ್ಷಣ ಸಂಸ್ಥೆಗಳಿಗೆ ಅಧ್ಯಯನಕ್ಕೆ ಹೋಗುವ ಅವಶ್ಯವಿಲ್ಲ. ವಾಸ್ತವದಲ್ಲಿ, ಸ್ವಯಂ ಸೇವಾ ಸಿದ್ಧಾಂತಗಳು ಜನ್ಮತಾಳುವುದೇ ಇಂತಹ ಮಹಾನ್ ವ್ಯಕ್ತಿಗಳ ಅನುಭವಗಳಿಂದ ಹಾಗೂ ಅವರು ಬೀರಿದ ಪ್ರಭಾವದಿಂದ.ಇವರು ಸಮಾಜದಲ್ಲಿ ತುಳಿಯಲ್ಪಟ್ಟವರ ಪರವಾಗಿ ಸರ್ಕಾರದ ನೀತಿಗಳಿರುವಂತೆ ಮಾಡುವಲ್ಲಿ ಬದಲಾವಣೆ ತರಬಲ್ಲರು ಹಾಗೂ ಸಮಾಜದಲ್ಲಿ ಪರಿವರ್ತನೆ ತರಬಲ್ಲರು. ಜನರು ಇವರನ್ನು ಗುರುವೆಂದು ಅಥವಾ ಮುಖಂಡರೆಂದು ಅನುಸರಿಸುತ್ತಾರೆ. ಹೃದಯದಿಂದ ಹೃದಯಕ್ಕೆ ನೇರ ಸಂಪರ್ಕ ಬೆಸೆಯುವುದರಿಂದ ಹಿಂದುಳಿದವರನ್ನು ಮೇಲೆತ್ತುತ್ತಾರೆ. ಅತ್ಯುನ್ನತ ಸತ್ಯದ ವ್ಯಕ್ತಿಗತ ಪ್ರತಿಬಿಂಬವೇ ಆಗಿರುತ್ತಾರೆ. ಆದರೆ ಇಂಥವರು ಕೇವಲ ಪ್ರತಿಶತ ೧ ರಷ್ಟು ಮಾತ್ರ.

**೨.೧.೨ ವೃತ್ತಿಪರ ಮತ್ತು ಅಭಿವೃದ್ಧಿಪರ ಸ್ವಯಂ ಸೇವಾಸಿದ್ಧಾಂತ :**

ಈ ವ್ಯಕ್ತಿಗಳು ತಮ್ಮ ಅಭಿವೃದ್ಧಿಯ ಪ್ರಕಲ್ಪದ ಬಗ್ಗೆ ಸ್ಪಷ್ಟತೆ ಹೊಂದಿರುತ್ತಾರೆ. ತಮ್ಮ ವೃತ್ತಿಪರ ಸಾಮರ್ಥ್ಯಗಳು ಹಾಗೂ ಬದ್ಧತೆಯು ಬಳುವಳಿಯಾಗಿ ಬಂದಿರುತ್ತವೆ. ಸಾಮಾಜಿಕ ಒಳಿತಿನ ಉದ್ದೇಶಕ್ಕಾಗಿ ಸ್ಥಾಪಿತ ಹಿತಾಸಕ್ತಿಯನ್ನು ತ್ಯಾಗ ಮಾಡಲು ಸಿದ್ಧರಾಗಿರುತ್ತಾರೆ. ಜನರ ಪ್ರಗತಿ ಜನರ ಕೈಯಲ್ಲಿಯೇ ಇದೆ ಎಂಬುದರಲ್ಲಿ ಅಪಾರ ನಂಬಿಕೆ ಹೊಂದಿರುತ್ತಾರೆ. ಇವರು ಕೇವಲ ಕಾರ್ಯತತ್ಪರರಲ್ಲ ಬದಲಿಗೆ ಸಹಾಯಕರೂ ಹೌದು. ಇವರದು ಜನಕೇಂದ್ರಿತ ಹಾಗೂ ಪ್ರಕ್ರೀಯೆ ಆಧಾರಿತ ಕಾರ್ಯವೈಖರಿ.

**೨.೧.೩ ಸ್ವಯಂ ಸೇವೆ ಆಚರಣೆ :**

ನೈತಿಕತೆ ಹಾಗೂ ವೃತಿಪರತೆಯಿಂದ ಮುಕ್ತವಾಗಿರುವ, ಆದರೆ ಇತರರ ಒಳತಿಗಾಗಿ ದುಡಿಯುವರನ್ನು ಈ ಸಾಲಿನಲ್ಲಿ ಸೇರಿಸಬಹುದು. ಇತರರಿಗಾಗಿ ಸ್ವಲ್ಪ ಸೇವೆ ಮಾಡುವ ಆಕಾಂಕ್ಷೆ ಹೊಂದಿರುತ್ತಾರೆ. ಸಾಮಾನ್ಯ ಅಭಿವೃದ್ಧಿಪರ ಕೆಲಸಗಾರರಂತೆ ಗುರುತಿಸಿಕೊಂಡು ಇತರರಿಗೆ ಏನಾದರೂ ಕೈಗೊಳ್ಳುವ ಕಾರ್ಯವು ಪ್ರಗತಿಯ ಕಾರ್ಯವೆಂದು ನಂಬಿರುತ್ತಾರೆ. ಏಕೆಂದರೆ, ಇವರೆಲ್ಲರೂ ಅನನುಭವಿಗಳು ಹಾಗೂ ತರಬೇತಿ ಪಡೆಯದವರು. ಇವರು ಸಮಾಜಸೇವೆ, ಪರಿಹಾರ ಹಾಗೂ ದಾನಗಳನ್ನೇ ಹೆಚ್ಚು ನಂಬಿರುತ್ತಾರೆ. ಇತರ ಸರ್ಕಾರೇತರ ಸಂಸ್ಥೆಗಳನ್ನು ನೋಡಿ ಸಂಘಗಳನ್ನು ನಡೆಸುವುದು ತುಂಬಾ ಸುಲಭವೆಂದು ಭಾವಿಸಿರುತ್ತಾರೆ. ತಮ್ಮದೇಯಾದ

ಧ್ಯೇಯವಾಗಲಿ, ದೂರದೃಷ್ಟಿಯಾಗಲಿ, ಹೋರಾಟ ನೀತಿಯಾಗಲಿ ಅಥವಾ ಸ್ವತಃ ಆಲೋಚನೆಗಳನ್ನು ಹೊಂದಿರುವುದಿಲ್ಲ. ಇತರ ಸರ್ಕಾರೇತರ ಸಂಸ್ಥೆಗಳನ್ನು ಅನುಸರಿಸುತ್ತಾರೆ. ಆರಂಭದಲ್ಲಿ ಹೆಚ್ಚಿನ ಕ್ರೀಯಾಶೀಲತೆ ಕಂಡುಬಂದರೂ ದಿರ್ಘಾವಧಿಯಲ್ಲಿ ಕಮರಿ ಹೋಗುತ್ತವೆ. ಇಂಥ ವ್ಯಕ್ತಿಗಳು ಸ್ವಯಂಸೇವಾ ಸಂಸ್ಥೆಗಳಲ್ಲಿ ಪ್ರತಿಶತ ೨೦ ರಿಂದ ೨೫ ರಷ್ಟು ಕಂಡು ಬರುತ್ತಾರೆ.

**೨.೧.೪ ಅನುಕೂಲಸಿಂಧು ಸ್ವಯಂಸೇವಾಸಿದ್ಧಾಂತ :**

ಧನಿಕ, ಶ್ರೀಮಂತ ಹಾಗೂ ವ್ಯವಹಾರ ಮುಖಂಡರನ್ನೊಳಗೊಂಡ ಇಂತಹ ಸ್ವಯಂಸೇವಾ ಸಂಸ್ಥೆಯು ತುಳಿತಕ್ಕೊಳಗಾದವರ ಹಾಗೂ ಬಡವರ ಕಲ್ಯಾಣಕ್ಕಾಗಿ ದುಡಿಯುತ್ತವೆ. ಅವರ ಸೇವಾ ಕಾರ್ಯಗಳಿಗೆ ಸರ್ವಕಾಲಿಕ ಮನ್ನಣೆ ಇದೆ. ಆದರೆ ಈ ಕಾರ್ಯಗಳು ಅವರಿಗೆ ಹೆಚ್ಚಿನ ಕಾರ್ಯಮಾತ್ರ. ತಮ್ಮ ವಿಶ್ರಾಂತಿ ಸಮಯದಲ್ಲಿ ಸಮೀಪದ ಹಳ್ಳಿಗಳಿಗೆ ಭೇಟಿನೀಡಿ, ಆರೋಗ್ಯ ಶಿಬಿರ, ಉಚಿತ ಔಷಧಿಗಳ ಪೂರೈಕೆ, ಹಾಗೂ ಬಡವರಿಗೆ ದಾನ ದತ್ತಿ ನೀಡುತ್ತಾರೆ. ಅವರ ಚಟುವಟಿಕೆಗಳು ಇತರರ ಬಗೆಗಿರುವ ದಯಾಳುತನಕ್ಕೆ ಸಾಕ್ಷಿಯಾಗುತ್ತವೆ. ಸಾಮಾಜಿಕ ಬದ್ಧತೆಯನ್ನು ತೋರಿಸುವಲ್ಲಿ ಪಟ್ಟಣದ ಒತ್ತಡಗಳನ್ನು ಖಾಲಿಮಾಡಿ ಕೊಳ್ಳುತ್ತಾರೆ. ಸ್ವಯಂಸೇವಾ ಕಾರ್ಯಕರ್ತರಲ್ಲಿ ಪ್ರತಿಶತ ೫ ರಿಂದ ೧೦ ರಷ್ಟು ಈ ಪ್ರಕಾರದ ವ್ಯಕ್ತಿಗಳನ್ನು ಕಾಣುತ್ತೇವೆ. ತಮ್ಮ ಕಾರ್ಯಗಳನ್ನು ಪ್ರಚಾರಪಡಿಸಲು ಮಾಧ್ಯಮಗಳನ್ನೇ ಆಶ್ರಯಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ, ಸಾಧನೆಗಳಿಗಿಂತ ಜಾಹೀರಾತಿನ ಪ್ರಮಾಣವೇ ಹೆಚ್ಚಾಗಿರುತ್ತದೆ. ಆದರೆ ತಮ್ಮ ಯೋಜನೆಗಳಲ್ಲಿ ನಿರಂತರತೆಯಾಗಲೀ, ಮುಂದುವರಿಕೆಯಾಗಲೀ ಇಟ್ಟುಕೊಂಡಿರುವುದಿಲ್ಲ. ಪ್ರತ್ಯೇಕವಾದ ವಿಭಾಗ ಹೊಂದಿ ಅಭಿವೃದ್ಧಿಪರ ವಾದಿಗಳಿಂದ ನಿರೀಕ್ಷಿಸಲ್ಪಟ್ಟಲ್ಲಿ ತಮ್ಮ ಸಂಪನ್ಮೂಲಗಳಿಂದ ಅದ್ಭುತವನ್ನೇ ಸೃಷ್ಟಿಸುವ ಸಾಮರ್ಥ್ಯ ಹೊಂದಿರುತ್ತಾರೆ.

**೨.೧.೫ ಉಳಿವಿಗಾಗಿರುವ ಸ್ವಯಂಸೇವೆ :**

ಸ್ವಯಂ ಸೇವೆಯು ಹೊಟ್ಟೆಪಾಡಿಗಾಗಿ ಕೈಗೊಳ್ಳುವ ವೃತ್ತಿಯಾಗಿದೆ. ಈ ವಿಭಾಗದಲ್ಲಿ ಅತೀ ಕಡಿಮೆ ತರಬೇತಿ ಹೊಂದಿದ, ಶೈಕ್ಷಣಿಕ ಅರ್ಹತೆ ಹೊಂದಿದ, ಕಡಿಮೆ ಸಮರ್ಪಿತ, ಹಾಗೂ ಕಡಿಮೆ ಬದ್ಧತೆ ಹೊಂದಿದ ವ್ಯಕ್ತಿಗಳು ಸೇರುತ್ತಾರೆ. ಸಿದ್ಧಾಂತ, ನೀತಿ, ನಿಯಮ, ಮೂಲ ವಿಚಾರವಾದ, ಅಭಿವೃದ್ಧಿಯ ಬಗ್ಗೆ ದೂರವೇ ಇರುವ ಇವರು, ಅಭಿವೃದ್ಧಿಯ ಅಧ್ಯಯನ ಮಾಡುವುದಾಗಲಿ, ಕಲಿಯಲೂ ಸಿದ್ಧರಿರುವದಿಲ್ಲ. ತಮ್ಮ ಉಳಿವಿಗೆ ನಿಧಿ ಸಂಗ್ರಹಿಸುವ ಹಾಗೂ ಸಂಪನ್ಮೂಲ ಶೇಖರಿಸುವಲ್ಲಿ ಹೆಚ್ಚಿನ ಆಸಕ್ತಿ ತೋರಿಸುತ್ತಾರೆ. ದುರ್ದೈವದ ಸಂಗತಿ ಏನೆಂದರೆ, ಇಂದಿನ ಸರ್ಕಾರೇತರ ಸಂಸ್ಥೆಗಳಲ್ಲಿ ಶೇಕಡಾ ೨೫ ರಿಂದ ೩೦ರ ವರೆಗೆ ಇಂಥವರೆ ತುಂಬಿದ್ದಾರೆ. ಆದ್ದರಿಂದ,

ಇವರಿಗೆ ಸರಿದಾರಿ ತೋರಿ, ತಪ್ಪಿದಲ್ಲಿ ತಿದ್ದಿ, ಪರಿವರ್ತನೆ, ಅಥವಾ ತೀವ್ರ ತರಾಟೆಗೆ ತೆಗೆದುಕೊಳ್ಳಬೇಕಾದ ಅವಶ್ಯಕತೆಯಿದೆ.

**೨.೧.೬ ಕಪಟ ಸ್ವಯಂ ಸೇವಾ ಸಂಸ್ಥೆಗಳು :**

ಸ್ವಯಂ ಸೇವಾ ಸಂಘಟಣೆಯ ಒಳ್ಳೆಯ ಹೆಸರಿನ ದುರ್ಲಾಭ ಮಾಡಿಕೊಳ್ಳಲೆಂದೇ ಜನರು ಇಂಥ ಸರ್ಕಾರೇತರ ಸಂಸ್ಥೆಗಳನ್ನು ಪ್ರಾರಂಭಿಸುತ್ತಾರೆ. ಸ್ವಯಂ ಸೇವಾಸಂಸ್ಥೆಯ ಕ್ಷೇತ್ರದಲ್ಲಿ ಬೆಳೆಯುತ್ತಿರುವ ಸಮಸ್ಯೆ ಕಪಟ ಸ್ವಯಂ ಸೇವಾಸಂಸ್ಥೆಗಳನ್ನು ದಂಡಿಸುವ ಅಥವಾ ರದ್ದುಮಾಡುವ ಅವಶ್ಯಕತೆ ಇದೆ.

ಸರ್ಕಾರೇತರ ಸಂಸ್ಥೆಗಳಲ್ಲಿ ಗುಣಮಟ್ಟದ ಸಂಸ್ಕೃತಿಯನ್ನು ಅಳವಡಿಸಬೇಕು. ಏಕೆಂದರೆ ಬಡವರ ಏಳ್ಗೆಗೆ ಹೋರಾಡುತ್ತವೆ ಎಂದ ಮಾತ್ರಕ್ಕೆ ಅವುಗಳ ಗುಣಮಟ್ಟವೂ ಕಳಪೆಯಾಗಿರಬೇಕಿಲ್ಲ. ೨೧ನೇ ಶತಮಾನದ ಸರ್ಕಾರೇತರ ಸಂಸ್ಥೆಗಳಂತಾಗಲು ದಾಖಲೆಗಳ ವ್ಯವಸ್ಥಿತ ನಿರ್ವಹಣೆ, ಸಮುದಾಯದ ಸಭೆಗಳಲ್ಲಿ, ತರಬೇತಿ ಯೋಜನೆಗಳಲ್ಲಿ ಸಂಘಟನೆಯಲ್ಲಿಯೂ ಕೂಡ ಗುಣಮಟ್ಟದ್ದಾಗಿರಬೇಕು. ಈ ಗುಣಮಟ್ಟದ ಸಂಸ್ಕೃತಿ ಕೆಳಮಟ್ಟದ ಸರ್ಕಾರೇತರ ಸಂಸ್ಥೆಗಳಲ್ಲೂ ಪಸರಿಸಿದಾಗ ಮಾತ್ರ ಸಮುದಾಯದ ಪ್ರಗತಿ ಮತ್ತು ಪರಿವರ್ತನೆ ಆಗುವ ಸಾಧ್ಯತೆ ಇದೆ. ಭೋಸ್‌ರವರು ಸ್ವಯಂ ಪ್ರೇರಿತ ಕಾರ್ಯಗಳನ್ನು ಸಂಘಟಿತರಾಗಿ ನಿರ್ವಹಿಸುವ ಏಕೋಭಾವ ಹೊಂದಿದ ಸಮೂಹವನ್ನು ಸರ್ಕಾರೇತರ ಸಂಸ್ಥೆ ಎಂದು ಕರೆಯುತ್ತಾರೆ. ಈ ಸಿದ್ಧಾಂತವು ಪ್ರಸ್ತುತ ಅಧ್ಯಯನಕ್ಕೆ ಸೈದ್ಧಾಂತಿಕ ಚೌಕಟ್ಟನ್ನು ನೀಡುತ್ತದೆ.

**೨.೫ ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಬೆಳವಣಿಗೆ :**

ಸರ್ಕಾರೇತರ ಸಂಸ್ಥೆಗಳ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಅವಧಿಯಲ್ಲಿನ ಪ್ರಗತಿಯನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಕಂಡುಕೊಳ್ಳಬಹುದು. ದೇಶದಲ್ಲಿ ಸರ್ಕಾರೇತರ ಸಂಸ್ಥೆಗಳ ಬೆಳವಣಿಗೆಯನ್ನು ಅರಿತುಕೊಳ್ಳುವದಕ್ಕೆ ಸಮೃದ್ಧ ಗ್ರಂಥ ಸಾಹಿತ್ಯ ಲಭ್ಯವಿದೆ. ಭಾರತದಲ್ಲಿ ವೇದಕಾಲದಲ್ಲಿಯೂ ಸಹ ಸ್ವಯಂ ಸೇವೆಯು ಒಂದಿಲ್ಲೊಂದು ರೀತಿಯಲ್ಲಿ ಇದ್ದುದರ ದಾಖಲೆಗಳು ದೊರೆಯುತ್ತವೆ. ಧರ್ಮ ಗ್ರಂಥಗಳಲ್ಲಿಯೂ ಇದರ ದಾಖಲೆ ಕಂಡುಬರುತ್ತದೆ.

ಪ್ರಾಚೀನ ಮತ್ತು ಮಧ್ಯಯುಗೀನ ಅವಧಿಯಲ್ಲಿ 'ಸ್ವಯಂ ಸೇವೆ'ಯ ಕ್ಷೇತ್ರ ಪೂರ್ತಿಯಾಗಿ ಶಿಕ್ಷಣ, ಆರೋಗ್ಯ, ಸಾಂಸ್ಕೃತಿಕ ಚಟುವಟಿಕೆಗಳನ್ನು ಸ್ವತಂತ್ರವಾಗಿ ನಡೆಸುವದರಲ್ಲಿ ತೊಡಗಿಕೊಂಡಿದ್ದು, ಅದರಂತೆ, ನೆರೆಹಾವಳಿ, ಬರಗಾಲ, ಅತಿಕ್ರಮಣ ಮುಂತಾದ ತುರ್ತು ಪರಿಸ್ಥಿತಿಗಳಲ್ಲಿಯೂ ಸಹ ಸರ್ಕಾರೇತರ ಸಂಸ್ಥೆಗಳು ಕಾರ್ಯೋನ್ಮುಖವಾಗುತ್ತಿದ್ದವು. ಹೀಗೆಲ್ಲ, ಸ್ವಯಂ ಸೇವಾ ಸಂಸ್ಥೆಗಳು

ಕಾರ್ಯಮಾಡುವ ಅವಕಾಶವಿದ್ದಾಗಲೂ ಸಮಾಜದಲ್ಲಿನ ಅಸಮಾನತೆಯನ್ನು ತೊಡೆದುಹಾಕುವದಾಗಿರಲಿಲ್ಲ. ಈ 'ಸ್ವಯಂ ಸೇವೆ'ಯ ಪಾತ್ರ ಮೊಘಲ-ಬ್ರಿಟಿಷರ ಆಳ್ವಿಕೆ ಅವಧಿಯಲ್ಲಿಯೂ ಮುಂದುವರೆಯಿತು.

೧೯ನೇ ಶತಮಾನದಲ್ಲಿ ವಸಾಹತು ಷಾಹಿಗಳ ಬೆಂಬಲದಿಂದ ಕ್ರೈಸ್ತ ಧರ್ಮಗುರುಗಳು ಸ್ವಯಂಸೇವಾ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸಿದರು. ಒಂದು ಕಾಲದಲ್ಲಿ ಅಸಹಾಯಕ ಜನತೆಗೆ ಅವರು ನೀಡುತ್ತಿದ್ದ 'ಸೇವೆ' ಅತ್ಯುತ್ಕೃಷ್ಟ ಪ್ರಮಾಣದಲ್ಲಿತ್ತು. ಆದರೆ, ಇದು ಮತಾಂತರಕ್ಕೆ ಮುನ್ನುಡಿ ಎಂದು ಜನರಲ್ಲಿ ತಪ್ಪು ತಿಳುವಳಿಕೆ ಪಸರಿಸಿತು. ಆದರೂ ಕೂಡಾ, ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಕ್ಕೆ ಕ್ರೈಸ್ತ ಪಾದ್ರಿಗಳ ಸೇವೆ ಗಣನೀಯವಾಗಿತ್ತು. ೧೯ನೇ ಶತಮಾನದ ಮೊದಲರ್ಧದ ಅವಧಿಯಲ್ಲಿ ಪಾದ್ರಿಗಳ ಸಮಾಜ ಸುಧಾರಣ ಚಳುವಳಿಗಳು ಭಾರತೀಯ ಸಮಾಜದಲ್ಲಿ ತಮ್ಮದೇಯಾದ ಹೆಗ್ಗುರುತುಗಳನ್ನು ಬಿಚ್ಚಿಟ್ಟಿದೆ. ಈ ಅವಧಿಯಲ್ಲಿ ಸಮಾಜದ ಉದ್ಧಾರಕ್ಕಾಗಿ ವ್ಯಕ್ತಿಗಳು ಶ್ರಮಿಸುವ ಉದ್ದೇಶದಿಂದ 'ಸೇವೆ'ಗೆ ಕಂಕಣಬದ್ಧರಾಗಿದ್ದರು. **ರಾಜಾರಾಮ ಮೋಹನರಾಯ್** ಅವರು ಸ್ಥಾಪಿಸಿದ 'ಬ್ರಹ್ಮಸಮಾಜ'ವು ಇದಕ್ಕೊಂದು ನಿದರ್ಶನ.

೧೯ನೇ ಶತಮಾನದ ಇನ್ನರ್ಧದ ಅವಧಿಯಲ್ಲಿ 'ಸ್ವಯಂಸೇವೆ'ಯ ಕ್ಷೇತ್ರವು ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಿಂದ ರಾಜಕೀಯ ವಲಯಕ್ಕೆ ವಿಸ್ತರಿಸಿತು. ಈ ಅವಧಿಯಲ್ಲಿ ಸ್ವಯಂಸೇವೆಯು ವೈವಿಧ್ಯತೆಯನ್ನು ಪಡೆಯಿತು. ಇದಕ್ಕೆ ಉದಾಹರಣೆಗಳೆಂದರೆ ಬ್ರಹ್ಮೋ ಸಮಾಜ (೧೮೨೮), ಸತ್ಯಶೋಧಕ ಸಮಾಜ (೧೮೭೩), ಇಂಡಿಯನ್ ನ್ಯಾಶನಲ್ ಸೋಶಿಯಲ್ ರಿಫಾರ್ಮೇಶನ್ ಅಸೋಶಿಯೇಶನ್ (೧೮೯೭), ಬ್ರಿಟಿಷ್ ಇಂಡಿಯನ್ ಅಸೋಶಿಯೇಶನ್, ಕಲ್ಕತ್ತಾ, ಬಾಂಬೆ ಟೆಕ್ಸಟೈಲ್ ವರ್ಕರ್ಸ್ ಅಸೋಶಿಯೇಶನ್ ಮುಂತಾದವುಗಳು.

೧೮೫೦-೧೯೦೦ರ ಮಧ್ಯದ ಅವಧಿಯಲ್ಲಿ ರಾಷ್ಟ್ರೀಯತೆಯ ಪ್ರಜ್ಞೆ ಮತ್ತು ಸ್ವ-ಸಹಾಯದ ಅಲೆಯು ಸಾಮಾಜಿಕ-ರಾಜಕೀಯ ಚಳುವಳಿಗೆ ಮುಖ್ಯ ಪ್ರೇರಣೆಯಾಗಿ, ಅಂದಿನ ಕಾರ್ಯಯೋಜನೆಗಳ ಮೇಲೆ ಪ್ರಭಾವ ಬೀರಿದವು. ಅದರಂತೆ, ೨೦ನೇ ಶತಮಾನದ ಅವಧಿಯಲ್ಲಿ ಧಾರ್ಮಿಕೇತರ ಸಂಸ್ಥೆಗಳು ಸಮಾಜ ಕಲ್ಯಾಣ ಕಾರ್ಯದಲ್ಲಿ ತೊಡಗಿಕೊಂಡವು.

೧೯೦೦ನೇ ವರ್ಷದ ಅವಧಿಯಲ್ಲಿ ರಾಷ್ಟ್ರೀಯತೆಯ ಚಳುವಳಿಗಳು ಹಲವಾರು ಸರ್ಕಾರೇತರ ಸಂಸ್ಥೆಗಳು ಪ್ರವೇಶಗೊಳ್ಳಲು ಅವಕಾಶ ನೀಡಿದವು. ಸ್ವಾತಂತ್ರ್ಯ ಚಳುವಳಿ ಮತ್ತು ರಾಷ್ಟ್ರವನ್ನು ದಾಸ್ಯಮುಕ್ತ ಗೊಳಿಸುವ ಉದ್ದೇಶದಿಂದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಸಮಾಜದ ಕೆಳಸ್ಥರದ-ಹರಿಜನ ಗಿರಿಜನರ ಉದ್ಧಾರಕ್ಕಾಗಿ 'ಹರಿಜನ ಸೇವಕ ಸಂಘ' (೧೯೩೨),

ಕಸ್ತೂರಬಾ ಗಾಂಧಿ 'ನ್ಯಾಶನಲ್ ಮೆಮೊರಿಯಲ್ ಟ್ರಸ್ಟ್‌ವೆಂಬ ಕಲ್ಯಾಣ ಸಂಸ್ಥೆಗಳನ್ನು ಹುಟ್ಟುಹಾಕಿದರು. ಇವುಗಳಿಂದ ಸರ್ಕಾರೇತರ ಸಂಸ್ಥೆಗಳು ಕಾರ್ಯಗೈಯುವ ಉದ್ದೇಶದಲ್ಲಿ ಪ್ರಮುಖ ಬದಲಾವಣೆಯಾಗಿ, ಸಹಾಯ-ಬಯಸುವದಕ್ಕೆ ಬದಲಾಗಿ ಸ್ವಾತಂತ್ರ್ಯತೆ ಹೊಂದುವದೆಡೆಗೆ ಸಾಗಿತು.

**೨.೫.೧ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಪ್ರಗತಿ :**

ಭಾರತ ಸ್ವಾತಂತ್ರ್ಯ ಹೊಂದುವದರೊಂದಿಗೆ, ಸಾವಿರಾರು ಸರ್ಕಾರೇತರ ಸಂಸ್ಥೆಗಳು ಅಸ್ತಿತ್ವದಲ್ಲಿ ಬಂದವು, ಅವುಗಳ ಸಂಖ್ಯೆಯು ಅಸಂಖ್ಯಾತವಾಗಿ ವೃದ್ಧಿಸಿತು. ಅವುಗಳ ಜೊತೆಗೆ ಕಾರ್ಯಗಳಲ್ಲಿ ಮತ್ತು ಉದ್ದೇಶಗಳಲ್ಲಿ ವೈವಿಧ್ಯತೆಯು ಕಾಣಿಸಿಕೊಂಡಿತು. ಇವುಗಳ ಪ್ರಗತಿಯನ್ನು ಕೆಳಗಿನ ಕೋಷ್ಟಕದಿಂದ ಅರಿತುಕೊಳ್ಳಬಹುದಾಗಿದೆ.

***ಕೋಷ್ಟಕ-೨.೫.೧ : ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಪ್ರಗತಿ***

| ಅವಧಿ | ಸಂಸ್ಥೆಗಳ ಸಂಖ್ಯೆ |
|---|---|
| ೧೯೦೦ಕ್ಕಿಂತ ಮುಂಚೆ | ೧೦೭ |
| ೧೯೦೧-೧೯೧೦ | ೭೧ |
| ೧೯೧೧-೧೯೨೦ | ೧೩೮ |
| ೧೯೨೧-೧೯೩೦ | ೩೦೩ |
| ೧೯೩೧-೧೯೪೦ | ೫೨೨ |
| ೧೯೪೧-೧೯೫೦ | ೧೩೫೦ |
| ೧೯೫೧-೧೯೬೦ | ೩೨೬೩ |

***ಮೂಲ: ಜೋಯೆಲ್ ಭೋಸ್, ವ್ಹಾಲಂಟರಿ ಸೋಸಿಯಲ್ ವೆಲ್ಫೇರ್ ಇನ್ ಇಂಡಿಯಾ, ಸ್ಟರ್ಲಿಂಗ್ ಪಬ್ಲಿಷರ್ ನ್ಯೂದೆಹಲಿ ೧೯೭೧ ಪು ೪೩.***

ಸರ್ಕಾರೇತರ ಸಂಸ್ಥೆಗಳು ಕ್ರಮೇಣವಾಗಿ ವೃದ್ಧಿಯಾಗುತ್ತಾ, ಸ್ವತಂತ್ರ್ಯೋತ್ತರದ ಅವಧಿಯಲ್ಲಿ ಗಣನೀಯವಾಗಿ ಹೆಚ್ಚಾಗಿದ್ದು ಸ್ಪಷ್ಟವಾಗಿ ತಿಳಿಯುತ್ತದೆ. ೧೯೦೦ರ ಅವಧಿಗೆ ಮುಂಚೆ ಕೇವಲ ೧೦೭ ಇದ್ದಂತಹ ಸಂಖ್ಯೆಯು, ೧೯೬೦ರ ಅಂತ್ಯಕ್ಕೆ ೫೭೬೪ ಕ್ಕೇರಿತು. ಸ್ವಾತಂತ್ರ್ಯ ನಂತರದಲ್ಲಿ ಈ ಬೆಳವಣಿಗೆಗೆ ಮುಖ್ಯವಾಗಿ ಮಹಾತ್ಮಾ ಗಾಂಧೀಜಿಯವರು ನೀಡಿದ ಮುಂದಾಳತ್ವ ಮತ್ತು ತತ್ವಗಳೇ ಕಾರಣವೆನ್ನಬಹುದು.

ಸರ್ಕಾರೇತರ ಸಂಸ್ಥೆಗಳಿಗೆ ಪ್ರಾಮುಖ್ಯತೆಯನ್ನು ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿಯೇ ನೀಡಲಾಯಿತು. ಯೋಜನೆಯ ಕರಡು ಈ ಅಂಶವನ್ನು ಸ್ಪಷ್ಟಪಡಿಸುತ್ತಾ, ಸಾಮಾಜಿಕ ಮತ್ತು ಆರ್ಥಿಕ ಸೇವೆಯನ್ನು ನೀಡುವ ಉದ್ದೇಶ ಹೊಂದಿದ ಯಾವುದೇ ಸಂಸ್ಥೆಯ ಕಾರ್ಯವನ್ನು 'ಸೇವೆ'ಎಂದು ಪರಿಗಣಿಸಿ, ರಾಜ್ಯ ಸರ್ಕಾರಗಳು ಸರ್ವ ರೀತಿಯ ಸಹಕಾರ ನೀಡಿ,

ಅವುಗಳ ಕಾರ್ಯಶಕ್ತಿಯು ವೃದ್ಧಿಸುವಂತಾಗಬೇಕೆಂದು ತಿಳಿಸಲಾಗಿದೆ. ಈ ಯೋಜನೆಯು ಸೆಂಟ್ರಲ್ ಸೋಸಿಯಲ್ ವೆಲ್ಫೇರ್ ಬೋರ್ಡ್ ೧೯೫೩ರಲ್ಲಿ ಸ್ಥಾಪನೆಗೊಳ್ಳಲು ನಾಂದಿಯಾಯಿತು. ಅಲ್ಲದೆ ಸರ್ಕಾರೇತರ ಸಂಸ್ಥೆಗಳಿಗೆ ಅನುದಾನ ನೀಡುವ ಉದ್ದೇಶಕ್ಕಾಗಿ ಒಟ್ಟು ರೂ. ೪ಕೋಟಿಗಳನ್ನು ಮೀಸಲಿಡಲಾಯಿತು. ಸರ್ಕಾರೇತರ ಸಂಸ್ಥೆಗಳ ಬೆಳವಣಿಗೆಯ ಇತಿಹಾಸದಲ್ಲಿ ಈ ಬೋರ್ಡ್‌ನ ಸ್ಥಾಪನೆಯು ಒಂದು ಮೈಲುಗಲ್ಲಾಯಿತು. ಅವುಗಳ ಬೆಳವಣಿಗೆಗೆ ಹಣಕಾಸಿನ ಸಹಾಯ ನೀಡುವುದೇ ಬೋರ್ಡ್‌ನ ಮುಖ್ಯ ಉದ್ದೇಶವಾಗಿತ್ತು.

**ಲಲಿತಾ** ಮತ್ತು **ಕೊಹ್ಲಿಯವರ**[೧೮]ಅಧ್ಯಯನದ ಪ್ರಕಾರ, ೧೯೫೩ ರಿಂದ ೧೯೮೦ರ ಅವಧಿಯಲ್ಲಿ ೧೭೯೩ರಷ್ಟಿದ್ದ ಸರ್ಕಾರೇತರ ಸಂಸ್ಥೆಗಳು ೮೦೫೨ಕ್ಕೆ ಹೆಚ್ಚಿ, ಐದು ಪಟ್ಟು ಬೆಳವಣಿಗೆ ದಾಖಲಿಸಿದವು. ೧೯೫೩-೧೯೬೧ರ ಅವಧಿಯಲ್ಲಿ ಶೇ. ೧೧೭ರಷ್ಟು ಹೆಚ್ಚಿ, ಒಟ್ಟು ೩೦೦೦ ಸರ್ಕಾರೇತರ ಸಂಸ್ಥೆಗಳು ಸ್ಥಾಪನೆಗಳಾದವು ಇವುಗಳಲ್ಲಿ ೨೦೦೦ ರಷ್ಟು ಸರ್ಕಾರೇತರ ಸಂಸ್ಥೆಗಳು ಕೇವಲ ಮೂರು ವರ್ಷದ ಅವಧಿ ಅಂದರೆ, ೧೯೫೪ ರಿಂದ ೧೯೫೭ರ ಅವಧಿಯಲ್ಲಿ ಪ್ರಾರಂಭಗೊಂಡವು.

ಸರ್ಕಾರೇತರ ಸಂಸ್ಥೆಗಳ ಕುರಿತು ಅಧ್ಯಯನ ನಡೆಸಿ, ಅವುಗಳ ಪ್ರಗತಿಗೆ ಸಹ ಕರಿಸುವದಕ್ಕಾಗಿ ಸಾರ್ವಜನಿಕರ ಸಹಕಾರದಿಂದ ೧೯೮೮ರಲ್ಲಿ ನ್ಯಾಶನಲ್ ಇನ್‌ಸ್ಟಿಟ್ಯುಟ್ ಫಾರ್ ರಿಸರ್ಚ್ ಆ್ಯಂಡ್ ಟ್ರೇನಿಂಗ್ ಸಂಸ್ಥೆಯನ್ನು ಹುಟ್ಟು ಹಾಕಲಾಯಿತು. ಈ ಸಂಸ್ಥೆಯು ನಂತರ, 'ನ್ಯಾಶನಲ್ ಇನ್‌ಸ್ಟಿಟ್ಯುಟ್ ಆಫ್ ಪಬ್ಲಿಕ್ ಕೋ-ಆಪರೇಶನ್ ಆ್ಯಂಡ್ ಚೈಲ್ಡ್ ಡೆವ್ಹಲಪಮೆಂಟ್' ಆಗಿ ಸ್ಥಾಪನೆಗೊಂಡಿತು. ಇದೇ ಅವಧಿಯಲ್ಲಿ 'ಪೀಪಲ್ಸ್ ಆ್ಯಕ್ಷನ್ ಫಾರ್ ಡೆವ್ಹಲಪ್‌ಮೆಂಟ್ ಆಫ್ ಇಂಡಿಯಾ' ಎಂಬ ಇನ್ನೊಂದು ಸಂಸ್ಥೆಯು ಸ್ಥಾಪನೆಯಾಯಿತು. ಗ್ರಾಮಗಳ ಅಭಿವೃದ್ಧಿಗಾಗಿ, ೧೯೮೩ರಲ್ಲಿ 'ಕೌನ್ಸಿಲ್ ಫಾರ್ ಅಡ್ವಾನ್ಸ್‌ಮೆಂಟ್ ಆಫ್ ರೂರಲ್ ಟೆಕ್ನಾಲಜಿ' ಎಂಬ ಸಂಸ್ಥೆಯು ಸ್ಥಾಪನೆಗೊಂಡಿತು. ಸಪ್ಟೆಂಬರ್ ೧೯೮೬ರಲ್ಲಿ ಈ ಸಂಸ್ಥೆಯು ['ಕಪಾರ್ಟ್'] ಕೌನ್ಸಿಲ್ ಫಾರ್ ಅಡ್ವಾನ್ಸ್‌ಮೆಂಟ್ ಆಫ್ ಪೀಪಲ್ಸ್ ಆ್ಯಕ್ಷನ್ ಆ್ಯಂಡ್ ರೂರಲ್ ಟೆಕ್ನಾಲಜಿ ಸಂಸ್ಥೆಯೊಂದಿಗೆ ವಿಲೀನಗೊಂಡಿತು. ಇದರಿಂದ ಸರ್ಕಾರೇತರ ಸಂಸ್ಥೆಗಳ ಕಾರ್ಯಯೋಜನೆಗಳನ್ನು, ಅಭಿವೃದ್ಧಿ ಕಾರ್ಯವನ್ನು ವ್ಯವಸ್ಥಿತಗೊಳಿಸುವ ಉದ್ದೇಶ ಸುಲಭವಾಯಿತು. ಗ್ರಾಮೀಣ ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿಗೊಳ್ಳುವಲ್ಲಿ 'ಕಪಾರ್ಟ್'ಸಂಸ್ಥೆಯು ಸಕಾರಾತ್ಮಕ ಪ್ರೇರಣೆ ನೀಡಿತು. ಅದರಿಂದ ಸಂಸ್ಥೆಗಳ ಕಾರ್ಯಚಟುವಟಿಕೆಗಳು ವ್ಯವಸ್ಥಿತವಾಗಿ ಸಂಘಟನೆಗೊಂಡವು. ಅಷ್ಟೇಅಲ್ಲದೆ ಗ್ರಾಮಗಳು ಸರ್ವಾಂಗೀಣ ಪ್ರಗತಿಯನ್ನು ಕಂಡುಕೊಳ್ಳುವುದು ಸಾಧ್ಯವಾಯಿತು. ಉದ್ಯೋಗ ಸೃಷ್ಟಿ, ಆದಾಯ ವೃದ್ಧಿ, ಸಮುದಾಯ ಅಸ್ತಿ ಸೃಷ್ಟಿ,

ಕುಡಿಯುವ ನೀರು ಮತ್ತು ಗೃಹಗಳ ನೀಡಿಕೆ ಮುಂತಾದವುಗಳು ಕಪಾರ್ಟ್‌ನ ವ್ಯಾಪ್ತಿಯಲ್ಲಿ ಪ್ರಮುಖವಾದವು.

**೨.೫.೨ ಸರ್ಕಾರೇತರ ಸಂಸ್ಥೆಗಳ ಗಾತ್ರ :**

ಸರ್ಕಾರೇತರ ಸಂಸ್ಥೆಗಳ ಗಾತ್ರ ಮತ್ತು ಸದ್ಯ ಅವುಗಳ ಸಂಖ್ಯೆಯೆಷ್ಟೆಂಬುದು ಜಿಜ್ಞಾಸೆಯ ವಿಷಯವೇ ಸರಿ! 'ಪ್ರಿಯಾ' ಎಂಬ ರಾಷ್ಟ್ರೀಯ ಸರ್ಕಾರೇತರ ಸಂಸ್ಥೆಯು ದೆಹಲಿ, ಮಹಾರಾಷ್ಟ್ರ, ತಮಿಳನಾಡು, ಮೇಘಾಲಯಾ, ಪಶ್ಚಿಮಬಂಗಾಳ ರಾಜ್ಯಗಳಲ್ಲಿ ವಿಸ್ತೃತವಾದ ಸರ್ವೆ ಕಾರ್ಯಮಾಡಿ ೨೦೦೨ ರಲ್ಲಿ ಫಲಿತಾಂಶಗಳನ್ನು ಪ್ರಕಟಿಸಿತು. ಈ ಸಮೀಕ್ಷೆಯ ಪ್ರಕಾರ ಸದ್ಯ ಭಾರತದಲ್ಲಿ ಒಟ್ಟು ೧.೨ ಮಿಲಿಯನ್ ಸರ್ಕಾರೇತರ ಸಂಸ್ಥೆಗಳಿವೆ.

**ನಕ್ಷೆ ೨.೫.೧**




***ಮೂಲ: 'ಪ್ರಿಯಾ',೨೦೦೨***

ಈ ನಕ್ಷೆಯು ಭಾರತದಲ್ಲಿನ ಸರ್ಕಾರೇತರ ಸಂಸ್ಥೆಗಳು ಕಾರ್ಯಗೈಯ್ಯುತ್ತಿರುವ ಪ್ರದೇಶದ ಬಗ್ಗೆ ಸ್ಪಷ್ಟ ಚಿತ್ರಣ ನೀಡುತ್ತದೆ. ಇದನ್ನು ಕೂಲಂಕೂಶವಾಗಿ ಪರೀಶಿಲಿಸಿದಾಗ, ಸರ್ಕಾರೇತರ ಸಂಸ್ಥೆಗಳು ಹೆಚ್ಚಿಗೆ ಗ್ರಾಮೀಣ ಭಾಗಗಳಲ್ಲಿ ಸೇವೆಯಲ್ಲಿ ತೊಡಗಿದ್ದು ಸ್ಪಷ್ಟವಾಗುತ್ತದೆ. ಇದು ದೇಶದಲ್ಲಿನ ಮತ್ತು ಐದು ರಾಜ್ಯಗಳಲ್ಲಿನ ಚಿತ್ರಣ ತೋರಿಸುತ್ತದೆ. ಅದರಂತೆ, ನಮ್ಮ ದೇಶದಲ್ಲಿ ಅರ್ಧಕ್ಕಿಂತ ಅಧಿಕ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಭಾಗದಲ್ಲಿವೆ. ಕೆಲವು ಸರ್ಕಾರೇತರ ಸಂಸ್ಥೆಗಳು ಪಟ್ಟಣದಲ್ಲಿ ಸ್ಥಾಪನೆಗೊಂಡಿದ್ದರೂ ಸಹ ಗ್ರಾಮೀಣ ಸಮುದಾಯಗಳನ್ನು ಸೇವೆಗೆ ಆಯ್ಕೆ ಮಾಡಿಕೊಳ್ಳುತ್ತವೆ.

**ನೋಂದಣಿ :**

ಸರ್ಕಾರೇತರ ಸಂಸ್ಥೆಗಳ ನೋಂದಣಿಯ ವಿಷಯವು ಅಷ್ಟೇ ಸ್ವಾರಸ್ಯಕರ. ಒಟ್ಟು ಅಸ್ತಿತ್ವದಲ್ಲಿರುವ ಸಂಸ್ಥೆಗಳಲ್ಲಿ ಅರ್ಧಕ್ಕರ್ಧ ನೋಂದಾಯಿತವಾದರೆ ಇನ್ನರ್ಧ ನೋಂದಣಿರಹಿತವಾಗಿವೆ.

**ನಕ್ಷೆ ೨.೫.೨ :**




*ಮೂಲ: 'ಪ್ರಿಯಾ',೨೦೦೨*

ಈ ನಕ್ಷೆಯನ್ನು ಅವಲೋಕಿಸಿದಾಗ ಅತೀ ಹೆಚ್ಚು ನೋಂದಾಯಿತ (ಶೇ. ೭೪) ಸರ್ಕಾರೇತರ ಸಂಸ್ಥೆಗಳು ಮಹಾರಾಷ್ಟ್ರ ರಾಜ್ಯದಲ್ಲಿ ಮತ್ತು ಅತೀ ಕಡಿಮೆ ನೊಂದಾಯಿತ ಸಂಸ್ಥೆಗಳು ಪಶ್ಚಿಮ ಬಂಗಾಳದಲ್ಲಿವೆ. ದೇಶದ ರಾಜಧಾನಿ ದೆಹಲಿಯಲ್ಲಿ ಸಹ ಶೇ.೩೦ ರಷ್ಟು ಸಂಸ್ಥೆಗಳು ಕಾನೂನಿನ ರೀತಿಯಲ್ಲಿ ನೋಂದಣಿಯಾಗಿಲ್ಲವೆಂಬುದು ಕಟು ಸತ್ಯ.

***೨.೫.೩ ಗಾತ್ರಗಳಲ್ಲಿನ ಭಿನ್ನತೆ :***

ಭಾರತದಲ್ಲಿನ ಸರ್ಕಾರೇತರ ಸಂಸ್ಥೆಗಳು ಮೂಲತಃ ಗಾತ್ರದಲ್ಲಿ ಚಿಕ್ಕದಾಗಿವೆ. ಆದ್ದರಿಂದ ನಾಲ್ಕರಲ್ಲಿ ಮೂರು ಭಾಗದಷ್ಟು (೩/೪) ಸಂಸ್ಥೆಗಳು ಕೇವಲ ಸ್ವಯಂ ಸೇವಕರನ್ನು ಹೊಂದಿವೆ ಅಥವಾ ಹೆಚ್ಚೆಂದರೆ ಒಬ್ಬ ನೌಕರರನ್ನು ಹೊಂದಿರುತ್ತವೆ. ಒಟ್ಟು ೧೨ ಸಂಸ್ಥೆಗಳ ಪೈಕಿ ಕೇವಲ ೧

ಸಂಸ್ಥೆಗಳಲ್ಲಿ (೮.೫%) ಮಾತ್ರ ಹತ್ತಕ್ಕಿಂತ ಅಧಿಕ ನೌಕರರು ನೇಮಕವಾಗಿದ್ದರೆ, ೨ರಿಂದ೫ ಸಂಸ್ಥೆಗಳಲ್ಲಿ ಒಬ್ಬ ಅಥವಾ ಯಾರೂ ನೌಕರರು ಇಲ್ಲದ್ದು ಕಂಡು ಬರುತ್ತದೆ. ಒಟ್ಟಾರೆಯಾಗಿ ಹೇಳಬೇಕೆಂದರೆ ಹೆಚ್ಚಿನ ಸರ್ಕಾರೇತರ ಸಂಸ್ಥೆಗಳಲ್ಲಿ ಸ್ವಯಂ ಸೇವಕರೇ ಸಂಸ್ಥೆಯನ್ನು ನಡೆಸುತ್ತಿರುವುದು ಕಂಡುಬರುತ್ತದೆ.

*ವೃತ್ತ ನಕ್ಷೆ ೨.೫.೩. ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಭಿನ್ನತೆ*




*ಮೂಲ: 'ಪ್ರಿಯಾ' ೨೦೦೨*

ಅಂದಾಜು ೧೨ ಲಕ್ಷ ಸಂಸ್ಥೆಗಳು ಗ್ರಾಮೀಣ ಭಾಗದಲ್ಲಿದ್ದು, ಗಾತ್ರದಲ್ಲಿ ಚಿಕ್ಕದಾಗಿವೆ. ಅಲ್ಲದೆ ಅರ್ಧಕ್ಕಿಂತ ಅಧಿಕ ಸಂಖ್ಯೆಯಲ್ಲಿ 'ನೋಂದಣಿ' ರಹಿತವಾಗಿವೆ.

**೨.೫.೪ ಕಾರ್ಯಚಟುವಟಿಕೆಗಳು :**

ವಿಶೇಷವಾಗಿ ಈ ಸಂಸ್ಥೆಗಳು ಯಾವ ಕ್ಷೇತ್ರದಲ್ಲಿ ತೊಡಗಿಕೊಂಡಿವೆ ಮತ್ತು ಅವು ಕೈಕೊಳ್ಳುವ ಚಟುಚಟಿಕೆಗಳು ಯಾವುವೆಂಬುದನ್ನು ತಿಳಿಯುವದು ಅವಶ್ಯ ಈ ನಿಟ್ಟಿನಲ್ಲಿ ಕೆಲವೊಂದು ಸಮೀಕ್ಷೆಯ ಅಂಶಗಳು ಗಮನಿಸುವುದಾದರೆ–

*ಕೋಷ್ಟಕ–೨.೫.೨ : ರಾಷ್ಟ್ರ ಮಟ್ಟದಲ್ಲಿನ ೫ ಪ್ರಮುಖ ಚಟುಚಟಿಕೆಗಳು :*

| ಅ.ನಂ | ವಿವರ | ಶೇಕಡಾ | ಸ್ಥಾನ |
|---|---|---|---|
| ೧ | ಧಾರ್ಮಿಕತೆ (ಸಾಮಾಜಿಕ ಅಭಿವೃದ್ಧಿಯಲ್ಲಿ ತೊಡಗಿಕೊಂಡದ್ದು) | ೨೬.೫ | ಪ್ರತಿ ೪ನೇ ಸಂಸ್ಥೆ |
| ೨ | ಸಮುದಾಯ/ಸಮಾಜ ಸೇವೆ | ೨೧.೩ | ಪ್ರತಿ ೫ನೇ ಸಂಸ್ಥೆ |
| ೩ | ಶೈಕ್ಷಣಿಕ | ೨೦.೪ | ಪ್ರತಿ ೫ನೇ ಸಂಸ್ಥೆ |
| ೪ | ಕ್ರೀಡೆ/ಸಾಂಸ್ಕೃತಿಕ | ೧೮.೦ | ಪ್ರತಿ ೬ನೇ ಸಂಸ್ಥೆ |
| ೫ | ಆರೋಗ್ಯ | ೬.೬ | ಪ್ರತಿ ೧೫ನೇ ಸಂಸ್ಥೆ |

*ಮೂಲ: ಪ್ರಿಯಾ : ೨೦೦೨*




ಬ್ರಿಟಿಷರ ದಾಸ್ಯದಿಂದ ೧೯೪೭ ರಲ್ಲಿ ಭಾರತ ಸ್ವಾತಂತ್ರ್ಯ ಪಡೆದಾಗಿನಿಂದ, ಸ್ವಯಂ ಸೇವಾ ಕ್ಷೇತ್ರವು ಜನತೆಯಲ್ಲಿ ಮತ್ತಷ್ಟು ಹೆಚ್ಚಿನ ಮಾನ್ಯತೆ–ಗೌರವಗಳಿಸಿದ್ದು ಮಹತ್ವದ್ದಾಗಿದೆ. ಏಕೆಂದರೆ, ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರೇ ಸ್ವತಃ ಇಂತಹ ಸೇವೆಯ ಮುಂಚೂಣಿಯಲ್ಲಿದ್ದುದು, ಮತ್ತು ಮತ್ತೊಬ್ಬರ ಕಷ್ಟ ನೀಗಿಸಲು ಯಾರು ತ್ಯಾಗಕ್ಕೆ ಸಿದ್ಧರಾಗಿ ಶ್ರಮಿಸಿರುತ್ತಾರೆಯೋ ಅವರನ್ನು ಅತ್ಯಂತ ಗೌರವದಿಂದ ಗುರುತಿಸುವ ಸಂಸ್ಕಾರ ಭಾರತದಲ್ಲಿ ಎಂದಿಂದಲೂ ಹಾಸುಹೊಕ್ಕಿದೆ. ಇದು ಮುಂದುವರೆದು, ಸ್ವತಂತ್ರ ಭಾರತದಲ್ಲಿ ಗಾಂಧೀಜಿಯವರು ಬೋಧಿಸಿದ ಸೇವಾ ನೀತಿಯ ಮತ್ತು ಅವರ ಅನುಯಾಯಿಗಳು ಸರ್ಕಾರದ ಕಾರ್ಯಗಳಲ್ಲಿನ ಕೊರತೆಯನ್ನು ಸೇವೆಯ ಮೂಲಕ

ಭರ್ತಿಗೊಳಿಸುವದು ಮುಖ್ಯವಾಯಿತು. ಗ್ರಾಮಗಳಲ್ಲಿ ನೇಕಾರರು ಸಹಕಾರ ಸಂಘಗಳನ್ನು ರಚಿಸಲು ಮುಂದಾಗಿ, ಒಟ್ಟಾಗಿ ತಮ್ಮ ಉತ್ಪನ್ನಗಳನ್ನು ಉತ್ತಮ ಬೆಲೆಗೆ ಪಟ್ಟಣಗಳಲ್ಲಿ ಮಾರಾಟ ಮಾಡುವ ಪದ್ಧತಿಗಳನ್ನು ಅಳವಡಿಸಿಕೊಂಡರು. ಇದೇ ತೆರನಾದ ಸಂಘಟನೆಗಳು ಹಾಲು–ಉತ್ಪನ್ನ ಮತ್ತು ಮೀನುಗಾರಿಕೆಯಲ್ಲಿ ಕಂಡುಬಂದವು. ಇವೆಲ್ಲ ಬೆಳವಣಿಗೆಗಳ ಮೂಲ ಸರ್ಕಾರೇತರ ಸಂಸ್ಥೆಗಳು ಸಾಕ್ಷರತೆ ಕಾರ್ಯಕ್ರಮಗಳನ್ನು ಅಯೋಜಿಸುತ್ತಾ ತಮ್ಮ ಸೇವೆ ನೀಡಲು ಯೋಜನೆ ಪ್ರಕಟಿಸಿದವು. ೧೯೮೦ರ ದಶಕದಲ್ಲಿ ಸ್ವಯಂ ಸೇವಾ ಸಂಸ್ಥೆಗಳೆಂದು ಗುರುತಿಸಿಕೊಂಡ ಸಂಸ್ಥೆಗಳು ತಮ್ಮ ಸೇವೆಗಳನ್ನು ವಿಶೇಷ ಕ್ಷೇತ್ರಗಳಿಗೆ ಮೀಸಲಿಡುವಂತಹ ಬೆಳವಣಿಗೆ ಕಂಡು ಬಂದಿತು.

ಅಭಿವೃದ್ಧಿ ಹೊಂದುತ್ತಿರುವ ಬೃಹತ್ ಭಾರತದಂತಹ ದೇಶದಲ್ಲಿ, ಸರ್ಕಾರವು ರೂಪಿಸುವ ಯೋಜನೆಗಳಲ್ಲಿ ಸಾಕಷ್ಟು ಕಂದಕಗಳಿರುತ್ತವೆ, ಅವು ಕೆಲವು ಸಾರಿ ಉದ್ದೇಶ ಪೂರ್ವಕವಾಗಿದ್ದರೆ, ಇನ್ನೂ ಕೆಲವು ವೇಳೆ ಸಂಪನ್ಮೂಲದ ಅಥವಾ ಜಾಗ್ರತಿಯ ಕೊರತೆಯಿಂದ ಉಂಟಾಗಿರಬಹುದು. ಸರ್ಕಾರದ ಕಾರ್ಯಕ್ರಮಗಳಿಂದ ಫಲ ಪಡೆಯದೇ ಉಳಿದ ಜನರಿಗೆ ತಮ್ಮ ಸೇವೆಯಿಂದ ಕಂದಕವನ್ನು ತುಂಬುವ ಪ್ರಯತ್ನವನ್ನು ಸರ್ಕಾರೇತರ ಸಂಸ್ಥೆಗಳು ಮಾಡುತ್ತವೆ. ಸರ್ಕಾರ ದೃಷ್ಟಿ ಹರಿಸದ ಕೆಲವು ಕ್ಷೇತ್ರಗಳೆಡೆಗೆ ಈ ಸಂಸ್ಥೆಗಳು ಚಲಿಸುತ್ತವೆ.

**೨.೬ ಸರ್ಕಾರ– ಸರ್ಕಾರೇತರ ಸಂಸ್ಥೆಗಳ ಸಂಬಂಧಗಳು :**

ದಶಕಗಳುದ್ದಕ್ಕೂ ಸರ್ಕಾರೇತರ ಸಂಸ್ಥೆಗಳು ಸರ್ಕಾರದ ಸಾಮಾಜಿಕ–ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಪ್ರತಿಸ್ಪಂದಿಸುತ್ತಿವೆ. ಸರ್ಕಾರವು ಬಂಡವಾಳ ಪ್ರೇರಿತ ಪ್ರಗತಿಯಿಂದ ಬಡತನ ತೊಲಗಿಸುವ ಕಾರ್ಯಕ್ರಮಗಳೆಡೆಗೆ ಮುಖಮಾಡಿದಾಗ, ಸರ್ಕಾರೇತರ ಸಂಸ್ಥೆಗಳು ಸಹ ಕಲ್ಯಾಣ ಸೇವೆಗಳಿಂದ ದಿಕ್ಕು ಬದಲಿಸಿ ಬಡತನ ನಿರ್ಮೂಲನದ ಪಣತೊಟ್ಟು ಕಾರ್ಯತಂತ್ರಗಳನ್ನು ರೂಪಿಸಲು ಕಾರ್ಯತತ್ಪರವಾದವು. ನಂತರ, ೧೯೯೦ರ ದಶಕದಲ್ಲಿ ರಾಜ್ಯಗಳು ವಿಶಾಲ ಆರ್ಥಿಕ ಮತ್ತು ರಚನಾತ್ಮಕ ಸುಧಾರಣೆಗಳಲ್ಲಿ ಮುಂದಾದಾಗ, ಸರ್ಕಾರೇತರ ಸಂಸ್ಥೆಗಳು ತಮ್ಮ ಚಟುವಟಿಕೆಗಳ ದೃಷ್ಟಿಕೋನ ಪೂರಕವಾಗಿ ಕಾರ್ಯ ನಿರ್ವಹಿಸಲು ಹೊಸ ಪದ್ಧತಿಗಳನ್ನು ಕಂಡುಕೊಂಡವು ಮತ್ತು ತನ್ಮೂಲಕ ಸರ್ಕಾರದ ಧೋರಣೆಗಳಲ್ಲಿ ಬದಲಾವಣೆಗೆ ಕಾರಣವಾದವು. ಅವುಗಳು ಸರ್ಕಾರಕ್ಕೆ ತಮ್ಮ ಬೆಂಬಲ ಹೆಚ್ಚಿಸುತ್ತ ಧೋರಣೆಗಳ ಮೇಲೆ ಪ್ರಭಾವ ಬೀರುತ್ತಾ, ಕಾರ್ಯ ಜಾಲವನ್ನು ಹೆಚ್ಚಿಸಿದವು. ಜೊತೆಗೆ ಕಾರ್ಯಕ್ಷೇತ್ರವನ್ನು ವೃದ್ಧಿಸಿದವು, ಜನತೆ ಕೇಂದ್ರೀಕೃತವಾದವು. ಇದೇ ೧೯೯೦ರ ದಶಕದಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಮಧ್ಯೆ ಸಂಪರ್ಕ ಕೊಂಡಿಯಾಗಿ ಕಾರ್ಯಗೈಯುವ ವೇದಿಕೆಗಳು ಅಸ್ತಿತ್ವಕ್ಕೆ ಬಂದವು. ಹಲವಾರು ವಿಚಾರ ಸಂಕಿರಣಗಳನ್ನು ಆಯೋಜಿಸಿ ಸರ್ಕಾರ ಮತ್ತು

ಸರ್ಕಾರೇತರ ಸಂಸ್ಥೆಗಳ ಮಧ್ಯೆ ವಿಚಾರ ಸಮಾಲೋಚನೆಗೆ ಯೋಜನಾ ಆಯೋಗವು ನಾಂದಿ ಹಾಡಿತು. ೨೦೦೦ರಲ್ಲಿ ಯೋಜನಾ ಅಯೋಗವನ್ನು ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಮಧ್ಯೆ ನೋಡಲ್ ಸಂಸ್ಥೆಯಾಗಿ ನೇಮಿಸಲಾಯಿತು. ಅದರಂತೆ ಸರ್ಕಾರೇತರ ಸಂಸ್ಥೆಗಳ ಚಟುಚಟಿಕೆಗಳನ್ನು ಅತೀ ಕಡು-ಬಡವರಿಗೆ ಲಭ್ಯಗೊಳಿಸಲು ಅನುಕೂಲವಾಗುವಂತೆ 'ಕಪಾರ್ಟ'ವನ್ನು ೧೯೯೦ ರ ದಶಕದ ಕೊನೆಯಾರ್ಧದಲ್ಲಿ ವಿಕೇಂದ್ರೀಕರಣಗೊಳಿಸಲಾಯಿತು. ಸರ್ಕಾರದ ಮತ್ತು ಸರ್ಕಾರೇತರ ಸಂಸ್ಥೆಗಳ ಉದ್ದೇಶಗಳು ಬೇರೆ ಬೇರೆಯಾಗಿರುತ್ತವೆ. ಸರ್ಕಾರ ಮತ್ತು ಸರ್ಕಾರೇತರ ಸಂಘಟನೆಗಳು ವಿಭಿನ್ನವಾಗಿದ್ದು ಸರ್ಕಾರದಲ್ಲಿ ಅಧಿಕಾರಶಾಹಿ ವರ್ತನೆಯಿದ್ದರೆ, ಸರ್ಕಾರೇತರ ಸಂಸ್ಥೆಗಳು ಸ್ಥಳೀಯ ಜನತೆಯ ಆಶಯಗಳಿಗೆ ಸ್ಪಂದಿಸುತ್ತವೆ. ಆದರೆ, ಸರಕಾರೇತರ ಸಂಸ್ಥೆಗಳಿಗೆ ಸಂಪನ್ಮೂಲ ಸಹಾಯ ನೀಡಲು ಸರ್ಕಾರವು ಕೆಲವು ಸಂಸ್ಥೆಗಳನ್ನು ಸ್ಥಾಪಿಸಿದೆ. ಉದಾಹರಣೆಗಾಗಿ ಖಾದಿ ಮತ್ತು ಗ್ರಾಮೀಣ ಉದ್ದಿಮೆಗಳ ಸಹಕಾರ ಸಂಘಗಳು, ಕೇಂದ್ರದ ಸಮಾಜ ಕಲ್ಯಾಣ ಬೋರ್ಡ್, ರಾಷ್ಟ್ರೀಯ ಬಂಜರು ಭೂಮಿ ಅಭಿವೃದ್ಧಿ ಬೋರ್ಡ್, ಕಪಾರ್ಟ್ ಇತ್ಯಾದಿ. ಅಂತಹ ಹಣಕಾಸಿನ ಸಹಾಯವನ್ನು ಸರ್ಕಾರೇತರ ಸಂಸ್ಥೆಗಳು ಪಡೆಯುತ್ತಿರುವದರಿಂದ ಅವುಗಳ ಸ್ವಾಯತ್ತತೆಯು ಕಡಿಮೆಯಾಗುವ ಭಯವು ಹೆಚ್ಚಾಗುತ್ತದೆ. ಅಲ್ಲದೆ, ಕೇವಲ ಸರ್ಕಾರದ ಯೋಜನೆಗಳನ್ನು ಕಾರ್ಯರೂಪಕ್ಕಿಡುವ ಮಾರ್ಗ-ಸಂಸ್ಥೆಗಳಾಗಿ ಪರಿಣಮಿಸುತ್ತವೆ. ಜನ ವಿರೋಧಿ ಸರ್ಕಾರದ ಧೋರಣೆಗಳನ್ನು ವಿರೋಧಿಸುವ ತಮ್ಮ ಗುರಿಯಿಂದ ಹಿಮ್ಮುಖವಾಗಿ ಚಲಿಸಿ, ಸರ್ಕಾರದ ಸಹಭಾಗಿ ಸಂಸ್ಥೆಗಳಾಗಿ ಕಾರ್ಯಗೈಯ್ಯುವ ಸ್ಥಿತಿಯುಂಟಾಗುತ್ತದೆ. ನಯವಾಗಿ ಸರ್ಕಾರದೊಂದಿಗೆ ಪಾಲುಗಾರಿಕೆಯ ಒಪ್ಪಂದವಾದಂತೆ ಕಂಡು ಬರುತ್ತದೆ. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಮಧ್ಯೆ ನವೀನ ಕಾರ್ಯದ ಸಂಬಂಧವನ್ನು ಸ್ಪಷ್ಟಗೊಳಿಸುವಂತಹ ಸರ್ಕಾರೇತರ ಸಂಸ್ಥೆಗಳು ಕ್ಷೇತ್ರಕ್ಕೆ ಪರಿಚಯಿಸುವಂತಹ ರಾಷ್ಟ್ರೀಯ ನೀತಿಯನ್ನು ಭಾರತ ಸರ್ಕಾರದ ಕ್ಯಾಬಿನೆಟ್ ಸಚಿವರು ಮೇ ೨೦೦೭ರಲ್ಲಿ ರೂಪಿಸಿದರು. ಈ ನೀತಿಯಿಂದಾಗಿ ಸರ್ಕಾರವು ವಿವಿಧ ಕಾರ್ಯಗಳನ್ನು ಮತ್ತು ವೈವಿಧ್ಯತೆಗಳನ್ನು ಹೊಂದಿರುವ ಸರ್ಕಾರೇತರ ಸಂಸ್ಥೆಗಳನ್ನು ಪ್ರೇರೇಪಿಸುವ, ಸಬಲಗೊಳಿಸುವ ಮತ್ತು ಸಹಕರಿಸುವದಕ್ಕೆ ಬದ್ಧವಾಗಿ ಸ್ವತಂತ್ರತೆ, ರಚನಾತ್ಮಕತೆ ಮತ್ತು ಪರಿಣಾಮಕಾರಕ ಕಾರ್ಯಗಳಿಗೆ ಬೆಂಬಲಿಸಬೇಕೆಂದು ಸ್ಪಷ್ಟವಾಯಿತು. ಇದರಿಂದಾಗಿ ಸರ್ಕಾರೇತರ ಸಂಸ್ಥೆಗಳು ದೇಶದ ಜನರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಅಭಿವೃದ್ಧಿಗೆ ಸಹಕರಿಸುವಂತಾಯಿತು.

**೨.೭ ಸರ್ಕಾರೇತರ ಸಂಸ್ಥೆಗಳಲ್ಲಿನ ಹೊಸ ಬೆಳವಣಿಗೆಗಳು :**

ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಸಮುದಾಯದ ಕ್ರೀಯಾಶೀಲ ಬೆಳವಣಿಗೆಯನ್ನು ಆಪೇಕ್ಷಿಸುವ ಮತ್ತು ಅವುಗಳ ಸೇವಾಕ್ಷೇತ್ರದ ಶಕ್ತಿಯನ್ನು ಅಳೆಯಲು ಬಯಸುವ ಹಂತದಲ್ಲಿ, ಈ

ಕೆಳಗಿನ ಇತ್ತೀಚಿನ ಬದಲಾವಣೆಗಳ ಕಡೆಗೆ ಗಮನಹರಿಸುವದು ಅವಶ್ಯವೆನಿಸುತ್ತದೆ. ಇವುಗಳನ್ನು ವ್ಯವಸ್ಥಿತವಾಗಿ ಲೆಕ್ಕಿಸಿ, ಪ್ರತಿಯೊಂದು ದಿಶೆಯನ್ನು ತನ್ನದೆಯಾದ ಮಹತ್ವದ ದೃಷ್ಠಿಕೋನದಿಂದ ಅವಲೋಕಿಸುವುದು ಅಧ್ಯಯನದ ದೃಷ್ಠಿಯಿಂದ ಉತ್ತಮ ಪ್ರಯತ್ನವಾಗಿದೆ.

**ಅ) ಸರ್ಕಾರೇತರ ಸಂಸ್ಥೆಗಳ ವೃದ್ಧಿ ಮತ್ತು ಸದಸ್ಯತ್ವ :**

ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಎಷ್ಟೊಂದು ಚೈತನ್ಯಶೀಲವಾಗಿವೆ ಎಂಬುದಕ್ಕೆ ಅವುಗಳು ಬೆಳೆಯುತ್ತಿರುವ ಸಂಖ್ಯೆಯಿಂದ ಅರಿತುಕೊಳ್ಳಬಹುದಾಗಿದೆ. ಸರ್ಕಾರೇತರ ಸಂಸ್ಥೆಗಳು ಅತೀ ತೀವ್ರಗತಿಯಲ್ಲಿ ವೃದ್ಧಿಸುತ್ತಿರುವದು ಯಾವಾಗಲೂ ಶಕ್ತಿ ವರ್ಧತೆಯ ಸೂಚನೆಯಾಗಿದೆ. ಆದರೆ, ಅತೀ ಚಿಕ್ಕ, ಅಶಕ್ತ, ಪರಿಣಾಮಕಾರಿಯಲ್ಲದ ಸರ್ಕಾರೇತರ ಸಂಸ್ಥೆಗಳು ಕೇವಲ ಬಾಹ್ಯ ನಿಧಿಗಳನ್ನು ಕಬಳಿಸುವದಕ್ಕೆ ಸ್ಥಾಪನೆಗೊಳ್ಳುತ್ತಾ ಹೋದರೆ, ಸರ್ಕಾರೇತರ ಸಂಸ್ಥೆಗಳ ಚೈತನ್ಯ ಉಡುಗಿ ಹೋಗುವ ಸಾಧ್ಯತೆಯಿದೆ.

ಸರ್ಕಾರೇತರ ಸಂಸ್ಥೆಗಳಲ್ಲಿ ಬೆಳೆಯುತ್ತಿರುವ ಸದಸ್ಯತ್ವದ ಪ್ರಮಾಣ ಗಮನಿಸಿದಾಗ, ಅದರಲ್ಲೂ ವಿಶೇಷವಾಗಿ ವಿವಿಧ ವೃತ್ತಿಗಳಲ್ಲಿ ಪರಿಣಿತರಾದ ಜನರು ಸಹಭಾಗಿಗಳಾದ ಜನರ ಸಂಘಟನೆಗಳಾದ ಸಹಕಾರ ಸಂಘಗಳು, ಮಹಿಳಾ ಗುಂಪುಗಳು, ರೈತರ ಸಂಘಗಳು ಮುಂತಾದ ಸರ್ಕಾರೇತರ ಸಂಸ್ಥೆಗಳು ಸದಸ್ಯರಾದಾಗ ಸರ್ಕಾರೇತರ ಸಂಸ್ಥೆಯು ಚೈತನ್ಯದಾಯಕವಾಗುವುದರಲ್ಲಿ ಸಂಶಯವಿಲ್ಲ.

**ಬ) ವೈವಿಧ್ಯತೆ :**

ಸರ್ಕಾರೇತರ ಸಂಸ್ಥೆಗಳ ವೈವಿಧ್ಯತೆ ಮತ್ತು ವೈಶಿಷ್ಟತೆಗಳನ್ನು ಅವಲೋಕಿಸಿದಾಗ ಒಂದೊಂದು ಸಂಸ್ಥೆ ಒಂದೊಂದು ಗುಂಪಿನ ಜನರ, ಅಭಿರುಚಿಯನ್ನು ಸೂಚಿಸುತ್ತದೆ. ಈ ಸರ್ಕಾರೇತರ ಸಂಸ್ಥೆಗಳು ಸದಾಕಾಲ–ನಿರಂತರ ಅಭಿವೃದ್ಧಿ ಕಾರ್ಯಗಳಲ್ಲಿ ಮಹತ್ವದ ಪಾತ್ರವಹಿಸಬೇಕೆಂಬ ಅಪೇಕ್ಷೆ ಇದ್ದರೆ, ಅವುಗಳು ಪರಿಸರ, ಆರೋಗ್ಯ, ಕುಟುಂಬ ಕಲ್ಯಾಣ–ಯೋಜನೆ, ಕೃಷಿ, ಉದ್ಯಮ ಅಭಿವೃದ್ಧಿಯಂತಹ ಕ್ಷೇತ್ರಗಳಲ್ಲಿ ತಮ್ಮ ಅಸ್ತಿತ್ವವನ್ನು ಹೊಂದಬೇಕು. ಅಂದರೆ, ಉತ್ಪಾದಕ ಮತ್ತು ಸೇವಾ ಗುಂಪುಗಳು ಮತ್ತು ಮಹಿಳೆಯರು ಮತ್ತು ಪುರುಷರು ಸೇರಿದಂತಹ ಗುಂಪುಗಳಿರಬೇಕು. ಇನ್ನೊಂದು ಮಹತ್ವದ ಅವಶ್ಯಕತೆಯೆಂದರೆ, ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಮಧ್ಯೆ ಸೂಕ್ತ ತರಹದ ಸಂಬಂಧ–ಸಹಭಾಗಿತ್ವ ಇರಬೇಕು. ಏಕೆಂದರೆ, ರಾಷ್ಟ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು ಹೆಚ್ಚಿನ ಸಂಪನ್ಮೂಲ ಸಂಗ್ರಹಿಸುವ ಮತ್ತು ಸರ್ಕಾರದೊಂದಿಗೆ ನಿಕಟತೆ ಹೊಂದುವಲ್ಲಿ ಯಶಸ್ವಿಯಾದರೆ, ಸಮುದಾಯ ಮಟ್ಟದಲ್ಲಿ ಉನ್ನತ ಕಾರ್ಯ ನಿರ್ವಹಿಸುತ್ತವೆ. ಬದಲಾವಣೆಯ ಸಾಧನಗಳಾಗಿ, ಶೋಧಕರಾಗಿ ಮತ್ತು ಪ್ರಭಾವ ಬೀರುವ ಸಂಸ್ಥೆಗಳಾಗಿ ಸರ್ಕಾರೇತರ ಸಂಸ್ಥೆಗಳು ಪರಿಣಾಮಕಾರಿ

ಮತ್ತು ಚಲನಶೀಲವನ್ನು ಕಾಪಾಡಿಕೊಳ್ಳಬೇಕಾದರೆ ವೈವಿಧ್ಯತೆಯು ಅತ್ಯವಶ್ಯಕ. ಪರಿಪೂರ್ಣ ಕ್ರೀಯಾಶೀಲ ಮತ್ತು ಚಲನಶೀಲ ಸರ್ಕಾರೇತರ ಸಂಸ್ಥೆಗಳು ಎನ್ನಬೇಕಾದರೆ, ಅದರಲ್ಲಿ ವಿವಿಧ ರಂಗಗಳ, ವಿಭಿನ್ನ ಮತ್ತು ಹೋರಾಟ ಬದ್ಧತೆ ಹೊಂದಿದ ವಿಚಾರಧಾರೆ-ಅಭಿರುಚಿಗಳಿಗೆ ಅವಕಾಶ ಇರಬೇಕು.

**ಕ) ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಮತ್ತು ಅಂತರಾಷ್ಟ್ರೀಯ ಸಂಘಗಳ ಮಧ್ಯೆ ನಿಕಟತೆ:**

ಸ್ಥಳೀಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಗೈಯ್ಯುತ್ತಿರುವ ಸರ್ಕಾರೇತರ ಸಂಸ್ಥೆಗಳ ಮಧ್ಯದ ಸಂಬಂಧ-ನಿಕಟತೆಯು ಸ್ಥಳೀಯ ಸಂಸ್ಥೆಯ ಚೈತನ್ಯಶೀಲತೆಯನ್ನು ಅಳೆಯುವ ಒಂದು ಅಂಶ. ಸರ್ಕಾರೇತರ ಸಂಸ್ಥೆಗಳ ಸಬಲೀಕರಣದ ಪ್ರಮುಖ ಆಯಾಮವೆಂದರೆ ಹಲವಾರು ಸ್ತರಗಳಲ್ಲಿ ಕಾರ್ಯಪ್ರವೃತ್ತರಾಗಿರುವುದು ಮತ್ತು ಎಲ್ಲ ಸರ್ಕಾರೇತರ ಸಂಸ್ಥೆಗಳು ಒಟ್ಟಾಗಿ ಕಾರ್ಯಮಾಡಬೇಕು, ಸರ್ವಾಂಗೀಣ ಅಭಿವೃದ್ಧಿಗಾಗಿ ಮಾಹಿತಿ-ಹಂಚಿಕೊಳ್ಳುತ್ತಿರಬೇಕು. ಸರ್ಕಾರೇತರ ಸಂಸ್ಥೆಗಳು ಮಾಹಿತಿ ಹಂಚುವಲ್ಲಿ, ಸರ್ಕಾರ ಮತ್ತು ದಾನಿಗಳ ಜೊತೆಗೆ ಸ್ನೇಹ ಸೇತು ಬೆಸೆಯಲು ಸೂಕ್ತ ಮಾರ್ಗಗಳಾಗಿರುತ್ತವೆ. ಕೆಲವು ರಾಷ್ಟ್ರಗಳಲ್ಲಿ, ನಿರ್ದಿಷ್ಟ ಕ್ಷೇತ್ರಗಳಲ್ಲಿಯ ಎಲ್ಲ ಸರ್ಕಾರೇತರ ಸಂಸ್ಥೆಗಳಿಗೆ ಪ್ರತ್ಯೇಕ ರಾಷ್ಟ್ರ ಮಟ್ಟದ ಸಂಬಂಧಗಳಿವೆ.

ನಿಕಟ-ಜೋಡಣೆಗಳಲ್ಲಿ ಮತ್ತೊಂದು ಮೈಲುಗಲ್ಲಾಗಬಹುದಾದ ಸಾಧ್ಯತೆ ಎಂದರೆ ಒಂದು ದೇಶದಲ್ಲಿನ ಸರ್ಕಾರೇತರ ಸಂಸ್ಥೆಗಳು ಮತ್ತೊಂದು ರಾಷ್ಟ್ರದ ಸರ್ಕಾರೇತರ ಸಂಸ್ಥೆಗಳ ಜೊತೆಗೆ ಸಂಬಂಧ-ಸಂಪರ್ಕ ಹೊಂದಿರುವುದು. ಅಂತಾರಾಷ್ಟ್ರೀಯ ಬಂಧುತ್ವಕ್ಕೆ ನಾಂದಿ ಹಾಡುವಂತಹ. ಸಂಬಂಧಗಳನ್ನು ಸಹಕಾರ-ಚಳುವಳಿಗಳಲ್ಲಿ ಕಂಡದ್ದಾಗಿದೆ. ಇತ್ತೀಚಿನ ದಿನಗಳಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿಯ ಸರ್ಕಾರೇತರ ಸಂಸ್ಥೆಗಳು ಸ್ಥಳೀಯ ಸರ್ಕಾರೇತರ ಸಂಸ್ಥೆಗಳ ಜೊತೆಗೆ ಸೇವಾಕ್ಷೇತ್ರದಲ್ಲಿ ಪಾಲುಗಾರಿಕೆಯನ್ನು ಹೊಂದಿ, ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಚೈತನ್ಯಶೀಲತೆ ಹೊಂದುವಲ್ಲಿ ಸಹಾಯ ನೀಡುತ್ತಿವೆ. ಇದಕ್ಕಾಗಿ ಅಂತಾರಾಷ್ಟ್ರೀಯ ಸರ್ಕಾರೇತರ ಸಂಸ್ಥೆಗಳು ಮಾಹಿತಿಯನ್ನು ಹಂಚಿಕೊಳ್ಳುತ್ತಿವೆ. ಅನುಭವ ಹಾಗೂ ತಾಂತ್ರಿಕ ಜ್ಞಾನವನ್ನು ವಿನಿಮಯ ಮಾಡಿಕೊಳ್ಳುತ್ತಿವೆ.

**ಡ) ಸರ್ಕಾರದ ಕಾರ್ಯಯೋಜನೆ ಮತ್ತು ಧೋರಣೆಗಳ ಮೇಲೆ ಪ್ರಭಾವ ಬೀರುವ ಸಾಮರ್ಥ್ಯ:**

ಸರ್ಕಾರೇತರ ಸಂಸ್ಥೆಗಳ ಸಬಲೀಕರಣಕ್ಕಾಗಿ ರಾಜಕೀಯ ಮತ್ತು ಆರ್ಥಿಕ ಸಹಾಯವು ಮಹತ್ವದ್ದಾಗಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಪರಿಸರ ರಕ್ಷಣೆ, ಕುಟುಂಬ ಯೋಜನೆ, ಕೃಷಿ ಕ್ಷೇತ್ರಗಳಲ್ಲಿನ ಸರ್ಕಾರೇತರ ಸಂಸ್ಥೆಗಳು ಸರ್ಕಾರದ ಧೋರಣೆಗಳ ಮೇಲೆ ಪರಿಣಾಮಕಾರಿ ಪ್ರಭಾವ ಬೀರುತ್ತಿವೆ. ಸಾರ್ವಜನಿಕರ ಹಿತಾಸಕ್ತಿ ಕಾಪಾಡುವಲ್ಲಿ ಹೋರಾಡುತ್ತಿವೆ. ಮಹಿಳಾ

ಸಂಘಗಳಿಂದಲೂ ಇಂತಹ ಪ್ರಯತ್ನಗಳು ನಡೆಯುತ್ತಿರುವದು ಪ್ರಶಂಸನೀಯ. ಸರ್ಕಾರೇತರ ಸಂಸ್ಥೆಗಳು ಸರ್ಕಾರದ ಧೋರಣೆಗಳ ಮೇಲೆ ಹಲವಾರು ಮಾರ್ಗಗಳಿಂದ ಪ್ರಭಾವ ಬೀರುತ್ತವೆ.

**ಇ) ಖಾಸಗಿ ಕ್ಷೇತ್ರದೊಂದಿಗೆ ಸಂಬಂಧ :**

ಸಹಕಾರ ಮತ್ತು ಹಣಕಾಸು ಬೆಂಬಲವನ್ನು ಪ್ರೇರೇಪಿಸುವ ಖಾಸಗಿ ಕ್ಷೇತ್ರದೊಂದಿಗೆ ಸಮತೋಲಿತ ಮತ್ತು ವಿವೇಚನೆಯ ಸಂಬಂಧ ಹೊಂದಿರುವದು ಸರ್ಕಾರೇತರ ಸಂಸ್ಥೆಗಳ ಚಲನಶೀಲತೆಯ ಮತ್ತೊಂದು ಮುಖ.

**ಫ) ಸ್ವತಂತ್ರ ಕಾರ್ಯನಿರ್ವಹಣೆ :**

ಸ್ವತಂತ್ರ ಕಾರ್ಯನಿರ್ವಹಣೆ ಸರ್ಕಾರೇತರ ಸಂಸ್ಥೆಗಳ ಸಬಲೀಕರಣದ ಮುಖ್ಯ ಅಂಶವಾಗಿದ್ದು ರಾಜಕೀಯ ಮತ್ತು ಆರ್ಥಿಕ ಉನ್ನತಿಗೆ ಸಂಬಂಧ ಹೊಂದಿದೆ. ಮುಕ್ತವಾಗಿ ಸಂವಾದಿಸುವ ಮತ್ತು ಬದಲಾವಣೆಗೆ ಒತ್ತಾಯಿಸುವಂತಹ ಸರ್ಕಾರೇತರ ಸಂಸ್ಥೆಗಳಿದ್ದಾಗಲೇ ಶಕ್ತಿಯುತ ಮತ್ತು ಚೈತನ್ಯಶೀಲ ಬದಲಾವಣೆ ತರಲು ಸಾಧ್ಯ. ಅದಕ್ಕಾಗಿ ದಾನಿಗಳಿಂದ ಮತ್ತು ಸರ್ಕಾರದ ನಿಯಂತ್ರಣಗಳಿಂದ ಮುಕ್ತವಾಗಿರುವುದು ಅವಶ್ಯವಾಗಿದೆ. ಆದರೆ, ಈಗಿನ ಸ್ಥಿತಿಯಲ್ಲಿ ಸ್ವತಂತ್ರ ಕಾರ್ಯಾಚರಣೆಯನ್ನು ಅಳೆಯುವದು ಕಷ್ಟದ ಕಾರ್ಯ.

ಹಣಕಾಸಿನ ಸ್ವಾತಂತ್ರ್ಯ ಚೈತನ್ಯಶೀಲತೆಯನ್ನು ಅಳೆಯಲು ಒಂದು ಸೂತ್ರವೇನೋ ಸರಿ. ಆದರೆ, ಸರ್ಕಾರ ಅಥವಾ ದಾನಿಗಳಿಂದ ಹೊರತಾಗಿ ಇತರ ಮೂಲಗಳಿಂದ ಸರ್ಕಾರೇತರ ಸಂಸ್ಥೆಗಳು ಸ್ವೀಕರಿಸುತ್ತಿರುವ ಹಣಕಾಸಿನ ಮೊತ್ತವನ್ನಾಗಲಿ ಅಥವಾ ಸಂಪನ್ಮೂಲ ಮೊತ್ತವನ್ನು ಗಮನಿಸಿದರೆ ಸ್ವಾತಂತ್ರ್ಯದ ಪರಿ ಗೊತ್ತಾಗುತ್ತದೆ.

**ಗ) ಸದಸ್ಯರ ಅಪೇಕ್ಷೆಗಳಿಗೆ ಪ್ರತಿಸ್ಪಂದಿಸುವಿಕೆ ಮತ್ತು ಭಾಗವಹಿಸುವಿಕೆ ಪ್ರಮಾಣ :**

ಸ್ಥಳೀಯ ಸಮುದಾಯದ ಸರ್ಕಾರೇತರ ಸಂಸ್ಥೆಗಳು ಶಕ್ತಿ ಮತ್ತು ಚೈತನ್ಯ ಶೀಲತೆ ಹೊಂದಬೇಕಾದರೆ ಅವು ಸದಸ್ಯರ ಅಪೇಕ್ಷೆಗಳಿಗೆ ಪ್ರತಿಸ್ಪಂದಿಸುತ್ತಿರಬೇಕು ಮತ್ತು ಭಾಗವಹಿಸುವಿಕೆಯು ಹೆಚ್ಚಾಗಿರಬೇಕು. ಸಾಕಷ್ಟು ಸಂಖ್ಯೆಯ ಸರ್ಕಾರೇತರ ಸಂಸ್ಥೆಗಳು ಪ್ರಜಾಸತ್ತಾತ್ಮಕ ಮತ್ತು ಭಾಗವಹಿಸುವಿಕೆಯ ಲಕ್ಷಣಗಳನ್ನು ಹೊಂದಿದ್ದರೂ ಸಹ, ಅವು ಎಲ್ಲಾ ಕಾಲದಲ್ಲಿಯೂ ಉಳಿಯಲಾರದು, ಕಾಲಾಂತರದಲ್ಲಿ ಜಿಡ್ಡುಗಟ್ಟಿದಂತಾಗುತ್ತವೆ. ಅವುಗಳ ಮುಖಂಡರು ಸಂಕುಚಿತ ಮನೋಭಾವದವರಾಗಿ, ಸದಸ್ಯರ ಅಪೇಕ್ಷೆಗಳೆಡೆಗೆ ಅಲಕ್ಷ ತೋರುವದರಿಂದಾಗಿ ಈ ಸರ್ಕಾರೇತರ ಸಂಸ್ಥೆಗಳು ಸಂಕುಚಿತ ಭಾವನೆ ತಳೆಯುತ್ತವೆ. ಕೆಳಸ್ತರದ ಸಂಘಗಳು ಅತೀ ಚೈತನ್ಯಶೀಲವಾಗಿರುತ್ತವೆ,

ನಂತರ ಅಧಿಕಾರಶಾಹಿತ್ವದ ರುಚಿ ತಗುಲಿ ಬೇರೆ ರೂಪಪ್ರದರ್ಶಿಸುತ್ತವೆ. ಇದನ್ನು ಅರಿತುಕೊಳ್ಳಲು, ಸರ್ಕಾರೇತರ ಸಂಸ್ಥೆಗಳ ಮುಖಂಡತ್ವದಲ್ಲಿ ಬದಲಾಗುತ್ತಿರುವ ತೀವ್ರತೆ, ಆಡಳಿತ ಸಮಿತಿಗಳಲ್ಲಿ ಹೆಚ್ಚುತ್ತಿರುವ ಪ್ರತಿನಿಧಿಗಳ ಬದಲಾವಣೆಗಳು, ಸದಸ್ಯರ ಜೊತೆಗೆ ಅಯೋಜನೆಗೊಳ್ಳುವ ಸಭೆಗಳ ಸಂಖ್ಯೆ ಮುಂತಾದವುಗಳನ್ನು ಅಭ್ಯಸಿಸಬಹುದು.

**ಹ) ನಿರಂತರತೆ ಹಾಗೂ ಸಾಮರ್ಥ್ಯ :**

ಇದೂ ಸಹ ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ಅಳೆಯುವ ಅಂಶ. ಆದರೆ ಯಾವ ತರಹದ ಸರ್ಕಾರೇತರ ಸಂಸ್ಥೆಗಳ ಕುರಿತು ಮಾತನಾಡುತ್ತೇವೆ ಎಂಬುದರ ಮೇಲೆ ದೀರ್ಘ ಸಾಮರ್ಥ್ಯತೆಯ ವ್ಯಾಖ್ಯಾನ ಮತ್ತು ಅಳತೆಯು ಅವಲಂಬಿಸಿದೆ. ಉದಾಹರಣೆಗಾಗಿ, ಸಹಕಾರ ಸಂಘಗಳ ಅಥವಾ ಇತರ ಉತ್ಪಾದಕ ಸಂಸ್ಥೆಗಳ ಬಗ್ಗೆ ಚರ್ಚಿಸುತ್ತಿದ್ದರೆ, ಬಂಡವಾಳೀಕರಣ ಮತ್ತು ಹೆಚ್ಚುವರಿ ಆದಾಯಗಳನ್ನು ಸಂಗ್ರಹಿಸುವ ಪ್ರಮಾಣವು ದೀರ್ಘ ಸಾಮರ್ಥ್ಯತೆಯನ್ನು ನಿರ್ಧರಿಸುವ ಅಂಶಗಳಾಗುತ್ತವೆ. ಹಣಕಾಸಿನ ಅಂಶದೊಂದಿಗೆ ಇನ್ನೂ ಕೆಲವು ಸಾಂಸ್ಥಿಕ ಅಂಶಗಳು ದೀರ್ಘಸಾಮರ್ಥ್ಯವನ್ನು ನಿರ್ಧರಿಸುತ್ತವೆ. ವ್ಯವಸ್ಥಿತ ಯೋಜನೆ, ವೈಜ್ಞಾನಿಕ ನಿರ್ವಹಣೆ, ಸ್ವಚ್ಛ ಆಡಳಿತಗಳು ಸಹ ಸರ್ಕಾರೇತರ ಸಂಸ್ಥೆಗಳ ನಿರಂತರ ಸಾಮರ್ಥ್ಯವನ್ನು ಎತ್ತಿ ತೋರಿಸುತ್ತವೆ.

**ಐ) ಸಾಂಸ್ಥಿಕ ಸಾಮರ್ಥ್ಯ :**

ನಿರಂತರ ಅಭಿವೃದ್ಧಿಯಲ್ಲಿ ಭಾಗಿಯಾಗಿ ಸಮುದಾಯಗಳನ್ನು ಪೋಷಿಸಲು, ಸಾಕಷ್ಟು ಸಾಂಸ್ಥಿಕ ಸಾಮರ್ಥ್ಯವನ್ನು ಸೃಷ್ಟಿಸುವದು ಅತೀ ಮುಖ್ಯವಾಗುತ್ತದೆ. ಸಾಂಸ್ಥಿಕ ಸಾಮರ್ಥ್ಯವೆಂದರೆ ವಿವಿಧ ರೀತಿಯ ಸಾಮರ್ಥ್ಯಗಳನ್ನು ಒಳಗೊಂಡಿದ್ದು, ಯೋಜನೆ–ನಿರ್ವಹಣೆ–ತಾಂತ್ರಿಕತೆಗಳನ್ನು ಎಷ್ಟೊಂದು ಪ್ರಮಾಣದಲ್ಲಿ ಅಳವಡಿಸಿದೆ ಎಂಬುದರ ಮೇಲೆ ಸಾಂಸ್ಥಿಕತೆ ಅವಲಂಬಿತವಾಗಿದೆ. ಸರ್ಕಾರೇತರ ಸಂಸ್ಥೆಗಳ ಹಣಕಾಸಿನ ಶಕ್ತಿ, ನಿರ್ವಹಣ ಶಕ್ತಿ, ಮೌಲ್ಯಮಾಪನ, ಲೆಕ್ಕಪತ್ರ ಇಡುವಿಕೆ, ಮಾಹಿತಿ ತಂತ್ರಜ್ಞಾನಗಳೆಲ್ಲವು ಸಾಂಸ್ಥಿಕ ಸಾಮರ್ಥ್ಯವನ್ನು ಅಳೆಯುವ ಗೋಲುಗಳಾಗಿರುತ್ತವೆ.

**ಜ) ಮಾಹಿತಿ ಲಭ್ಯತೆ ಮತ್ತು ಸಂವಹನ ಸಾಮರ್ಥ್ಯ :**

ಪರಿಣಾಮಕಾರಿ ಮತ್ತು ಚಲನಶೀಲ ಸರ್ಕಾರೇತರ ಸಂಸ್ಥೆಗಳ ರಂಗವನ್ನು ಹೊಂದಲು ಮೌಲ್ಯಗಳ, ಸಂವಹನ ತಂತ್ರಗಳ ಮತ್ತು ಮಾಹಿತಿಯ ಲಭ್ಯತೆಗಳು ಸಹ ಮಹತ್ವದ್ದಾಗುತ್ತವೆ. ಅಂತರ್–ಕ್ಷೇತ್ರಗಳ ಜಾಲವನ್ನು, ಸಮಾನಾಂತರ ಹಾಗೂ ಶ್ರೇಣಿಯುತ ಸಂಬಂಧಗಳನ್ನು ವೃದ್ಧಿಸುವದು ಉತ್ತಮ ಸಂಪರ್ಕ ವ್ಯವಸ್ಥೆಯಿಂದ ಸಾಧ್ಯವಾಗುತ್ತದೆ. ಸರ್ಕಾರೇತರ ಸಂಸ್ಥೆಗಳು

ತಮ್ಮಲ್ಲಿಯೇ ಮಾಹಿತಿ ಹಾಗೂ ಸಂಪನ್ಮೂಲ ಹಂಚಿಕೊಳ್ಳುವದು ಪರಸ್ಪರ ಅಭಿವೃದ್ಧಿಗೆ ಸಹಕಾರಿಯಾಗುತ್ತದೆ. ಸ್ಥಳೀಯ, ರಾಷ್ಟ್ರ ಮತ್ತು ಅಂತರ್‌ರಾಷ್ಟ್ರ ಮಟ್ಟದಲ್ಲಿಯು ಮಾಹಿತಿಯ ಹಂಚಿಕೊಳ್ಳುವಿಕೆಯು ನಿರಂತರ ಅಭಿವೃದ್ಧಿಗೆ ಪೂರಕ ಅಂಶವಾಗುತ್ತದೆ.

**ಲ) ನವ್ಯತೆ :**

ಒಂದು ಶಕ್ತಿಯುತ, ಬಲಯುತ–ಚೈತನ್ಯಶೀಲ ಸರ್ಕಾರೇತರ ಸಂಸ್ಥೆ ಸಮುದಾಯದ ವಿಶ್ವಾಸ ಹೊಂದಲು ಹೊಸ ಹೊಸ ಯೋಜನೆ–ಸಂಶೋಧನೆಗಳು ಮುಖ್ಯವಾಗುತ್ತವೆ. ಅದನ್ನು ವ್ಯಾಖ್ಯಾನಿಸುವದು – ಅಳತೆಮಾಡುವುದು ಅಷ್ಟೇ ಕಠಿಣವಾಗಿದೆ. ಸರ್ಕಾರೇತರ ಸಂಸ್ಥೆಗಳ ದೀರ್ಘ ಸಾಮರ್ಥ್ಯತೆ ನಿರ್ಧರಿಸುವ ಹಲವಾರು ಅಂಶಗಳಲ್ಲಿ, ತಮ್ಮ ಸ್ಥಳೀಯ ಸಮುದಾಯದ ಕಷ್ಟಕರವಾದ ಅಭಿವೃದ್ಧಿಗೆ ತಡೆಯಾಗಿರುವ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಅಳವಡಿಸುವ ಹೊಸ–ಮಾರ್ಗಗಳು ಮುಖ್ಯವಾಗುತ್ತವೆ. ಇದನ್ನು ಪರೀಕ್ಷಿಸಲು ಸರ್ಕಾರೇತರ ಸಂಸ್ಥೆಗಳು ಹಲವು ಹೊಸ ಮಾದರಿಯ ಮಾರ್ಗಗಳನ್ನು ಅಳವಡಿಸುತ್ತವೆ.

**೨.೮ ಅಧ್ಯಯನ ಹಿನ್ನಲೆ ಹಾಗೂ ಗ್ರಂಥಗಳ ಪರಿಶೀಲನೆ:**

೨೦ನೇ ಶತಮಾನದಲ್ಲಿ ಭಾರತ ಹಾಗೂ ಪ್ರಪಂಚದಾದ್ಯಂತ, ಸರ್ಕಾರೇತರ ಸಂಸ್ಥೆಗಳು ಗೌರವಯುತವಾದ ಸ್ಥಾನಮಾನವನ್ನು ಗಳಿಸಿದ್ದನ್ನು ಅವುಗಳ ದೇಣಿಗೆದಾರರಿಂದ, ಸರ್ಕಾರದಿಂದ ಹಾಗೂ ಫಲಾನುಭವಿಗಳಿಂದ ಇತಿಹಾಸದುದ್ದಕ್ಕೂ ತಿಳಿಯಬಹುದಾಗಿದೆ (ಡಿಚರ್ ೧೯೬೮). ಗ್ರಾಮೀಣ ಅಭಿವೃದ್ಧಿಯಲ್ಲಿ ತಮ್ಮ ಕಾರ್ಯಚಟುವಟಿಕೆಗಳ ಪ್ರಕಟಣೆ ಹಾಗೂ ಸಾಧನೆಗಳ ಮೂಲಕ ಹೆಸರು ಮಾಡುತ್ತವೆ. ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಕಾರ್ಯಗಳು, ರಚನೆ, ಸ್ಥಾಪನೆ ಮುಂತಾದವುಗಳ ಬಗ್ಗೆ ವಿಫುಲ ಅಧ್ಯಯನಗಳಾಗಿವೆ. ಗ್ರಾಮೀಣ ಅಭಿವೃದ್ಧಿ ಮತ್ತು ಸರ್ಕಾರೇತರ ಸಂಸ್ಥೆಗಳು, ಬುಡಕಟ್ಟು ಜನಾಂಗ ಅಭಿವೃದ್ಧಿ ಮತ್ತು ಸರ್ಕಾರೇತರ ಸಂಸ್ಥೆಗಳು, ಮಹಿಳೆ ಮತ್ತು ಸರ್ಕಾರೇತರ ಸಂಸ್ಥೆಗಳ ಬಗ್ಗೆ ಅಧ್ಯಯನಗಳನ್ನು ಕೈಗೊಳ್ಳಲಾಗಿದೆ.

**೨.೯ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಬಗೆಗಿನ ಅಧ್ಯಯನಗಳು :**

ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸರ್ಕಾರೇತರ ಸಂಸ್ಥೆಗಳು ಸರ್ಕಾರ ಹಾಗೂ ಜನರ ನಡುವಿನ ಮಹತ್ವದ ಕ್ರಿಯಾಶೀಲ ಘಟಕಗಳೆಂದು ಪರಿಗಣಿಸಲಾಗಿದೆ. ಸರ್ಕಾರೇತರ ಸಂಸ್ಥೆಗಳು ಹೊಂದಾಣಿಕೆಯುಳ್ಳ ಪ್ರಜಾಸತ್ತಾತ್ಮಕ ಸ್ವರೂಪದಂತಿದ್ದರೂ ಸಬಲ ಅಭಿವೃದ್ಧಿಯಲ್ಲಿ ಅವುಗಳ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ವಿಭಿನ್ನ ದೃಷ್ಟಿಕೋನಗಳಿಂದ ಸರ್ಕಾರೇತರ ಸಂಸ್ಥೆಗಳು ಹಾಗೂ ಅಭಿವೃದ್ಧಿ

ಎಂಬ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಆದರೂ, ಇದಕ್ಕೆ ಸಂಬಂಧಿಸಿದ ಸಂಶೋಧನೆಗಳ ಸಂಕ್ಷಿಪ್ತ ವಿವರಗಳನ್ನು ಇಲ್ಲಿ ಮಂಡಿಸಲಾಗಿದೆ.

- **ಅಂಟ್ವಾಲ್**[೧೯] ಎಂಬುವರು ೧೯೯೪ರಲ್ಲಿ ಮಹಾರಾಷ್ಟ್ರದ 'ಮಾನವಲೋಕ್'ಎಂಬ ಸರ್ಕಾರೇತರ ಸಂಸ್ಥೆಯ ಬಗ್ಗೆ ಅಧ್ಯಯನ ಮಾಡಿ ಕಂಡುಕೊಂಡಿದ್ದು, ಈ ಸಂಘಟನೆಯು ಸಮಾನತೆ, ನೀರು ಹಂಚಿಕೆ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯಲ್ಲಿ ಮಹಿಳೆಯ ಸಹಭಾಗಿತ್ವ ತತ್ವಗಳನ್ನು ಆಧರಿಸಿ ಸರ್ವತೋಮುಖ ಅಭಿವೃದ್ಧಿ ಸಾಧಿಸುವ ಮೂಲಕ ಪ್ರಭಾವ ಬೀರಿದುದನ್ನು ಗುರುತಿಸಿದ್ದು.

- **ಕುಲಕರ್ಣಿ**[೨೦] ಎಂಬುವವರು ಅಭಿಪ್ರಾಯಿಸುವಂತೆ, ಸ್ವಯಂಸೇವಾ ಕಾರ್ಯವು ಗಾತ್ರದಲ್ಲಿ ಹಿರಿದಾಗುತ್ತಿದ್ದು, ಭಾರತದ ಸಂವಿಧಾನದ ಆಶಯದಂತೆ ಸ್ವಯಂ ಸೇವೆಯು ಬೃಹತ್ ಗಾತ್ರದಲ್ಲಿ ಬೆಳೆದು ದೇಶದ ಯೋಜನೆ ಹಾಗೂ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುವುದು ಅತ್ಯವಶ್ಯಕವಾಗಿದೆ.

- **ಖಾನ್ ಮತ್ತು ಥಾಮಸ್**[೨೧] ರವರ ಅಭಿಪ್ರಾಯದಂತೆ ಸ್ವಯಂ ಕಾರ್ಯವು ವ್ಯಾಪಕ ಮತ್ತು ಸಂಕೀರ್ಣವಾಗಿದೆ. ಗ್ರಾಮೀಣ ಅಭಿವೃದ್ಧಿಯ ಸಂದರ್ಭದಲ್ಲಿ, ಸರ್ಕಾರೇತರ ಸಂಸ್ಥೆಗಳು ಸರ್ಕಾರದೊಂದಿಗೆ ಪಾಲುಗಾರರಂತೆ ಜೊತೆಗೂಡಿ ಅಮೂಲಾಗ್ರ ಬದಲಾವಣೆ ತರುವ ಅಗತ್ಯವಿದೆ.

- **ಗೋನ್ಸಾಲ್ವ್ಸ್**[೨೨] ಇವರು ವಿವರಿಸಿರುವಂತೆ ಸರ್ಕಾರದಿಂದ ಅಥವಾ ರಾಜಕೀಯ ಮುಖಂಡರಿಂದ ಮಾತ್ರ ಸಮಾಜದ ಎಲ್ಲಾ ಕ್ಷೇತ್ರಗಳ ಪ್ರಗತಿ ಸಾಧ್ಯವಿಲ್ಲ. ಕಾರಣ ಸೂಕ್ತ ಸರ್ಕಾರೇತರ ಸಂಸ್ಥೆಗಳ ಅರ್ಪಣಾ ಭಾವದಿಂದ ಕಾರ್ಯಸಾಧನೆ ಸುಲಭವಾಗುತ್ತದೆ.

- **ಚಾರ್ಯುಲು**[೨೩] ಇವರು ಭಾರತದಲ್ಲಿ ಸರ್ಕಾರೇತರ ಸಂಸ್ಥೆಗಳ ಅಭಿವೃದ್ಧಿ ಹಾಗೂ ಪ್ರಗತಿಯ ಅಧ್ಯಯನ ಮಾಡಿ, ಸ್ವಾತಂತ್ರ ನಂತರ ದೇಶದುದ್ದಕ್ಕೂ ಸುಮಾರು ೧೦,೦೦೦ ಸರ್ಕಾರೇತರ ಸಂಸ್ಥೆಗಳನ್ನು ಹುಟ್ಟುಹಾಕಲಾಗಿದೆಯೆಂದು ಪ್ರತಿಪಾದಿಸಿದ್ದಾರೆ. ಅದರಂತೆ, ಈ ಅವಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಅಭಿವೃದ್ಧಿಯು ಅಸಮವಾಗಿದೆ.

- **ಚೌಧರಿ**[೨೪]ಯವರು ಅಭಿಪ್ರಾಯ ಪಡುವಂತೆ ಕೇಂದ್ರದ ಸಮಾಜ ಕಲ್ಯಾಣ ನಿಗಮದ ಸಹಾಯಧನ ಯೋಜನೆಯಿಂದ ಭಾರತದಲ್ಲಿ ೧೯೫೧-೬೦ರಲ್ಲಿ ಸರ್ಕಾರೇತರ ಸಂಸ್ಥೆಗಳು

ತೀವ್ರಗತಿಯಲ್ಲಿ ಹೆಚ್ಚಿನ ಪ್ರಗತಿಯನ್ನು ಹೊಂದಿವೆ. ಅವರು ತಾವು ಅಧ್ಯಯನ ಮಾಡಿದ ೬೦೦೦ ಸ್ವಯಂ ಸೇವಾ ಸಂಸ್ಥೆಗಳ ಅಧ್ಯಯನದಿಂದ ಇದನ್ನು ಪ್ರಸ್ತಾಪಿಸಿದ್ದಾರೆ. ಗುಜರಾತ, ಮಹಾರಾಷ್ಟ್ರ ಹಾಗೂ ರಾಜಸ್ಥಾನ ರಾಜ್ಯಗಳಲ್ಲಿ ಕೈಗೊಂಡ ಅಧ್ಯಯನದಂತೆ ಪ್ರತಿಶತ ಸುಮಾರು ೮೦ ರಷ್ಟು ಸರ್ಕಾರೇತರ ಸಂಸ್ಥೆಗಳು ೧೯೪೭ ರ ನಂತರ ಅಸ್ತಿತ್ವದಲ್ಲಿ ಬಂದಿವೆ. ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಗುಜರಾತ ಹಾಗೂ ಕೇರಳದಲ್ಲಿ ಅತೀ ಹೆಚ್ಚು ಸರ್ಕಾರೇತರ ಸಂಸ್ಥೆಗಳಿದ್ದರೂ, ಪ್ರಗತಿಯಲ್ಲಿ ಸಮಾನತೆ ಕಂಡುಬರುವುದಿಲ್ಲ.

- **ಟೆಂಡ್ಲರ**[೨೫] ಅವರು ಕಂಡುಕೊಂಡಂತೆ, ಸಹಭಾಗಿತ್ವದ ಪ್ರಕ್ರಿಯೆಯಲ್ಲಿ ಕಡುಬಡವರನ್ನು ತಲುಪುವಲ್ಲಿ ನಿರೀಕ್ಷೆಗಿಂತ ಕಡಿಮೆ ಮಟ್ಟದಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಗತಿ ಸಾಧಿಸಿವೆ.

- **ಪೌಲ್**[೨೬] ಎಂಬುವರ ವಾದದ ಪ್ರಕಾರ ಯಶಸ್ವೀ ಯೋಜನೆಗಳೆಲ್ಲವೂ ಬಾಹ್ಯ ಪರಿಸರಕ್ಕೆ ಸೂಕ್ತವಾಗುವ ನೀತಿಗಳನ್ನು ನಿರೂಪಿಸಿ, ಸಂಘಗಳ ಆಂತರಿಕ ವ್ಯವಸ್ಥೆ ಹಾಗೂ ಪ್ರಕ್ರಿಯೆಗಳನ್ನು ಹೊಂದಿಕೊಂಡಿರುತ್ತವೆ. ಒಂದು ಸಂಸ್ಥೆ ತನ್ನ ವ್ಯವಸ್ಥೆ ಮತ್ತು ಪ್ರಕ್ರಿಯೆಯನ್ನು ಬಾಹ್ಯ ವಾತಾವರಣಕ್ಕೆ ಹೊಂದಿಕೊಂಡು ಕಾರ್ಯ ನಿರ್ವಹಿಸುವಲ್ಲಿ ಹಾಗೂ ತಾನು ಹಾಕಿಕೊಂಡಿರುವ ಉದ್ದೇಶಗಳ ಹಾಗೂ ನೀತಿಗಳ ಮಧ್ಯದಲ್ಲಿನ ಸಮನ್ವಯತೆಗೆ ಹೆಚ್ಚಿನ ಪ್ರಧಾನ್ಯತೆ ನೀಡುತ್ತದೆ.

- **ಬೊಯ್ಸೆ**[೨೭] ಅವರು ೧೯೯೪ರಲ್ಲಿ ನಡೆಸಿದ ಅಧ್ಯಯನದಲ್ಲಿ ತಿಳಿಸಿರುವಂತೆ ಸರ್ಕಾರೇತರ ಸಂಸ್ಥೆಗಳು ಸಮುದಾಯ ಆಧಾರಿತ ಪುನರ್ವಸತಿ ಕಾರ್ಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತವೆ.

- **ಬೌರ್ಡಿಲ್ಲಾನ್**[೨೮] ಎಂಬುವರು ಟೋಕಿಯೋದ ಉಪವಿಭಾಗದ ಪರಿಶೀಲನೆ ಮಾಡಿದ್ದು ರಾಜಕೀಯ ನಾಯಕರು ಹಾಗೂ ಸರ್ಕಾರೇತರ ಸಂಸ್ಥೆಗಳ ಮಧ್ಯೆ ಸಂಬಂಧವಿದೆಯೆಂದು ಕಂಡುಕೊಂಡರು. ಸರ್ಕಾರೇತರ ಸಂಸ್ಥೆಯೊಂದಿಗೆ ಸಂಪರ್ಕವಿದ್ದವರು ರಾಜಕೀಯದಲ್ಲಿ ಸಕ್ರೀಯ ಪಾತ್ರ ವಹಿಸಿದ್ದರು.

- **ಭಟ್**[೨೯] ಅವರ ಅಧ್ಯಯನದ ಪ್ರಕಾರ, ಸರ್ಕಾರೇತರ ಸಂಸ್ಥೆಗಳಲ್ಲಿ ಭಾಗಿಯಾದವರಲ್ಲಿ ಬದಲಾವಣೆಯನ್ನು ಗುರುತಿಸಬಹುದು. ಆರಂಭದಲ್ಲಿ ಕಲ್ಯಾಣ ಮತ್ತು ದಾನ-ದತ್ತಿಗಳ ಕಾರ್ಯಗಳಲ್ಲಿ ಕೇವಲ ನಿವೃತ್ತರು ಮಾತ್ರ ತೊಡಗಿಸಿಕೊಂಡಿದ್ದರು. ಇಂದು, ತರುಣ ಹಾಗೂ ತರುಣಿಯರು ಸರ್ಕಾರೇತರ ಸಂಸ್ಥೆಗಳೆಡೆಗೆ ನೋಡುತ್ತಿದ್ದಾರೆ.

- **ರಾಬರ್ಟ ಸಿ. ವೈರಸಿಂಗ**[೩೦]ರವರ ಅಧ್ಯಯನವು ಒಂದು ಪೂರ್ವ ಕಲ್ಪನೆಯನ್ನು ಸಾಧಿಸಿತೋರಿದೆ. ಅದೇನೆಂದರೆ ಸರ್ಕಾರೇತರ ಸಂಸ್ಥೆಗಳು ರಾಜಕೀಯೇತರವಾಗಿವೆ. ಸಾಮಾನ್ಯವಾಗಿ, ಈ ಸಂಸ್ಥೆಗಳು ಬದ್ಧತೆ ಮತ್ತು ಅರ್ಪಣೆ ಇಲ್ಲದಿದ್ದರೂ ಕೂಡ, ಇವು ಬಡವರನ್ನು ಹಾಗೂ ತುಳಿಯಲ್ಪಟ್ಟವರ ಸೇವೆಯನ್ನು ಮಾಡುತ್ತವೆ. 'ರಾಜಕೀಯ' ಎಂಬ ಪದ ಅವುಗಳನ್ನು ಸೋಂಕುವುದೇ ಇಲ್ಲ. ಏಕೆಂದರೆ ಅವು ರಾಜಕೀಯದಿಂದ ತುಂಬ ದೂರ.

- **ರಿಚ್**[೩೧] ಸಮುದಾಯ ಆಧಾರಿತ ಸಂಘಟನೆಗಳು ಹಾಗೂ ಪಟ್ಟಣ ಸರ್ಕಾರಗಳ ನಡುವೆ ಇರುವ ಸಂಬಂಧ ತಿಳಿದುಕೊಳ್ಳಲು ಹಾಗೂ ಬೆಳೆಸಲು ಅಧ್ಯಯನ ಕೈಗೊಂಡು ಅವು ಬಡತನ ನಿರ್ಮೂಲನೆ ಹಾಗೂ ನೆರೆಮನೆಯವರೊಂದಿಗೆ ಬಾಂಧವ್ಯ ಹೆಚ್ಚಿಸುವಲ್ಲಿ ಹೇಗೆ ನಿರತವಾಗಿವೆಯೆಂಬುದನ್ನು ತಿಳಿಸಿದರು.

- **ಲಲಿತಾ**[೩೨]ರವರು ಭಾರತದಲ್ಲಿರುವ ಎಲ್ಲಾ ಸ್ವಯಂ ಸೇವಾ ನಿರತ ವ್ಯಕ್ತಿಗಳನ್ನು ಅಧ್ಯಯನ ಮಾಡಿ ಅವರ ಸ್ಥಾನ ಹಾಗೂ ಪಾತ್ರದ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಈ ಅಧ್ಯಯನವು ಭಾರತದ ಒಂಭತ್ತು ಪಟ್ಟಣಗಳಾದ ದೆಹಲಿ, ಮುಂಬಯಿ, ಮದ್ರಾಸ್, ಬೆಂಗಳೂರು, ಅಹ್ಮದಾಬಾದ, ಹೈದರಾಬಾದ, ಲಖ್ನೋ, ಪಾಟ್ನಾ ಮತ್ತು ಅಮೃತಸರಗಳಲ್ಲಿನ ೩೯೦ ಸರ್ಕಾರೇತರ ಸಂಸ್ಥೆಗಳಲ್ಲಿನ ೩೫೭ ಕ್ರೀಯಾಶೀಲ ಸ್ವಯಂಸೇವಕರನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಸ್ವಯಂ ಸೇವಕರ ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆ, ಅವರ ಕಾರ್ಯದ ವಿವರ, ಅವರಿಗಿರುವ ಪ್ರೇರಣೆ ಹಾಗೂ ಅಭಿಲಾಷೆಗಳು, ಸರ್ಕಾರೇತರ ಸಂಸ್ಥೆಗಳ ನೀತಿ ಹಾಗೂ ಮನೋಭಾವ, ಎದುರಿಸಿದ ಸಮಸ್ಯೆಗಳು, ಮುಂತಾದವುಗಳನ್ನು ವಿಶ್ಲೇಷಿಸಲಾಗಿದೆ.



- **ವೆಲ್‌ಬ್ಯಾಕ್**[೩೩] ಸರ್ಕಾರೇತರ ಸಂಸ್ಥೆಗಳ ಮೂರು ಮುಖ್ಯ ದಿಕ್ಸೂಚಿಗಳಾದ ತೀವ್ರತೆ, ವ್ಯಾಪ್ತಿ ಮತ್ತು ಪ್ರಕಾರಗಳನ್ನು ಆಧರಿಸಿ, ಸಮಾಜದ ಬಂಡವಾಳದ ಉಪಯೋಗ ಹಾಗೂ ಭಾಗವಹಿಸುವಿಕೆಯ ಪರಿಣಾಮವನ್ನು ಪರೀಕ್ಷಿಸಿದರು. ಹಲವು ಸಂಯೋಜನೆ ಹೊಂದಿದ ಸಂಘಗಳು ಇತರೇ ಸಂಘಗಳಿಗಿಂತ ಹೆಚ್ಚಿನ ಪ್ರಮಾಣದ ಸಾಮಾಜಿಕ ಬಂಡವಾಳ ಹೊಂದಿದ್ದು ಕಂಡುಬಂದಿತು.

- **ಶೇಷಗಿರಿ**[೩೪]ರವರ ಅಧ್ಯಯನದಲ್ಲಿ ಪರೀಕ್ಷಿಸಿದಂತೆ, ಸರ್ಕಾರೇತರ ಸಂಸ್ಥೆಗಳಿಗೆ ಅತೀ ಹೆಚ್ಚು ಹಾಗೂ ಅತೀ ಕಡಿಮೆ ಮಹತ್ವವನ್ನು ನೀಡಬಾರದು. ಸರ್ಕಾರೇತರ ಸಂಸ್ಥೆಗಳು ಆಡಳಿತ

ನಡೆಸುವ ಹಾಗೂ ಆಡಳಿತಾತ್ಮಕ ವ್ಯವಸ್ಥೆಯ ನಡುವಿನ ಅಂತರ ತುಂಬುವ ಮಹತ್ವದ ಅಂಗಗಳಾಗಿವೆ. ಅವರ ವಾದದಂತೆ ಕ್ರಿಯಾಶೀಲ ರಾಜ್ಯದೆದುರು, ಸರ್ಕಾರೇತರ ಸಂಸ್ಥೆಗಳು ಬದಲಾವಣೆಗಳಿಗೆ ಸ್ಪಂದಿಸುತ್ತವೆ ಹಾಗೂ ವ್ಯಕ್ತಿ ಮತ್ತು ಸಮುದಾಯಗಳ ಸ್ವತಂತ್ರತೆಯನ್ನು ಎತ್ತಿಹಿಡಿಯುತ್ತವೆ. ಅದರಿಂದ ರಾಜ್ಯದೊಂದಿಗಿನ ಪಾಲುಗಾರಿಕೆ ಮತ್ತು ಹೆಚ್ಚುತ್ತಿರುವ ಸರ್ಕಾರೇತರ ಸಂಸ್ಥೆಗಳ ಸಹಕಾರವನ್ನು ಪ್ರತಿಬಿಂಬಿಸುತ್ತದೆ.

- **ಸರ್ಕಾರ್**[೩೫] ರವರ ಅಧ್ಯಯನದಂತೆ ಅಸ್ಸಾಮದಲ್ಲಿರುವ ಸರ್ಕಾರೇತರ ಸಂಸ್ಥೆಗಳಲ್ಲಿ ಗಾತ್ರ, ಫಲಾನುಭವಿ ಗುಂಪು, ನಿತ್ಯಾಧಾರಿತ ತತ್ವದಲ್ಲಿ, ವೃತ್ತಿಪರ ಹಿನ್ನೆಲೆ ಸೇವೆಗಳ ಸ್ವರೂಪ ಮುಂತಾದ ವಿಷಯಗಳಲ್ಲಿ ಸಾಮ್ಯತೆ ಇಲ್ಲ. ಈ ಪ್ರಕಾರದ ಗತಿಯು ಸೇವೆಯ ಗುಣಮಟ್ಟ, ನಿಲುಕುವಿಕೆ ಹಾಗೂ ದೊರಕುವಿಕೆ ಮುಂತಾದ ವಿಷಯಗಳ ಮೇಲೆ ತೀವ್ರ ಪರಿಣಾಮ ಬೀರುತ್ತದೆ. ಎಲ್ಲರಿಗೂ ಸೇವೆಯನ್ನು ತಲುಪಿಸಲು ಸಾಧ್ಯವಾಗದ ಹಿನ್ನೆಲೆಯಲ್ಲಿ ಯಾವುದೇ ಸರ್ಕಾರೇತರ ಸಂಸ್ಥೆಗಳನ್ನು ಆರೋಗ್ಯ, ಶಿಕ್ಷಣದಂತಹ ಸಾಮಾಜಿಕ ಯೋಜನೆಗಳಿಗೆ ಆಯ್ಕೆಮಾಡಿಕೊಳ್ಳುವುದು ಸಾಧ್ಯವಾಗದು.

- **ಸಚ್ಚಿದಾನಂದ**[೩೬] ಬಿಹಾರದಲ್ಲಿನ ಸಂತಲ್ ಪರಗಣಾ ವಿಭಾಗದ ಎಲ್ಲಾ ಜಿಲ್ಲೆಗಳನ್ನು ಅಧ್ಯಯನ ಮಾಡಿ, ಬುಡಕಟ್ಟು ಜನಾಂಗದ ಪ್ರಗತಿಯಲ್ಲಿ ಸ್ವಯಂ ಸೇವೆಯ ಕಾರ್ಯ ಎಂಬುದರ ಬಗ್ಗೆ ವಿಶ್ಲೇಷಿಸುತ್ತಾರೆ. ಹತ್ತು ವರ್ಷಗಳಿಂದ ಬುಡಕಟ್ಟು ಜನಾಂಗದ ಪ್ರಗತಿಗಾಗಿ ಕಾರ್ಯ ಮಾಡುತ್ತಿರುವ ಈ ಸಂಘವು ರಾಜ್ಯ, ಕೇಂದ್ರ ಸರ್ಕಾರದ ಹಾಗೂ ಅಂತರ್‌ರಾಷ್ಟ್ರೀಯ ದಾನಿಗಳಿಂದ ನೆರವು ಪಡೆದಿದೆ. ಅದರ ಮುಖ್ಯ ಗಮನ ಮಹಿಳಾ ಪ್ರಗತಿ, ಆರೋಗ್ಯ ಮತ್ತು ಶಿಕ್ಷಣಕ್ಕಾಗಿ ಪೂರಕ ಸೇವೆಗಳು ಹಾಗೂ ಆರ್ಥಿಕ ಪ್ರಗತಿಗಳಾಗಿವೆ.

- **ಸಿಂಗ್ ಮತ್ತು ರಾವ್**[೩೭] ಇವರ ಅಧ್ಯಯನದಂತೆ ಸರ್ಕಾರೇತರ ಸಂಸ್ಥೆಗಳು ಹುಟ್ಟುಹಾಕಿದ ಯುವಕಸಂಘಗಳು ಭಾಗವಹಿಸುವವರ ನೈಪುಣ್ಯತೆ ಮತ್ತು ಜ್ಞಾನವನ್ನು ಹೆಚ್ಚಿಸುವ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿವೆ. ಇದಕ್ಕೆಲ್ಲ ಸರ್ಕಾರೇತರ ಸಂಸ್ಥೆಗಳ ಯೋಜಿತ ಶ್ರಮವೇ ಕಾರಣ.

ಮುಂದುವರೆದು, **ಸಿಂಗ್** ಮತ್ತು **ರಾವ್** ಇವರು ನೀಡುವ ಸಲಹೆ ಏನೆಂದರೆ ಯುವಕರ ಸಾಮರ್ಥ್ಯವನ್ನು ಪೂರ್ಣವಾಗಿ ಉಪಯೋಗಿಸಲು ಯುವಕಸಂಘಗಳು ಯೋಜನೆಗಳನ್ನು ಹಾಕಿಕೊಳ್ಳುವುದು ಅತ್ಯವಶ್ಯಕವಾಗಿದೆ.

- **ಸೇನ್**[೩೮] ಎಂಬುವರ ಅಭಿಪ್ರಾಯದಲ್ಲಿ ಜನರಿಗೆ ಅತೀ ಸಮೀಪವಿದ್ದು ಮಿತ ಹಣಕಾಸು ಸಂಪನ್ಮೂಲದಲ್ಲಿಯೇ ಸಾಮಾಜಿಕ, ಆರ್ಥಿಕ ಮೌಢ್ಯತೆಗಳನ್ನು ತೊಡೆದು ಹಾಕುವಲ್ಲಿ ಸರ್ಕಾರೇತರ ಸಂಸ್ಥೆಗಳು ಸೂಕ್ತವಾಗಿವೆ. ಹಾಗೂ ಸಮಾಜದ ಕೊನೆಯ ವ್ಯಕ್ತಿಗೆ ಯೋಜನೆಗಳ ಫಲ ದೊರೆಯುವಲ್ಲಿ ಯೋಜನೆ ಹಾಕಿ ಕಾರ್ಯರೂಪಕ್ಕೆ ತರುತ್ತವೆ.

- **ಜಾನ್‌ಸನ್**[೩೯]ಸರ್ಕಾರೇತರ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯದೊಂದಿಗಿನ ಸಂಬಂಧಗಳು ಕುರಿತು ಅಧ್ಯಯನ ಮಾಡಿದ್ದಾರೆ. ಸರ್ಕಾರೇತರ ಸಂಸ್ಥೆಗಳ ಪರಿಣಾಮಕತೆ, ಗುಣಗಳು, ಪಾತ್ರ ಹಾಗೂ ಹೊಣೆಗಾರಿಕೆಯನ್ನು ಈಗಿನ ಸಂಪರ್ಕ ಜಾಲದ ಮಿತಿಯಲ್ಲಿ ಅಧ್ಯಯನ ಮಾಡಿದ್ದಾರೆ.

### ೨.೯.೧ ಗ್ರಾಮೀಣಾಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳ ಬಗೆಗಿನ ಅಧ್ಯಯನಗಳು:

ಕಲ್ಯಾಣ ರಾಜ್ಯದ ನಿರ್ಮಾಣದಲ್ಲಿ ಸರ್ಕಾರೇತರ ಸಂಸ್ಥೆಗಳಿಗೆ ರಚನಾತ್ಮಕ ಪಾತ್ರವಿದೆ. ಅವುಗಳ ನಿಯಮಿತ ಕಾರ್ಯಗಳು ಬದುಕಿ ಬೆಳೆಯುವ ಅಗತ್ಯವಿದೆ. ಈ ಕಾರಣಕ್ಕೆ ಸಂಶೋಧಕರ ಹಾಗೂ ಶಿಕ್ಷಣ ತಜ್ಞರ ಆಸಕ್ತಿ ಸರ್ಕಾರೇತರಸಂಸ್ಥೆ ಹಾಗೂ ಗ್ರಾಮೀಣಾಭಿವೃದ್ಧಿ ಎಂಬ ವಿಷಯದ ಮೇಲೆ ಕೇಂದ್ರಿಕೃತವಾಗಿದೆ. ಸರ್ಕಾರೇತರ ಸಂಸ್ಥೆಗಳು ಹಾಗೂ ಗ್ರಾಮೀಣಾಭಿವೃದ್ಧಿ ಮೇಲಿನ ಕೆಲವು ಅಧ್ಯಯನಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ದಾಖಲಿಸಲಾಗಿದೆ.

- **ಚಾರ್‍ಯುಲು**[೪೦] ಎಂಬುವರು ಇನ್ನೊಂದು ಆಸಕ್ತಿಯುತ ಅಧ್ಯಯನವನ್ನು ೧೯೮೫ರಲ್ಲಿ ಕರ್ನಾಟಕ ಹಾಗೂ ಕೇರಳದಲ್ಲಿ ಅಭಿವೃದ್ಧಿ ಯೋಜನೆಗಳಲ್ಲಿ ತೊಡಗಿರುವ ಎರಡು ಸ್ವಯಂ ಸೇವಾ ಸಂಸ್ಥೆಗಳ ಬಗ್ಗೆ ಮಾಡಿದ್ದಾರೆ. ಅವರು ಕಂಡುಕೊಂಡಂತೆ ಆಯ್‌ಆರ್‌ಡಿಪಿ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಸ್ವಯಂ ಸೇವಾ ಸಂಘಗಳು ಹೆಚ್ಚಿನ ಪರಿಣಾಮ ಬೀರಿವೆ. ಫಲಾನುಭವಿಗಳು ವರದಿ ಸಲ್ಲಿಸಿರುವಂತೆ ತಮ್ಮ ವೃತ್ತಿಯಲ್ಲಿ ಆದ ಬದಲಾವಣೆ ಅಂದರೆ ಉದ್ಯೋಗ ಹಾಗೂ ಹೆಚ್ಚುವರಿ ಆದಾಯ. ಹಾಗೆಯೇ ಸಂಘಗಳು ಹಾಗೂ ಜನರು ಕೂಡಿಯೇ ಯೋಜನೆ ಮತ್ತು ಕಾರ್ಯರೂಪಕ್ಕೆ ತರುವಲ್ಲಿ ಕಾರ್ಯಪ್ರವೃತವಾಗಿವೆ.

- **ಜೈನ್**[೪೧]ರವರ ಪ್ರಕಾರ, ಗ್ರಾಮೀಣ ಪ್ರಗತಿ ಹಾಗೂ ಪರಿಹಾರ ಕಾರ್ಯದಲ್ಲಿ ಸರ್ಕಾರೇತರ ಸಂಸ್ಥೆಗಳು ಕಳೆದ ೨೫ ವರ್ಷಗಳಲ್ಲಿ ತೋರಿದ ಪ್ರಯತ್ನವು ಗಮನಾರ್ಹವಾಗಿದೆ. ಹೆಚ್ಚಿನ ಸಾಧನೆಯೆಂದರೆ ಗಾಮೀಣ ಅಭಿವೃದ್ಧಿಯನ್ನು ಅವು ಮೌನವಾಗಿಯೇ ಮಾಡಿವೆ.

ಮುಂದುವರೆದ ಅಧ್ಯಯನದಲ್ಲಿ **ಕಪೂರ** ಮತ್ತು **ಸಿಂಗ** (೧೯೭೭) ಎಂಬುವರು, ಹಿಮಾಚಲ ಪ್ರದೇಶದಲ್ಲಿ ಸರ್ಕಾರೇತರ ಸಂಸ್ಥೆಗಳು ಬೆಳೆದುಬಂದ ಇತಿಹಾಸವನ್ನು ಸಂಕ್ಷಿಪ್ತವಾಗಿ ವಿವರಿಸುತ್ತಾರೆ. ಗ್ರಾಮೀಣ ಅಭಿವೃದ್ಧಿಯಲ್ಲಿ ಇಂದಿನವರೆಗಿನ ಸಾಧನೆಯನ್ನು ವಿಶ್ಲೇಸಿದ್ದಾರೆ. ಇದರಲ್ಲಿ ಸರ್ಕಾರೇತರ ಸಂಸ್ಥೆಗಳ ಯೋಜನೆಗಳು ಧನಸಹಾಯ ಸಂಸ್ಥೆಗಳು, ಯೋಜನೆಗಳ ಜಯಾಪಜಯ, ಜನರಲ್ಲಿ ಅವುಗಳ ಬಗೆಗಿನ ಗೌರವ, ತಾಂತ್ರಿಕ ಸೌಲಭ್ಯಗಳು, ಸರ್ಕಾರದ ಯೋಜನೆಗಳಿಂದ, ತಂದಂತಹ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಅವಶ್ಯವಾದ ತೀವ್ರ ಪ್ರಕ್ರೀಯೆಯನ್ನು ನೀಡಲು ಸರ್ಕಾರೇತರ ಸಂಸ್ಥೆಗಳಿಗೆ ಕಷ್ಟ ಸಾಧ್ಯವಾಗುತ್ತದೆ. ಆದರೆ ಅವು ಸೀಮಿತ ಮತ್ತು ಆಯ್ದ ಕ್ಷೇತ್ರಗಳಲ್ಲಿ ಕಾರ್ಯಮಾಡಲು ಸೂಕ್ತವಾಗಿವೆ ಎನ್ನುತ್ತಾರೆ.

- **ಪ್ರಸಾದ**[೪೨]ರವರ ಪ್ರಕಾರ ಗ್ರಾಮೀಣ ಪುನರ್ ನಿರ್ಮಾಣ ಹಾಗೂ ಸ್ವಯಂ ಕಾರ್ಯ ಎಂಬುದು ಪ್ರಯೋಗಾತ್ಮಕ ಅಧ್ಯಯನವಾಗಿದೆ. ಆಯ್ಕೆ ಮಾಡಿದ ಬಿಹಾರದ ಪಟ್ಟಣಗಳಲ್ಲಿ ಸರ್ವೋದಯ ಮತ್ತು ಅಂತ್ಯೋದಯ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಕಳೆದ ೩೦ ವರ್ಷಗಳಿಂದ ಗ್ರಾಮ ಭಾರತಿಯ ಪಾತ್ರವನ್ನು ವಿಶ್ಲೇಷಿಸಲಾಗಿದೆ.

- **ರಾವ್**[೪೩]ರವರ ಅಧ್ಯಯನದಂತೆ ಆಂಧ್ರ ಪ್ರದೇಶದಲ್ಲಿನ ಸರ್ಕಾರೇತರ ಸಂಸ್ಥೆಗಳು ಸಂಘಟನೆಯ ಯೋಜಿತ ಗುಂಪುಗಳಾಗಿವೆ ಮತ್ತು ಶೋಷಣೆಯ ವಿರುದ್ಧ ಅರಿವನ್ನು ಹೆಚ್ಚಿಸಿವೆ.

- **ಶ್ರೀಪತಿ**[೪೪] ಎಂಬುವರು ಗುರುತಿಸಿದ ಗುಂಪುಗಳ ಮೇಲೆ ಕರ್ನಾಟಕದ ಕರಾವಳಿ ಪ್ರದೇಶದಲ್ಲಿರುವ ಎರಡು ಸರ್ಕಾರೇತರ ಸಂಸ್ಥೆಗಳ ಯೋಜನೆಯಿಂದಾದ ಪರಿಣಾಮಗಳನ್ನು ಅಧ್ಯಯನಮಾಡಿದ್ದಾರೆ. ಅದರನ್ವಯ ಗ್ರಾಮೀಣ ಅಭಿವೃದ್ಧಿಯಲ್ಲಿ ಸರ್ಕಾರೇತರ ಸಂಸ್ಥೆಗಳು ಖಚಿತ ಪರಿಣಾಮ ಬೀರಿವೆ. ಗ್ರಾಮೀಣ ಪ್ರದೇಶದ ಬೃಹತ್ ಆರ್ಥಿಕ ವಲಯದಲ್ಲಿ ಅವುಗಳ ಪಾತ್ರವನ್ನು ಗುರುತಿಸಿ ಸೇವೆಗಳ ಗುಣಮಟ್ಟ ಹಾಗೂ ಸಂಘಟಣೆಯ ರಚನೆಯ ಬಗ್ಗೆ ಬದಲಾವಣೆಗಳನ್ನು ತರಬೇಕು ಎಂಬ ಸಲಹೆಯನ್ನು ನೀಡಲಾಗಿದೆ.

- **ಶ್ರೀವಾತ್ಸವ**[೪೫] ಎಂಬುವರ ಅಧ್ಯಯನದಂತೆ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಹೆಚ್ಚಿನ ಪಾತ್ರವನ್ನು ನಿರ್ವಹಿಸುತ್ತಿವೆ.

- **ಸೂದ**[೪೬] ಅಭಿಪ್ರಾಯಿಸುವಂತೆ, ಸರ್ಕಾರದ ಮಧ್ಯವರ್ತಿಗಳನ್ನು ಮತ್ತು ಜನರ ಶಕ್ತಿವರ್ಧನೆ ಮಾಡಿ ಕಾರ್ಯಗತಮಾಡಲು ಸರ್ಕಾರೇತರ ಸಂಸ್ಥೆಗಳಿಗೆ ಸಾಮರ್ಥ್ಯವಿದೆ. ಕಾರಣ ಅವುಗಳಿಗೆ ಪ್ರೇರಣೆ ನೀಡುವುದನ್ನು ಅಪೇಕ್ಷಿಸಲಾಗಿದೆ.

➢ **ಸಿಂಫಲ್**[೪೭]ಎಂಬುವರು ಕೈಗೊಂಡ ಅಧ್ಯಯನದ ಪ್ರಕಾರ ಸರ್ಕಾರೇತರ ಸಂಸ್ಥೆಗಳು ವಿಭಿನ್ನ ಸೇವೆಗಳನ್ನು ಸಲ್ಲಿಸುತ್ತಿವೆ. ಗ್ರಾಮಿಣಾಭಿವೃದ್ಧಿಯಲ್ಲಿ ಆರ್ಥಿಕಾಧಾರಿತ ಚಟುವಟಿಕೆಗಳನ್ನು ಅಂದರೆ ಖಾದಿ ಉತ್ಪಾದನೆ, ರಸ್ತೆ ನಿರ್ಮಾಣ, ಮೀನುಗಾರಿಕೆ, ಕೋಳಿಸಾಕಾಣಿಕೆ ಇತ್ಯಾದಿ ಸಾಮಾಜಿಕ ಕಲ್ಯಾಣ ಚಟುವಟಿಕೆಗಳಲ್ಲಿ ಆರೋಗ್ಯ, ವೃದ್ಧಾಶ್ರಮ, ಕೌಟುಂಬಿಕ ಸಲಹೆ, ಸ್ವಚ್ಛತೆ ಮುಂತಾದವುಗಳು ಕೂಡಿವೆ. ಶೈಕ್ಷಣಿಕ ಚಟುವಟಿಕೆಗಳಲ್ಲಿ ಪ್ರಾಥಮಿಕ ಮತ್ತು ವಯಸ್ಕ ಶಿಕ್ಷಣಗಳು ಕೂಡಿವೆ. ಹೆಚ್ಚಿನ ಸಂಘಗಳು ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಸಂಬಂಧಿಸಿದ ಚಟುವಟಿಕೆಗಳಲ್ಲಿ ತರಬೇತಿಯನ್ನು ಏರ್ಪಡಿಸುತ್ತವೆ.

ಈ ಮೇಲಿನ ಅಧ್ಯಯನಗಳಿಂದ ಕಂಡುಬರುವ ಅಂಶವೇನೆಂದರೆ, ಸರ್ಕಾರೇತರ ಸಂಸ್ಥೆಗಳಿಂದ ಸದಸ್ಯರಲ್ಲಿ ಸ್ವಾವಲಂಬನೆ, ಉದ್ಯೋಗ ಸೃಷ್ಠಿ, ಜ್ಞಾನ ಮತ್ತು ಆಸಕ್ತಿಯ ಅಭಿವೃದ್ಧಿಯಾಗಿದೆ. ಸರ್ಕಾರೇತರ ಸಂಸ್ಥೆಗಳ ಪ್ರಯತ್ನದಿಂದ ಗ್ರಾಮೀಣ ಅಭಿವೃದ್ಧಿ ಯೋಜನೆಗಳಲ್ಲಿ ಭಾಗವಹಿಸುವಿಕೆ, ನಿರ್ಧರಿಸುವಿಕೆ ಹಾಗೂ ಕಾರ್ಯರೂಪಗೊಳಿಸುವಿಕೆಯಲ್ಲಿ ಹೆಚ್ಚಿನ ಪ್ರಯತ್ನ ಕಂಡುಬರುತ್ತಿದೆ.

**೨.೯.೨ ಮಕ್ಕಳ ಅಭಿವೃದ್ಧಿಯ ಬಗ್ಗೆ ಸರ್ಕಾರೇತರ ಸಂಸ್ಥೆಗಳ ಬಗೆಗಿನ ಅಧ್ಯಯನಗಳು:**

ಮಕ್ಕಳ ಕಲ್ಯಾಣದ ಅಧ್ಯಯನಗಳ ಮಹತ್ವವನ್ನು ನಿರ್ಲಕ್ಷಿಸುವಂತಿಲ್ಲ. ಏಕೆಂದರೆ ಸರ್ಕಾರವು ತನ್ನ ಸಹಾಯಧನದ ಕಾರ್ಯಕ್ರಮದಡಿಯಲ್ಲಿ ಸ್ವಸೇವಾ ಕಾರ್ಯಗಳನ್ನು ಪ್ರವರ್ತಿಸುವುದನ್ನು ಮಂದುವರಿಸಿದೆ. ಎನ್‌ಐಪಿಸಿಐಡಿ (೧೯೬೭) ಇದು ಭಾರತದಲ್ಲಿ ಸ್ವಯಂ ಸೇವೆಗಳ ವಿವಿಧ ಉದ್ದೇಶಗಳನ್ನು ಅಧ್ಯಯನ ಮಾಡಿದೆ ಮತ್ತು ಈ ಅಧ್ಯಯನಗಳಿಂದ ಕಂಡುಬಂದ ಅಂಶಗಳೆಂದರೆ ಹೆಚ್ಚಿನ ಸ್ವಯಂಸೇವಾಸಂಸ್ಥೆಗಳು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸುವ ವೈವಿಧ್ಯಮಯ ಸೇವೆಗಳಲ್ಲಿ ಮಕ್ಕಳು, ಯುವಜನತೆ ಮತ್ತು ಮಹಿಳಾ ಕಲ್ಯಾಣ ಸೇರಿಕೊಂಡಿವೆ.

➢ **ಚೌಧರಿ**[೪೮]ಎಂಬುವರು ಸ್ವಯಂ ಸೇವಾ ಕಲ್ಯಾಣದ ಮೇಲೆ ಬೆಳಕು ಚೆಲ್ಲಿದ್ದಾರೆ. ಇದು ಕೇಂದ್ರ ಸರ್ಕಾರದ ಸಿ.ಎಸ್.ಡಬ್ಲ್ಯು.ಬಿ ಯಿಂದ ಧನಸಹಾಯ ಪಡೆಯುತ್ತಿರುವ ಸುಮಾರು ೬೦೦೦ ಸ್ವಯಂ ಸೇವಾ ಸಂಸ್ಥೆಗಳ ದಾಖಲೆಗಳನ್ನು ಪರಿಶೀಲಿಸಿದ ವರದಿಯಾಗಿದೆ. ಸುಮಾರು ಪ್ರತಿಶತ ೪೩ ಹಾಗೂ ೩೭ ರಷ್ಟು ಹಣವನ್ನು ವಿದ್ಯಾರ್ಥಿ–ಕಲ್ಯಾಣ ಹಾಗೂ ಮಹಿಳಾ ಕಲ್ಯಾಣಕ್ಕೆ ಅನುಕ್ರಮವಾಗಿ ಬಳಸಿಕೊಳ್ಳಲಾಗಿದೆ. ಮಧ್ಯವರ್ತಿಗಳ ದೃಷ್ಠಿಕೋನದಲ್ಲಿ ಪ್ರತಿಶತ ೭ರಷ್ಟು ಆದಾಯವು ಸಿ.ಎಸ್.ಡಬ್ಲು.ಬಿ ಇಂದ ಬಂದಿದೆ. ೩ ಪ್ರತಿಶತ ಸ್ಥಳೀಯ ಸರ್ಕಾರಗಳ ನಿಧಿಯಿಂದ, ೨೩ ರಷ್ಟು ರಾಜ್ಯ ಸರ್ಕಾರದ ನಿಧಿಯಿಂದ ಹಾಗೂ ೬೪ ಪ್ರತಿಶತ ನಿಧಿಯನ್ನು ಸಂಘಗಳೇ ತಮ್ಮ ಸದಸ್ಯರಿಂದ ಅಥವಾ ದೇಣಿಗೆಯಿಂದ ಸಂಗ್ರಹಿಸಿವೆ.

- **ಲಲಿತಾ**[೪೯]ಅವರ ಪ್ರಕಾರ, ಅಧಿಕ ಸಂಖ್ಯೆಯ ಸಂಘಟನೆಗಳು ತಮ್ಮ ಸ್ವಯಂಸೇವಕರ ಅಭಿವೃದ್ಧಿಯ ಬಗ್ಗೆ ಯೋಜಿತ ಕಾರ್ಯಕ್ರಮಗಳನ್ನು ಹೊಂದಿರುವದಿಲ್ಲ. ಹೆಚ್ಚಿನ ಪ್ರಮಾಣದಲ್ಲಿ ಸ್ವಯಂ ಸೇವಾ ಮಧ್ಯವರ್ತಿಗಳು ಮೇಲ್ವಿಚಾರಣೆಯ ಮಹತ್ವವನ್ನೇ ಅರಿತಿರುವದಿಲ್ಲ ಮತ್ತು ಇದು ಸ್ವಯಂ ಸೇವಕರ ಅಭಿವೃದ್ಧಿಗೆ ಪೂರಕವೆಂದು ತಿಳಿದಿರುವುದಿಲ್ಲ. ಆದಾಗ್ಯೂ ಕೂಡ, ಪ್ರತಿಶತ ೮೬ ರಷ್ಟು ಸ್ವಯಂ ಸೇವಕರು ತಮ್ಮ ಕಾರ್ಯದ ಬಗ್ಗೆ ತೃಪ್ತಿಯನ್ನು ವ್ಯಕ್ತಪಡಿಸಿದರೆ ಕೇವಲ ೬%ರಷ್ಟು ಮಾತ್ರ ಅತೃಪ್ತರೆಂದು ಹೇಳಿದರು. ಇನ್ನುಳಿದ ಪ್ರತಿಶತ ೮ ರಷ್ಟು ಜನರು ಎಲ್ಲವೂ ಸರಿ, ತೃಪ್ತಿ ಮತ್ತು ಅತೃಪ್ತಿಯನ್ನು ವ್ಯಕ್ತ ಪಡಿಸಲಿಲ್ಲ.

- **ಲಲಿತಾ ಮತ್ತು ಕೋಹ್ಲಿ**[೫೦] ರವರು ಸಮಾಜ ಕಲ್ಯಾಣದಲ್ಲಿ ಸ್ವಯಂ ಪ್ರಯತ್ನದ ಸ್ಥಿತಿಯನ್ನು ಅಧ್ಯಯನ ಮಾಡಿದರು. ಮಕ್ಕಳ ಕಲ್ಯಾಣದಲ್ಲಿ ಬಾಲವಾಡಿ, ದಿನ ಕಾಳಜಿಗಳಂತಹ ಸೇವೆ ಸಲ್ಲಿಸುವ ಅಧಿಕ ಸಂಖ್ಯೆಯ ಸ್ವಯಂ ಸೇವಾ ಸಂಘಗಳಿವೆ. ಈ ಮೇಲಿನ ಎಲ್ಲ ಅಧ್ಯಯನಗಳು ಕೇಂದ್ರೀಕರಿಸಿದ ವಿಷಯಗಳಲ್ಲಿ ಹಣಕಾಸಿನ ಸಹಾಯ, ಸರ್ಕಾರೇತರ ಸಂಸ್ಥೆಗಳ ವಿವಿಧ ಮುಖಗಳು, ಸ್ವಯಂ ಸೇವಕರ ಸ್ಥಾನಮಾನ ಹಾಗೂ ಪಾತ್ರ, ಕಲ್ಯಾಣ ಕಾರ್ಯಕ್ರಮಗಳು ಮತ್ತು ಕಾರ್ಯರೂಪಕ್ಕಿಳಿಸಿದ ವೈಖರಿಯ ವಿಶ್ಲೇಷಣೆಗೆ ಮೀಸಲಾಗಿವೆ.

- **ಮೊಲ್ಲಿ**[೫೧] ಇವರು ೧೯೯೦ ರಲ್ಲಿ ತಮ್ಮ '**ಬಡತನದ ನಿರ್ಮೂಲನೆಯಲ್ಲಿ ಸಂಘಟಣೆಗಳು :** ಸರ್ಕಾರೇತರ ಸಂಸ್ಥೆಗಳೊಂದಿಗೆ ಒಂದು ಅನುಭವ' ಎಂಬ ಬರಹದಲ್ಲಿ ಕಾರ್ಖಾನೆ ಆಧಾರಿತ ಉದ್ಯೋಗಗಳಾದ ಸಿದ್ಧ ಉಡುಪು, ಖಾದಿ ಮತ್ತು ಗ್ರಾಮೀಣ ಕೈಗಾರಿಕೆ, ಮೇಣದ ಬತ್ತಿ ತಯಾರಿಕೆಯಲ್ಲಿ ಸರ್ಕಾರೇತರ ಸಂಸ್ಥೆಗಳು ಸಿಂಹಪಾಲನ್ನು ಹೊಂದಿವೆಯೆಂದು ಪ್ರತಿಪಾದಿಸಿದ್ದಾರೆ. ಗೃಹ ಆಧಾರಿತ ಉತ್ಪಾದನೆ ಯೋಜನೆಗಳು ಶೇಕಡಾ ೨೫ ರಷ್ಟಿದ್ದು, ಇದರಲ್ಲಿ ಪ್ರಾಣಿ ಸಾಕಾಣಿಕೆ,ಕೋಳಿ ಸಾಕಾಣಿಕೆ, ರೇಷ್ಮೆ, ಪಶು ಆಹಾರ, ಗೃಹ, ಹೂ ತೋಟಗಳು ಸೇರಿಕೊಂಡಿವೆ, ಶೇಕಡಾ ೨೫ರಲ್ಲಿ ಬೃಹತ್ ಯೋಜನೆ ಗಳಾದ ಗೃಹ ನಿರ್ಮಾಣ, ನೀರು ಪೂರೈಕೆ, ಆರೋಗ್ಯ ರಕ್ಷಣೆ, ಬಯೋಗ್ಯಾಸ್, ಹೊಗೆರಹಿತ ಒಲೆಗಳ ನಿರ್ಮಾಣ, ವಸತಿ ನಿಲಯಗಳ ನಿರ್ಮಾಣ ಸೇರಿವೆ. ಇನ್ನುಳಿದ ಶೇಕಡಾ ೧೦ರಲ್ಲಿ ಕೃಷಿ ತರಬೇತಿ, ಹೊಲಿಗೆ ತರಬೇತಿ, ಸಾಕ್ಷರತೆ ತರಬೇತಿ ಕೇಂದ್ರಗಳಿವೆಯೆಂದು ತಿಳಿಸಿದ್ದಾರೆ.

### ೨.೯.೩ ಸರ್ಕಾರೇತರ ಸಂಸ್ಥೆಗಳ ಕರ್ತವ್ಯನಿರ್ವಹಣೆ ಬಗೆಗಿನ ಅಧ್ಯಯನಗಳು.

ಸರ್ಕಾರೇತರ ಸಂಸ್ಥೆಗಳು ವಿಭಿನ್ನ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಅವುಗಳಲ್ಲಿ ಹಲವು ಸರ್ಕಾರೇತರ ಸಂಸ್ಥೆಗಳು ತಮ್ಮ ಕಾರ್ಯಗಳ ಯೋಜನೆಯಲ್ಲಿ ನವೀನ ಪದ್ಧತಿಗಳನ್ನು

ಅಳವಡಿಸಿಕೊಂಡಿವೆ. ಅವುಗಳಲ್ಲಿ ಕೆಲವು ಅಧ್ಯಯನಗಳನ್ನು ಪರಿಶೀಲಿಸಿದಾಗ ಕಂಡುಬರುವುದೇನೆಂದರೆ, ಸರ್ಕಾರೇತರ ಸಂಸ್ಥೆಗಳು ತಮ್ಮದೇ ಆದ ಆಧ್ಯತಾ ವಲಯಗಳಲ್ಲಿ ವಿಭಿನ್ನವಾದ ಕಾರ್ಯಗಳನ್ನು ನಿರ್ವಹಿಸುತ್ತಿದ್ದು, ಅವುಗಳಲ್ಲಿ ಹಲವು ನಾವಿನ್ಯವಾದ ಪದ್ಧತಿಗಳನ್ನು ರೂಪಿಸುವಲ್ಲಿ ಹಾಗೂ ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾಗಿವೆ. ಕೆಲವು ಸರ್ಕಾರೇತರ ಸಂಸ್ಥೆಗಳು ಸಮಗ್ರ ಅಭಿವೃದ್ಧಿಗಾಗಿ, ಪರಿಪೂರ್ಣ ದೃಷ್ಟಿ ವಿಧಾನವನ್ನು ಅಳವಡಿಸಿಕೊಂಡಿವೆ. ರಾಜಶೇಖರನ್, ಚಾರ್ಯಲು ಮತ್ತು ಇತರರು, ಗೋಮ್ಸ್, ಖಾನ್ ಮತ್ತು ಥಾಮಸ್, ವಿಜಯಾ ಮತ್ತು ಚಂದ, ಸಚ್ಚಿದಾನಂದ ಮತ್ತು ಪ್ರಸಾದ, ಅಮುದ್ ಸುರಭಿ ಮತ್ತು ವಸಂತ್‌ಕುಮಾರ ಮೊದಲಾದವರು ಸ್ವಯಂ ಸೇವಾ ಸಂಸ್ಥೆಗಳ ಕಾರ್ಯನಿರ್ವಹಣೆಯ ಕುರಿತು ಅಧ್ಯಯನ ಮಾಡಿ ಫಲಿತಗಳನ್ನು ನೀಡಿದ್ದಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ,

೧) ಸರ್ಕಾರೇತರ ಸಂಸ್ಥೆಗಳು ಸರ್ಕಾರದ ಯೋಜನೆಗಳನ್ನು ಜನರತ್ತ ತಲುಪಿಸುವತ್ತ ಮಹತ್ತರ ಪಾತ್ರವನ್ನು ವಹಿಸುತ್ತದೆ.

೨) ಗ್ರಾಮೀಣಾಭಿವೃದ್ಧಿಗೆ ಸರ್ಕಾರೇತರ ಸಂಸ್ಥೆಗಳು ಪ್ರಥಮ ಆದ್ಯತೆಯನ್ನು ನೀಡಿವೆ.

೩) ಸರ್ಕಾರದ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ರಚನಾತ್ಮಕ ಬದಲಾವಣೆಯ ಪಾತ್ರವನ್ನು ಸರ್ಕಾರೇತರ ಸಂಸ್ಥೆಗಳು ಮಾಡುತ್ತಿವೆ.

೪) ಜನರನ್ನು ತಲುಪಲು ಸರ್ಕಾರೇತರ ಸಂಸ್ಥೆಗಳು ಬಹುಸಂಖ್ಯಾತ ಜನರು ಒಪ್ಪುವ ಪದ್ದತಿಗಳನ್ನು ಬಳಸುತ್ತಾರೆ.

೫) ಮಹಿಳೆಯರಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿಪಡಿಸುವಲ್ಲಿ ಸರ್ಕಾರೇತರ ಸಂಸ್ಥೆಗಳು ಮುಖ್ಯ ಪಾತ್ರವನ್ನು ವಹಿಸುತ್ತದೆ.

೬) ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಕಾರ್ಯನಿರ್ವಹಣೆಯಲ್ಲಿ ವ್ಯತ್ಯಾಸವಿದೆ.

೭) ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಮಟ್ಟದಲ್ಲಿ ಉದ್ಯೋಗಗಳನ್ನು ಹೆಚ್ಚಿಸಲು ಸಹಕಾರಿಯಾಗಿದೆ.

**೨.೯.೪ ಫಲಾನುಭವಿಗಳ ಮೇಲೆ ಸರ್ಕಾರೇತರ ಸಂಸ್ಥೆಗಳ ಪರಿಣಾಮದ ಅಧ್ಯಯನಗಳು :**

ಸರ್ಕಾರೇತರ ಸಂಸ್ಥೆಗಳ ಪರಿಣಾಮವು ಧನಾತ್ಮಕ ಅಥವಾ ಋಣಾತ್ಮಕವಾಗಿರಬಹುದು. ಆದರೆ ಅದು ಪರಿಣಾಮವನ್ನು ಅಳೆಯುತ್ತದೆ. ಅಧ್ಯಯನಕಾರರು ಸರ್ಕಾರೇತರ ಸಂಸ್ಥೆಗಳ ಪರಿಣಾಮವನ್ನು ಅಧ್ಯಯನ ಮಾಡುವ ಸಲುವಾಗಿ ೧. ಫಲಾನುಭವಿಗಳ ಭಾಗವಹಿಸುವಿಕೆ,

೨. ಫಲಾನುಭವಿಗಳ ಜ್ಞಾನ ನೈಪುಣ್ಯತೆ ಹಾಗೂ ೩. ಸರ್ಕಾರೇತರ ಸಂಸ್ಥೆಗಳ ಬಗ್ಗೆ ಫಲಾನುಭವಿಗಳ ಅಭಿಪ್ರಾಯ ಸಂಗ್ರಹಣೆಯ ಅಂಶಗಳನ್ನು ಪರಿಗಣಿಸಿ ರಾಜಶೇಖರನ್, ರಾವ್, ಶ್ರೀನಿವಾಸನ್ ಮತ್ತು ನಟರಾಜನ್, ನಾಗರಾಜು, ಸುರೇಶ, ಚಾಂಡ್ಲರ, ವೇಲುಸ್ವಾಮಿ ಮತ್ತು ಮನೋಹರನ್, ಸೂದ್, ಸಿಂಗ ಮತ್ತು ರಾವ್, ಜಾರ್ಜ, ಶಾಸ್ತ್ರಿ, ಸುಭರ್ತನಂ, ದರ್ತಕ್ ಮತ್ತು ಸಿನ್ಹಾ, ವರ್ಮಾ, ಸೀತಾ ಲಕ್ಷ್ಮೀ ಮತ್ತು ಶಾಂತಿ ಫಲಿತಗಳನ್ನು ನೀಡಿದ್ದಾರೆ. ಅವುಗಳೆಂದರೆ,

೧) ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿ ಯೋಜನೆಗಳಲ್ಲಿ ಕೃಷಿಕರು ಯೋಜಿಸುವ ಹಾಗೂ ಕಾರ್ಯಗತಗೊಳಿಸುವ ಹಂತಗಳಲ್ಲಿ ಉತ್ತಮ ಪ್ರಯತ್ನಗಳನ್ನು ಮಾಡಿವೆ.

೨) ಸರ್ಕಾರೇತರ ಸಂಸ್ಥೆಗಳಿಂದಾಗಿ ಸಮುದಾಯವು ಸಮಾಜದ ಕಾರ್ಯಗಳಲ್ಲಿ ಭಾಗವಹಿಸುವಿಕೆ ಮತ್ತು ಹೆಚ್ಚುವರಿ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಿಕೆ ಹೆಚ್ಚಾಗಿದೆ.

೩) ಸರ್ಕಾರೇತರ ಸಂಸ್ಥೆಗಳು ಫಲಾನುಭವಿಗಳಿಗೆ ಸೂಕ್ತ ದಾರಿತೋರಿಸಿದಲ್ಲಿ ಅವರು ತಮ್ಮ ಅಭಿವೃದ್ಧಿಪರ ಯೋಜನೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಳ್ಳುತ್ತಾರೆ.

೪) ಸ್ವಸಹಾಯ ಸಂಘದ ಫಲಾನುಭವಿಗಳು ತಮ್ಮದೇ ಸಮೂಹ ನಿರ್ಮಿಸಿ ತಮ್ಮ ಮೇಲಿನ ದೌರ್ಜನ್ಯವನ್ನು ಕಡಿಮೆಮಾಡುವಂತಹ ಪ್ರಜ್ಞೆ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

೫) ಮಹಿಳಾ ಅಭಿವೃದ್ಧಿ ಯೋಜನೆಗಳಲ್ಲಿ ಭಾಗವಹಿಸಿದ ಹೆಚ್ಚುವರಿ ಮಹಿಳೆಯರು ತರಬೇತಿ ಮತ್ತು ಹೈನುಗಾರಿಕೆ ಕಾರ್ಯಾಗಳಿಂದ ಪ್ರಯೋಜನ ಪಡೆದು ಸಾಲವನ್ನು ಪಡೆಯಲು ಯಶಸ್ವಿಯಾಗಿದ್ದಾರೆ.

೬) ಗ್ರಾಮೀಣ ಪ್ರದೇಶದಲ್ಲಿ ಕಾರ್ಯ ಪ್ರವೃತ್ತರಾಗಿರುವ ಸಂಘಗಳಿಂದ ಜನರು ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುವ ಪ್ರಮಾಣ ಅಧಿಕವಾಗಿದೆ. ಏಕೆಂದರೆ ಸರ್ಕಾರೇತರ ಸಂಸ್ಥೆಗಳು ಗ್ರಾಮೀಣ ಜನರಿಗೆ ತುಂಬ ಸನಿಹದಲ್ಲಿದ್ದು ಪ್ರಾಥಮಿಕ ಅನುಭವ, ಜ್ಞಾನ ಹಾಗೂ ಸ್ಥಳೀಯ ಸಮಸ್ಯೆಗಳಿಗೆ ಸಂಪನ್ಮೂಲಗಳನ್ನು ಬಳಸಿಕೊಳ್ಳಲು ಪ್ರಾಶಸ್ತ್ಯ ನೀಡುತ್ತವೆ.

೭) ಸರ್ಕಾರೇತರ ಸಂಸ್ಥೆಗಳಿಂದ ಸಹಾಯ ಪಡೆದ ಕೃಷಿಕರು ಕೃಷಿಯ ಉನ್ನತ ಜ್ಞಾನದ ದಿಶೆಯಲ್ಲಿ ಸಹಾಯ ಪಡೆದಿದ್ದರಿಂದ ಸಹಾಯ ಪಡೆಯದೇ ಇರುವ ಇತರ ಕೃಷಿಕರಿಗಿಂತ ಮುಂದುವರೆದಿದ್ದಾರೆ.

೮) ಯುವಕರ ಸ್ವಯಂಸೇವಾ ಸಂಘಗಳು ಭಾಗವಹಿಸಿದವರಲ್ಲಿ ಆಸಕ್ತಿ, ಜ್ಞಾನ ಮತ್ತು ನೈಪುಣ್ಯತೆ ಬೆಳೆಸಲು ಯಶಸ್ವಿಯಾಗಿವೆ.

೯) ಸರ್ಕಾರೇತರ ಸಂಸ್ಥೆಗಳು ಸರ್ಕಾರದ ಯಂತ್ರವನ್ನು ಮತ್ತು ಜನರನ್ನು ಪ್ರೇರಿಸುವಲ್ಲಿ ಶಕ್ತಿ ತುಂಬುವಲ್ಲಿ ಯಶಸ್ವಿಯಾಗಿದೆ.

ಸರ್ಕಾರೇತರ ಸಂಸ್ಥೆಗಳ ಬಗ್ಗೆ ಭಾಗವಹಿಸಿದ ಮುಖಂಡರು ಹಾಗೂ ಇತರರು ಧನಾತ್ಮಕ ಅಭಿಪ್ರಾಯ ಹೊಂದಿದ್ದಾರೆ. ಸರ್ಕಾರೇತರ ಸಂಸ್ಥೆಗಳು ಜನರನ್ನು ತಮ್ಮ ಕಾರ್ಯಗಳ ಯೋಜನೆಯಿಂದ ಹಿಡಿದು ಕಾರ್ಯರೂಪಕ್ಕಿಳಿಸುವವರೆಗೂ ಪ್ರೇರೇಪಿಸಿವೆ. ಕೆಲವು ಸಂಘಟಣೆಗಳು ಜನರ ಹೃದಯಕ್ಕೆ ತೀರ ಹತ್ತಿರವಿದ್ದೂ ಅವರ ಮನಸ್ಸು, ಜ್ಞಾನ, ಸಂಪನ್ಮೂಲ ಬಳಕೆ, ಸಮಸ್ಯೆಗಳ ಪರಿಹಾರದಲ್ಲಿ ನೇರವಾಗಿ ಭಾಗವಹಿಸಿವೆ ಮತ್ತು ಜನರ ಭಾಗವಹಿಸುವಿಕೆಯನ್ನು ಹೆಚ್ಚಿಸಿವೆ. ಸರ್ಕಾರೇತರ ಸಂಸ್ಥೆಗಳ ಫಲಾನುಭವಿಗಳು ಹೆಚ್ಚಿನ ನೈಪುಣ್ಯತೆ, ಜ್ಞಾನವನ್ನು ಕೃಷಿ ಪೂರಕ ಚಟುವಟಿಕೆಗಳಲ್ಲಿ ಪಡೆದುಕೊಂಡಿದ್ದಾರೆ. ತಮ್ಮ ಕಲ್ಯಾಣ ಹಾಗೂ ಲಾಭಕ್ಕಾಗಿ ಸುಧಾರಿತ ಅಚರಣೆಗಳನ್ನು ಅಳವಡಿಸಿಕೊಂಡಿದ್ದಾರೆ.

**೨.೯.೫ ಮಹಿಳಾ ಸಬಲೀಕರಣದಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರಗಳ ಬಗ್ಗೆ ಅಧ್ಯಯನಗಳು :**

ಕೆಲವು ಸರ್ಕಾರೇತರ ಸಂಘಗಳು ಪ್ರತ್ಯೇಕವಾಗಿ ಮಹಿಳೆಯರ ಸಬಲೀಕರಣದ ಬಗ್ಗೆ ಕಾರ್ಯಕೈಗೊಂಡಿದ್ದು, ತಮ್ಮ ಇಷ್ಟಗಳನ್ನು ಈಡೇರಿಸಿಕೊಳ್ಳಲು ಸೂಕ್ತವಾದ ವಾತಾವರಣವನ್ನು ನಿರ್ಮಿಸಲು ಪ್ರಯತ್ನಿಸುತ್ತಿವೆ. ಮಹಿಳಾ ಸಬಲೀಕರಣದಲ್ಲಿ ಸರ್ಕಾರೇತರ ಸಂಸ್ಥೆಗಳ ಪಾತ್ರಗಳು ಎಂಬ ವಿಷಯದ ಕುರಿತು ಅಹ್ಲವಾಟ್ಸ, ಕುಮಾವತ ಮತ್ತು ಶರ್ಮಾ, ವೇಲುಸ್ವಾಮಿ ಮತ್ತು ಮನೋಹರನ, ಮೋಹಿತ, ಜೇಕಬ್, ಚೌಧರಿ, ಮಣಿಮೇಖಲಾ ರವರು ಅಧ್ಯಯನ ಮಾಡಿ ಈ ಕೆಳಗಿನ ಅಂಶಗಳನ್ನು ಕಂಡುಕೊಂಡಿದ್ದಾರೆ.

೧) ಮಹಿಳಾ ಸಬಲೀಕರಣದಲ್ಲಿ ಸರ್ಕಾರೇತರ ಸಂಸ್ಥೆಗಳು ವ್ಯಕ್ತಿ ಮತ್ತು ಸಂಘಗಳ ನಡುವಿನ ದ್ವಿಮುಖ ಸಂವಹನ ಏರ್ಪಡಿಸುವ ನಿಟ್ಟಿನಲ್ಲಿ ಸಫಲವಾಗಿದೆ.

೨) ಮಹಿಳೆಯರ ಶಿಕ್ಷಣ ಮತ್ತು ಆರ್ಥಿಕ ಮಟ್ಟವು ಸಮಾಜದ ಸಾಮಾಜಿಕ – ಆರ್ಥಿಕ ಸ್ಥಿತಿಗತಿಗಳ ಮೇಲೆ ಪ್ರಭಾವವನ್ನು ಬೀರುತ್ತದೆ. ಮತ್ತು ಸರ್ಕಾರೇತರ ಸಂಸ್ಥೆಗಳು ಮಹಿಳೆಯರ ಶಿಕ್ಷಣ ಮತ್ತು ಆರ್ಥಿಕಮಟ್ಟದ ಸುಧಾರಣೆಗೆ ಕ್ರಮವನ್ನು ವಹಿಸಿದೆ.

೩) ಅನಾದಿ ಕಾಲದಿಂದಲೂ ಹೆಚ್ಚಿನ ಸಂಖ್ಯೆಯ ಸರ್ಕಾರೇತರ ಸಂಘಗಳು ಮಹಿಳಾ ಕಲ್ಯಾಣದ ಕಾರ್ಯಮಾಡುತ್ತವೆ ಮತ್ತು ಇನ್ನೂ ಹೊಸ ಸಂಘಟನೆಗಳು ಹುಟ್ಟಿಕೊಳ್ಳುತ್ತಿವೆ.

೪) ಮಹಿಳೆಯರು ಕುಟುಂಬದಲ್ಲಿ ಹೆಚ್ಚಿನ ಜವಾಬ್ದಾರಿಯುತ ಸ್ಥಾನದಲ್ಲಿದ್ದಾರೆ. ಮಹಿಳಾ ಕೇಂದ್ರೀಕೃತ ಯೋಜನೆಗಳು ಸಿದ್ದವಾದಲ್ಲಿ ಮಾತ್ರ ಸರ್ಕಾರೇತರ ಸಂಸ್ಥೆಗಳಿಂದ ಮೂಲಭೂತ ಅಭಿವೃದ್ಧಿಯಾಗಲು ಸಾಧ್ಯವಿದೆ.

೫) ಸರ್ಕಾರೇತರ ಸಂಸ್ಥೆಗಳ ಮಹಿಳಾ ಫಲಾನುಭವಿಗಳು ಸರ್ಕಾರೇತರ ಸಂಸ್ಥೆಗಳ ಚಟುವಟಿಕೆಗಳಲ್ಲಿ ಹೆಚ್ಚಿಗೆ ಭಾಗವಹಿಸಿದ್ದು ಬಾಹ್ಯ ಸಂಪರ್ಕವನ್ನು ಸಾಧಿಸಿದ್ದಾರೆ.

೬) ಗ್ರಾಮೀಣ ಮಹಿಳೆಯರ ಉಳಿವು, ಅಭಿವೃದ್ಧಿ ಹಾಗೂ ಮುಂದುವರಿಕೆಗೆ ಎಚ್ಚರಿಕೆಯಿಂದ ನಿರ್ಮಿಸಿದ ತರಬೇತಿ ಯೋಜನೆಯ ಅವಶ್ಯಕತೆ ಇದೆ. ಕಾರ್ಯಕ್ರಮಗಳು ಔಪಚಾರಿಕ ಅಥವಾ ಅನೌಪಚಾರಿಕ ಇರಬಹುದು.

೭) ಗ್ರಾಮೀಣ ಮಹಿಳೆಯರಿಗೆ ಉದ್ಯಮಶೀಲತೆ ಹಾಗೂ ಉದ್ಯಮ ವ್ಯವಸ್ಥೆ ಒದಗಿಸಲು ಹಾಗೂ ಅಸಂಪ್ರದಾಯಿಕ ಚಟುವಟಿಕೆಗಳಲ್ಲಿ ನೈಪುಣ್ಯತೆ ಪಡೆಯಲು ಸರ್ಕಾರೇತರ ಸಂಸ್ಥೆಗಳು ಸಹಾಯ ಮಾಡಬೇಕು.

೮) ಮಹಿಳೆಯರ ಸಬಲೀಕರಣಕ್ಕೆ ಸರ್ಕಾರೇತರ ಸಂಸ್ಥೆಗಳು ಅತ್ಯಂತ ಸೂಕ್ತ ಮಧ್ಯವರ್ತಿಗಳಾಗಿದ್ದು ಸರ್ಕಾರೇತರ ಸ್ವಸಹಾಯ ಗುಂಪುಗಳನ್ನು ಸಂಘಟಿಸುವುದರ ಮೂಲಕ, ಮಹಿಳೆಯರ ಸಬಲೀಕರಣಗೊಳಿಸುವುದು ಸಾಧ್ಯವಾಗುತ್ತದೆ.

**೨.೯.೬ ಆರೋಗ್ಯ ಕ್ಷೇತ್ರಗಳಲ್ಲಿ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಅಧ್ಯಯನಗಳು:**

ಸರ್ಕಾರ ಅಥವಾ ಖಾಸಗಿ ಸಂಸ್ಥೆಗಳಿಗೆ ನಿಲುಕದ ಕ್ಷೇತ್ರಗಳಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರವೇಶಿಸುತ್ತಿವೆ. ಸರ್ಕಾರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವಲ್ಲಿ ಹೆಣಗಾಡಿದರೆ, ಸರ್ಕಾರೇತರ ಸಂಸ್ಥೆಗಳು ಮುಕ್ತವಾಗಿ ಹಾಗೂ ನಾವಿಣ್ಯಪೂರ್ಣವಾದ ಯೋಜನೆಗಳನ್ನು ಅಭಿವೃದ್ಧಿ ಪಡಿಸಿ, ಮೂಲಭೂತ ಅವಶ್ಯಕತೆಗಳನ್ನು ಮೀರಿ ಜನರ ಗುಣಮಟ್ಟವನ್ನು ಜೀವನವನ್ನು ಹೆಚ್ಚಿಸುವಲ್ಲಿ ಯಶಸ್ವಿಯಾಗಿವೆ. ಇತ್ತೀಚಿಗೆ ಅವುಗಳನ್ನು ಆರೋಗ್ಯ ವೃದ್ಧಿಯಲ್ಲಿ ನಾವೀಣ್ಯತೆಯ ತರುವ ಸಂಸ್ಥೆಗಳೆಂದು ಗುರುತಿಸಲಾಗಿದೆ. ಅವುಗಳ ಕಾರ್ಯಕ್ಷೇತ್ರವು ಸೀಮಿತವಾಗಿದ್ದರೂ, ಸಾಕಷ್ಟು ಪ್ರಮಾಣದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಕಾಣಿಕೆ ನೀಡಿವೆ.

ಆರೋಗ್ಯವು ಸರ್ಕಾರೇತರ ಸಂಸ್ಥೆಗಳಿಗೆ ನೂತನ ಕ್ಷೇತ್ರವಾಗಿದ್ದರಿಂದ ಕೆಲವಾರು ಸರ್ಕಾರೇತರ ಸಂಸ್ಥೆಗಳು ತಮ್ಮ ಚಟುವಟಿಕೆಗಳಲ್ಲಿ ಗುರುತಿಸಿಕೊಂಡಿವೆ. ಈಗಾಗಲೇ ಗಮನಿಸಿರುವಂತೆ ಹಲವಾರು ಅಧ್ಯಯನಗಳು ಗ್ರಾಮೀಣ ಅಭಿವೃದ್ಧಿ, ಮಹಿಳೆ, ಆರ್ಥಿಕ ಅಭಿವೃದ್ಧಿಯಂತಹ ವಿಷಯಗಳ ಮೇಲಿವೆ. ಆರೋಗ್ಯ ಕ್ಷೇತ್ರ, ಸರ್ಕಾರೇತರ ಸಂಸ್ಥೆಗಳಿಗೊಂದು ಹೊಸ ಕ್ಷೇತ್ರ ಎಂಬುವದರಲ್ಲಿ ಅನುಮಾನವೇ ಇಲ್ಲ. ಕೆಲವು ಸರ್ಕಾರೇತರ ಸಂಸ್ಥೆಗಳು ಈ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಿವೆ. ಆರೋಗ್ಯ ಕ್ಷೇತ್ರದಲ್ಲಿ ಪ್ಯಾಲೆ, ದುಗ್ಗಲ್ ಮತ್ತು ಅಮಿನ, ಗುಪ್ತ ಮತ್ತು ಜೇಸಾನಿ, ಶಾಂತಿ ಘೋಶ, ಎಂ. ಕೃಷ್ಣಾರೆಡ್ಡಿ, ಜೆ.ಕೆ.ಸಾಟಿಯಾ, ಭಟ್ಟಾಚಾರೀಜೀ, ಸುನಿಲ್ ಮಿಶ್ರಾ, ಫರ್ಹಾನಾ ಹಾಶಿಮ್ ರವರು ಅಧ್ಯಯನವನ್ನು ಮಾಡಿ ಫಲಿತಗಳನ್ನು ನೀಡಿದ್ದಾರೆ.

೧) 'ಸರ್ಕಾರೇತರ ಸಂಸ್ಥೆ'ಗಳು ಬುಡಕಟ್ಟು ಜನಾಂಗ, ಪರಿಶಿಷ್ಟಜಾತಿ, ಕೊಳಗೇರಿಯ ನಿವಾಸಿಗಳು, ಮತ್ತು ಗ್ರಾಮೀಣ ಪ್ರದೇಶದಲ್ಲಿರುವ ಹಲವರಿಗೆ ಆರೋಗ್ಯ ನೀಡುವಲ್ಲಿ ಪ್ರಯತ್ನಿಸಿವೆ. ಸರ್ಕಾರೇತರ ಸಂಸ್ಥೆಗಳು ಈ ವಂಚಿತ ಜನಾಂಗಕ್ಕೆ ಸಮಾನತೆ ತರುವಲ್ಲಿ ಅವರ ಅವಶ್ಯಕತೆಗಳನ್ನ ಪೂರೈಸಲು ಪ್ರಯತ್ನ ಮಾಡಿವೆ.

೨) ಸರ್ಕಾರವು ಪ್ರಾಥಮಿಕ ಆರೋಗ್ಯ ರಕ್ಷಣೆಗೆ ಮಾಡುವ ವೆಚ್ಚದ ಮಿತಿಯಲ್ಲಿಯೇ ಸರ್ಕಾರೇತರ ಸಂಸ್ಥೆಗಳು ಕೂಡಾ ಪ್ರತಿ ವ್ಯಕ್ತಿಯ ಆರೋಗ್ಯದ ಮೇಲೆ ವೆಚ್ಚಮಾಡುತ್ತಿವೆ. ಸರ್ಕಾರದ ಹಾಗೂ ಸರ್ಕಾರೇತರ ಸಂಸ್ಥೆಗಳ ಸರಾಸರಿ ವೆಚ್ಚವು ಸಮನಾಗಿರುವುವದನ್ನು ಗಮನಿಸಿದಾಗ, ಸರ್ಕಾರೇತರ ಸಂಸ್ಥೆಗಳು ಹೆಚ್ಚುವರಿ ಸಂಪನ್ಮೂಲಗಳನ್ನು ದಕ್ಷ ರೀತಿಯಿಂದ ಬಳಸಿಕೊಂಡದ್ದು ಕಂಡುಬರುತ್ತದೆ.

೩) ಆರೋಗ್ಯ ಸೇವೆಗಳನ್ನು ನೀಡುವಲ್ಲಿ ಗ್ರಾಮೀಣ ಪ್ರದೇಶಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ ಮತ್ತು ಪಟ್ಟಣಗಳು ಮತ್ತು ಅರೆ-ಪಟ್ಟಣಗಳು ಪ್ರಾಧಾನ್ಯತೆ ಪಡೆದುಕೊಂಡಿವೆ.

೪) ಸರ್ಕಾರೇತರ ಸಂಸ್ಥೆಗಳು ಯಶಸ್ವಿಯಾಗಲು, ವಿಭಿನ್ನ ಆರೋಗ್ಯ ರಕ್ಷಣೆ ಕಾರ್ಯಕ್ರಮಗಳನ್ನು ಎಲ್ಲಾ ಹಂತಗಳಲ್ಲಿ ಆಯೋಜಿಸಿ, ಕೇವಲ ನೇರವಾಗಿ ಗುರಿಯಿರಿಸಿದ ಯೋಜನೆಗಳ ಕಡೆಗೆ ಮಾತ್ರ ಗಮನಹರಿಸದೇ ಇರುವುದರ ಪ್ರತಿಫಲವಾಗಿದೆ.

೫) ಸರ್ಕಾರದ ಕಾರ್ಯಕ್ರಮಗಳು ಹಾಗೂ ಹೊಸತನದ ನೀತಿಗಳನ್ನು ತರಬೇತಿಗೆ ಮತ್ತು ಕಾರ್ಯಕ್ರಮ ನಿರ್ವಹಣೆಗೆ ಬಳಸಿಕೊಳ್ಳಬೇಕಾಗಿದೆ.

೬) ಸರ್ಕಾರೇತರ ಸಂಸ್ಥೆಯು ಕುಟುಂಬ ಕಲ್ಯಾಣ ಯೋಜನೆಯನ್ನು ಕೈಗೊಳ್ಳುವುದು ಅತ್ಯಂತ ಸೂಕ್ತ ಹಾಗೂ ಆರೋಗ್ಯ ಪೂರ್ಣವಾಗಿದೆ.

೭) ಸಮುದಾಯದ ಆರೋಗ್ಯವರ್ಧನೆಯಲ್ಲಿ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳ ನಡುವೆ ಸೂಕ್ತವಾದ ಸಂಯೋಜನೆ, ವಿಷಯ ವಿನಿಮಯ, ಸಾಂಸ್ಥಿಕ ಸಾಮರ್ಥ್ಯಗಳ ವೃದ್ಧಿಯಿಂದ ಮಾತ್ರ ಸಾಧ್ಯ.

೮) ಸರ್ಕಾರೇತರ ಸಂಸ್ಥೆಗಳು ಸಮುದಾಯದೊಂದಿಗೆ ಧೀರ್ಘಕಾಲದೊಂದಿಗೆ ಬದ್ಧತೆಯಿಂದ ಮಾತ್ರ ಪ್ರಶಂಸನೀಯ ಹಾಗೂ ಫಲಪ್ರದ ಫಲಿತಾಂಶಗಳನ್ನು ಪಡೆಯಲು ಸಾಧ್ಯವಿದೆ.

೯) ಸರ್ಕಾರೇತರ ಸಂಸ್ಥೆಗಳು ಬದಲಾವಣೆಯ ಚೇತಕಗಳಂತೆ ಕಾರ್ಯಮಾಡಬಹುದು. ಆರೋಗ್ಯಕರ ನಡವಳಿಕೆ ಹಾಗೂ ನಡವಳಿಕೆಗಳ ಬದಲಾವಣೆಗೆ ಸಮುದಾಯದ ಭಾಗವಹಿಸುವಿಕೆ ಹಾಗೂ ಸಾರ್ವಜನಿಕ ಶಿಕ್ಷಣ ಅವಶ್ಯಕವಾಗಿದೆ.

೧೦)ಜಿಲ್ಲಾ ಆಡಳಿತವು ಗುಣಾತ್ಮಕ ಆರೋಗ್ಯ ರಕ್ಷಣೆಗಳ ಮೇಲೆ ಮಹತ್ವ ನೀಡಿದ್ದರೆ, ಸರ್ಕಾರೇತರ ಸಂಸ್ಥೆಗಳು ಆರೋಗ್ಯ ನೀಡಿಕೆಯಲ್ಲಿ ನಿರ್ವಹಿಸಿದ ಪಾತ್ರ ತುಂಬ ಮಹತ್ವದ್ದಾಗಿದೆ.

೧೯೬೫ ರಿಂದ ೨೦೧೦ರ ವರೆಗಿನ ೪೫ ವರ್ಷಗಳ ಅಧ್ಯಯನಗಳ ಪುನರಾವಲೋಕನ ಸರ್ಕಾರೇತರ ಸಂಸ್ಥೆಗಳ ಅಭಿವೃದ್ಧಿ ಹಾಗೂ ಕಾರ್ಯವೈಖರಿಯನ್ನು ವಿವಿಧ ದೃಷ್ಠಿಕೋನಗಳಿಂದ ಪರಿಚಯಿಸುತ್ತದೆ. ದಶಕದುದ್ದಕ್ಕೂ ಅಧ್ಯಯನಗಳು ಜರುಗಿದ್ದು, ಕೆಲವು ಹರಡಿಹೋಗಿರುವ ಎಲ್ಲ ಸರ್ಕಾರೇತರ ಸಂಸ್ಥೆಗಳನ್ನು ಅಧ್ಯಯನ ಮಾಡಿದ್ದರೆ, ಇನ್ನು ಕೆಲವು ಕೆಲವೇ ಸರ್ಕಾರೇತರ ಸಂಸ್ಥೆಗಳ ಬಗ್ಗೆ ಆಳವಾದ ಅಧ್ಯಯನ ಮಾಡಿವೆ. ಈ ಅಧ್ಯಯನಗಳಂತೆ ಸರ್ಕಾರೇತರ ಸಂಸ್ಥೆಗಳ ಬೆಳವಣಿಗೆ ಅಸಮ ಹಾಗೂ ವೈವಿಧ್ಯತೆಯಿಂದ ಕೂಡಿದೆ. ಹಲವು ಸಂಸ್ಥೆಗಳು ತಮ್ಮ ಕ್ರಿಯಾ ಯೋಜನೆ ಹಾಗೂ ಕಾರ್ಯರೂಪಕ್ಕೆ ತರುವಲ್ಲಿ ಪವಿತ್ರ ಹಾಗೂ ವಿಭಿನ್ನ ನೀತಿಗಳನ್ನು ಅನುಸರಿಸಿವೆ. ಕೆಲವು ಸಂಸ್ಥೆಗಳು ಸಮಗ್ರ ದೃಷ್ಟಿಕೋನ ಹೊಂದಿದ್ದರೆ, ಇನ್ನು ಹಲವು ಪ್ರಕಲ್ಪ ಯೋಜನಾ ಧ್ಯೆಯದೊಂದಿಗೆ ತಮ್ಮ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸಿವೆ. ಫಲಾನುಭವಿಗಳನ್ನು ತಮ್ಮ ಯೋಜನೆಗಳಲ್ಲಿ ಕೆಲವು ಸಂಘಗಳು ಸೇರಿಸಿ ಕೊಂಡಿದ್ದರೆ, ಇನ್ನುಳಿದವರು ದೂರವಿಟ್ಟಿದ್ದಾರೆ. ಆದರೆ ಉದ್ದೇಶಿತ ಗುಂಪುಗಳೊಂದಿಗಿನ ಕಾರ್ಯ ನಿರ್ವಹಣೆ ಅರ್ಥಪೂರ್ಣ ಹಾಗೂ ಧನಾತ್ಮಕವಾಗಿದೆ.

ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನಗಳನ್ನು ವಿಶ್ಲೇಷಿಸಿದಾಗ ಹಲವಾರು ಅಧ್ಯಯನಗಳು ಸರ್ಕಾರೇತರ ಸಂಸ್ಥೆಗಳ ಕೊಡುಗೆಯೆಡೆಗೆ ಕೇಂದ್ರೀಕರಿಸಿದ್ದರೆ, ಉಳಿದವುಗಳು ಸಂಘಗಳ ಕಾರ್ಯವೈಖರಿ, ಮೌಲೀಕರಣ, ರಚನೆ ಮತ್ತು ಅಭಿವೃದ್ಧಿ ಪಥವನ್ನು ಗುರುತಿಸಿವೆ.

ಇತ್ತಿಚಿನ ದಿನಗಳಲ್ಲಿ ಸರ್ಕಾರೇತರ ಸಂಸ್ಥೆಗಳ ವಿಷಯವು ವ್ಯಾಪಕವು ಸಂಕೀರ್ಣವು ಆಗಿದೆ. ಅಧ್ಯಯನವು ಸರ್ಕಾರೇತರ ಸಂಸ್ಥೆಗಳ ಶಿಕ್ಷಣ, ಆರೋಗ್ಯ, ಮಹಿಳಾ ಸಬಲೀಕರಣ, ಗ್ರಾಮೀಣ ಅಭಿವೃದ್ಧಿ ಮುಂತಾದ ಮಹತ್ವದ ಕ್ಷೇತ್ರಗಳನ್ನು ಒಳಗೊಂಡಿದೆ. ಪ್ರಸ್ತುತ ಸರ್ಕಾರೇತರ ಸಂಸ್ಥೆಗಳ ಸಾಮರ್ಥ್ಯ ಹಾಗೂ ಅಶಕ್ತತೆಯ ಅಧ್ಯಯನಕ್ಕೆ ಹೆಚ್ಚಿನ ಮಹತ್ವ ಮತ್ತು ಅವಶ್ಯಕತೆ ಕಂಡುಬಂದಿದೆ. ಇದರಿಂದ ಅವುಗಳ ಸಾಮರ್ಥ್ಯವನ್ನು ಬೆಳಕಿಗೆ ತರಲು ಸಾಧ್ಯವಾಗುತ್ತದೆ. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದಂತೆ ಸರ್ಕಾರೇತರ ಸಂಸ್ಥೆಗಳ ವಿವಿಧ ಆಯಾಮಗಳ ಬಗ್ಗೆ ಯಾವುದೇ ರೀತಿಯ ಅಧ್ಯಯನಗಳು ಈ ಹಿಂದೆ ಕೈಕೊಂಡಿರುವುದಿಲ್ಲಾ. ಈ ದಿಶೆಯಲ್ಲಿ ಪ್ರಸ್ತುತ 'ಅಧ್ಯಯನವು ಒಂದು ಪ್ರಾಯೋಗಿಕ ಪ್ರಯತ್ನ'.

**ಟಿಪ್ಪಣಿಗಳು :**


೧. *ಬೋರ್ಡಿಲಾನ್.ಜೆ, ಎ.ಎಫ್.ಸಿ. (ಎಡಿಟೆಡ್) "ವಾಲೆಂಟರಿ ಸೋಸಿಯಲ್ ಸರ್ವಿಸಸ್-ದೇರ್ ಪ್ಲೇಸ್ ಇನ್ ಮಾಡರ್ನ್ ಸ್ಟೇಟ್",* ಮಿಥುನ್, ಲಂಡನ್. (೧೯೪೫)

೨. *ಸಿಲ್ಸ್.ಡಿ.ಎಲ್. "ಇಂಟರ್‌ನ್ಯಾಷನಲ್ ಎನ್‌ಸೈಕ್ಲೋಪಿಡಿಯಾ ಆಫ್ ಸೋಶಿಯಲ್ ಸಾಯನ್ಸ್"* ವಾಲ್ಯೂಮ್ ೧೬, ಕೋಲಿಯರ್, ಮ್ಯಾಕ್‌ಮಿಲನ್, ಲಂಡನ್. (೧೯೬೯)

೩. *ಜಾನ್ಸನ್ ಎನ್. "ವ್ಹಾಲೆಂಟರಿ ಸೋಶಿಯಲ್ ಸರ್ವಿಸ್" ಬಾಸಿಲ್ ಬ್ಲಾಕ್ ವೆಲ್ ಆಂಡ್ ಮಾರ್ಟಿನ್",* ಆಕ್ಸಫರ್ಡ, ಲಂಡನ್ (೧೯೮೧)

೪. *ಸ್ಮಿತ್ ಸಿ. ಮತ್ತು ಫ್ರೀಡಮನ್ ಎ. "ವ್ಹಾಲೆಂಟರಿ ಅಸೋಶಿಯೇಶನ್ಸ್: ಪರ್ಸ್ಪೆಕ್ಟಿವ್ ಆನ್ ದ ಲಿಟರೇಚರ್",* ಹಾರ್ವರ್ಡ್ ಯುನಿವ್ಹರ್ಸಿಟಿ ಪ್ರೆಸ್, ಕೆಂಬ್ರಿಡ್ಜ್. (೧೯೭೨)

೫. *ಬಿವರೇಜ್ ಡಬ್ಲ್ಯೂ "ವ್ಹಾಲೇಂಟಿಯರ್ ಆ್ಯಕ್ಷನ್ ಇನ್ ಎ ಚೇಂಜಿಂಗ್ ವರ್ಲ್ಡ್"* ಆಲನ್ ಆಂಡ್ ಅನ್‌ವಿನ್, ಲಂಡನ್ (೧೯೭೯)

೬. *ಇನಾಮದಾರ ಎನ್.ಆರ್. "ರೋಲ್ ಆಫ್ ವ್ಹಾಲೆಂಟರಿಸಂ ಇನ್ ಡೆವ್ಹಲಪಮೆಂಟ"* ದಿ ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಎಡ್ಮಿನಿಷ್ಟ್ರೇಶನ್, ವಾಲ್ಯೂಮ್ ೩೩, ನಂ. ೩ ಪುಟ ೪೨೧-೪೨೨. (೧೯೮೭)

೭. *ಪ್ರಭಾಕರನ್ ಎಸ್. "ವ್ಹಾಲೆಂಟರಿ ಏಜೆನ್ಸಿಜ್ ಫಾರ್ ರೂರಲ್ ಡೆವ್ಹಲಪಮೆಂಟ, ಇನ್ ಮೋಹನಸಿಂಘ (ಎಡಿಟೆಡ್) ರೂರಲ್ ಡೆವ್ಹಲಪಮೆಂಟ್ ಇನ್ ಇಂಡಿಯಾ ಕರಂಟ್ ಪ್ರಾಸ್ಪೆಕ್ಟಿವ್ಸ್",* ಇಂಟಲೆಕ್ಚುವಲ್ ಪಬ್ಲಿಷಿಂಗ್ ಹೌಸ್, ನ್ಯೂದೆಹಲಿ. (೧೯೯೨)

೮. *ದುಗ್ಗಲ್ ಆರ್. ಮತ್ತು ಅಮೀನ ಎಸ್. "ಕಾಸ್ಟ್ ಆಫ್ ಹೆಲ್ತ ಕೇರ್- ಎ ಹೌಸ್ ಹೋಲ್ಡ್ ಸರ್ವೆ ಇನ್ ಇಂಡಿಯನ್ ಡಿಸ್ಟ್ರಿಕ್ಟ್."* ದಿ ಫೌಂಡೇಶನ್ ಆಫ್ ರಿಸರ್ಚ್‌ಇನ್ ಕಮ್ಯೂನಿಟಿ ಹೆಲ್ತ್ ಮುಂಬಯಿ. (೧೯೮೯)

೯. *ರಾಜಶೇಖರ ಡಿ. "ಎನ್.ಜಿ.ಓ.ಸ್ ಇನ್ ಇಂಡಿಯಾ: ಅಪಾರ್ಚುನುಟೀಸ್ ಆಂಡ್ ಚಾಲೆಂಜಸ್"* ಜರ್ನಲ್ ಆಫ್ ರೂರಲ್ ಡೆವ್ಹಲೆಪಮೆಂಟ್, ವಾಲ್ಯೂಮ್ ೧೯ (೨) ಪುಟ ೨೪೯-೨೭೫. (೨೦೦೦)

೧೦. **ಸಿಂಗ್ ಜೆ.ಬಿ. "ಲೆಟ್ಸ್ ಫಸ್ಟ್ ಅಂಡರಸ್ಟ್ಯಾಂಡ್ ದೆಮ್"** ಯೋಜನಾ, ನವ್ಹೆಂಬರ್ ೧೯೮೪, ವಾಲ್ಯೂಮ್ ೨೮ ಸಂಖ್ಯೆ ೨೦-೨೧, ಪುಟ ೪೭. (೧೯೮೪)

೧೧. *ಸಿಲ್ಸ್.ಡಿ.ಎಲ್. "ಇಂಟರ್‌ನ್ಯಾಷನಲ್ ಎನ್‌ಸೈಕ್ಲೋಪಿಡಿಯಾ ಆಫ್ ಸೋಶಿಯಲ್ ಸಾಯನ್ಸ್"* ವಾಲ್ಯೂಮ್ ೧೬, ಕೋಲಿಯರ್, ಮ್ಯಾಕ್‌ಮಿಲನ್, ಲಂಡನ್. (೧೯೬೯)

೧೨. *ಇನಾಮದಾರ ಎನ್.ಆರ್. "ರೋಲ್ ಆಫ್ ವ್ಹಾಲೆಂಟರಿಸಂ ಇನ್ ಡೆವ್ಹಲಪಮೆಂಟ"* ದಿ ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಎಡ್ಮಿನಿಷ್ಟ್ರೇಶನ್, ವಾಲ್ಯೂಮ್ ೩೩, ನಂ. ೩ ಪುಟ ೪೨೧-೪೨೨. (೧೯೮೭)

೧೩. *ಸಿಂಗ್ ಜೆ.ಬಿ. "ಲೆಟ್ಸ್ ಫಸ್ಟ್ ಅಂಡರಸ್ಟ್ಯಾಂಡ್ ದೆಮ್"* ಯೋಜನಾ, ನವ್ಹೆಂಬರ್ ೧೯೮೪, ವಾಲ್ಯೂಮ್ ೨೮ ಸಂಖ್ಯೆ ೨೦-೨೧, ಪುಟ ೪೭. (೧೯೮೪)

೧೪. *ನಾಂದೇಡಕರ್ ವ್ಹಿ.ಜಿ. "ವಾಲೆಂಟರಿ ಅಸೋಸಿಯೇಶನ್- ಎ ಸ್ಟ್ರಾಟಜಿ ಇನ್ ಡೆವ್ಹಲಪಮೆಂಟ್",* ಐಜೆಓಪಿಎ, ವಾಲ್ಯೂಮ್ ೩೩, ನಂ. ೩ ಪುಟ ೪೬೫-೪೮೭. (೧೯೮೭)

೧೫. *ರಾಜಶೇಖರ ಡಿ. "ಎನ್.ಜಿ.ಓ.ಸ್ ಇನ್ ಇಂಡಿಯಾ: ಅಪಾರ್ಚುನಿಟೀಸ್ ಆಂಡ್ ಚಾಲೆಂಜಸ್"* ಜರ್ನಲ್ ಆಫ್ ರೂರಲ್ ಡೆವ್ಹಲೆಪಮೆಂಟ್, ವಾಲ್ಯೂಮ್ ೧೯ (೨) ಪುಟ ೨೪೯-೨೭೫. (೨೦೦೦)

೧೬. *ಎಮಿಲಿ ಡರ್ಕ್ ಹೀಮ್. "ಪ್ರೊಫೆಶನಲ್ ಎಥಿಕ್ ಆಂಡ್ ಸಿವ್ಹಿಲ್ ಮೋರಲ್ಸ್",* ಲಂಡನ್ ರಾಯಟೇಜ್ ಕೆಗನ್ ಪ್ರಾವ್ಹೆಟ್ ಲಿ. (೧೯೫೭)

೧೭. *ಜಿವೋಲ್ ಬೋಸ್. "ಎನ್‌ಜಿಓಸ್ ಆಂಡ್ ರೂರಲ್ ಡೆವಲಪಮೆಂಟ್ ಥಿಯರಿ ಆಂಡ್ ಪ್ರ್ಯಾಕ್ಟೀಸ್"* ಕಾನ್ಸೆಪ್ಟ ಪಬ್ಲಿಷಿಂಗ್ ಕಂಪೆನಿ, ನವದೆಹಲಿ. (೨೦೦೩)

೧೮. *ಲಲಿತಾ ಎನ್.ವ್ಹಿ. ಮತ್ತು ಕೊಪ್ಲಿ ಎಮ್. "ಸ್ಟೇಟಸ್ ಆಫ್ ವಾಲೆಂಟರಿ ಎಫರ್ಟ್ಸ್ ಇನ್ ಸೋಷಿಯಲ್ ವೆಲ್‌ಫೇರ್",* ಎನ್‌ಐಪಿಸಿಸಿಡಿ, ನವದೆಹಲಿ. ಪುಟ ೧೫ (೧೯೮೨)

೧೯. *ಅಂಟ್ವಾಲ್ ಪಿ.ಎನ್. "ವಾಟರ್ ಶೆಡ್ ಡೆವ್ಹಲಪಮೆಂಟ್ ಅಂಡರ್ ವಾಲಂಟರಿ ಆರ್ಗನೈಜೇಷನ್",* ಮಹಾರಾಷ್ಟ್ರ ಜರ್ನಲ್ ಆಫ್ ಎಕ್ಸ್‌ಟೆನ್ಸನ್ ಎಜುಕೇಶನ್, ನಂ. ೧೩ ಪುಟ ೩೨೦–೩೨೧. (೧೯೯೪)

೨೦. *ಕುಲಕರ್ಣಿ ವ್ಹಿ.ಎಂ. "ವಾಲೆಂಟರಿ ಆ್ಯಕ್ಷನ್ ಇನ್ ಡೆವಲಪಿಂಗ್ ಸೊಸೈಟಿ",* ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಪಬ್ಲಿಕ್ ಎಡ್ಮಿನಿಸ್ಟ್ರೇಷನ್, ಇಂದ್ರಪ್ರಸ್ಥ ಎಸ್ಟೇಟ್, ನವದೇಹಲಿ. (೧೯೬೯)

೨೧. *ಖಾನ ಎಂ.ಝೆಡ್. ಮತ್ತು ಥಾಮಸ್ ಎಂ.ಇ. "ರೋಲ್ ಆಫ್ ವಾಲೆಂಟರಿ ಎಜೆನ್ಸೀಜ್ ಇನ್ ರೂರಲ್ ದೆವಲಪಮೆಂಟ",* ಸೊಸಿಯಲ್ ಚೇಂಜ್, ವಾಲ್ಯೂಮ್ ೧೯(೧), ಪುಟ ೩–೧೨. (೧೯೮೯)

೨೨. *ಗೋನ್ಸಾವಜ್ ಜಿ.ಇ. "ಡೆವಲಪಮೆಂಟ್ ಆಂಡ್ ವಾಲೆಂಟರಿ ಎಜೆನ್ಸಿಜ್"* ವಾಲೆಂಟರಿ ಆ್ಯಕ್ಷನ್, ವಾಲ್ಯೂಮ್ ೧೭(೩) ಪುಟ ೫೭–೬೦. (೧೯೭೫)

೨೩. *ಚಾರ್‍ಯುಲು ಎ.ಎನ್. "ವಾಲೆಂಟರಿ ಆರ್ಗನೈಜೇಶನ್ ಇನ್ ರೂರಲ್ ಡೆವ್ಹಲಪಮೆಂಟ ಇನ್ ಇಂಡಿಯಾ, ಸಮ್‌ಪ್ಯಾಕ್ಟ್ಸ್"* ನ್ಯಾಶನಲ್ ಇನಸ್ಟ್ಯೂಟ್ ಆಫ್ ರೂರಲ್ ಡೆವಲಪಮೆಂಟ, ಹೈದರಾಬಾದ. (೧೯೭೧)

೨೪. *ಚೌಧರಿ ಡಿ.ಪಿ. "ವಾಲೆಂಟರಿ ಸೊಶಿಯಲ್ ವೆಲ್‌ಫೇರ್ ಇನ್ ಇಂಡಿಯಾ",* ಸ್ಟರ್ಲಿಂಗ್ ಪಬ್ಲಿಷರ್ ನವದೆಹಲಿ. (೧೯೭೧)

೨೫. *ಟೆಂಡ್ಲರ್ ಜೆ. "ಟರ್ನಿಂಗ್ ಪ್ರೈವೇಟ್ ವಾಲಂಟರಿ ಆರ್ಗನೈಜೇಷನ್ ಇನ್ ಟು ಡೆವಲಪಮೆಂಟ ಎಜೆನ್ಸೀಜ್, ಕೊಶ್ಚನ್ ಫಾರ್ ಇವ್ಹಾಲ್ಯೂವೇಶನ್",* ಯು.ಎಸ್.ಎ.ಐ.ಡಿ., ವಾಷಿಂಗಟನ್ ಡಿ.ಸಿ. (೧೯೮೨)

೨೬. *ಪೌಲ್ ಎಸ್. "ಮ್ಯಾನೇಜಿಂಗ್ ಡೆವಲಪಮೆಂಟ್ ಪ್ರೋಗ್ರಾಮ್ಸ್: ದ ಲೆಸನ್ಸ್ ಆಫ್ ಸಕ್ಸೆಸ್"* ವೆಸ್ಟ ವ್ಯೂವ್ ಪ್ರೆಸ್, ಬೋಲ್ಡ್‌ರ (೧೯೮೨)

೨೭. *ಬೊಯ್ಸೆ ಡಬ್ಲ್ಯೂ. "ಸಿ.ಬಿ.ಆರ್.–ಎನ್.ಜಿ.ಓ. ರಿಲೇಶನ್ ಶಿಪ್ ವಿಥ್ ಡೋನರ್ಸ ಆಂಡ್ ದ ಸ್ಟೇಟ್"* ಐ.ಸಿ.ಎ.ಸಿ.ಬಿ.ಆರ್.,ಕ್ವೀನ್ಸ್ ಯುನಿವ್ಹರ್ಸಿಟಿ, ಕಿಂಗಸ್ಟನ್. (೧೯೮೪)

೨೮. *ಬೋರ್ಡಿಲಾನ್.ಜೆ.ಎ.ಎಫ್.ಸಿ. (ಎಡಿಟೆಡ್) "ವಾಲೆಂಟರಿ ಸೋಸಿಯಲ್ ಸರ್ವಿಸಸ್"*–ದೇರ್ ಪ್ಲೇಸ್ ಇನ್ ಮಾಡರ್ನ ಸ್ಟೇಟ್, ಮಿಥುನ್, ಲಂಡನ್. (೧೯೪೫)

೨೯. *ಭಟ್ ಎ. "ಡೆವಲಪಮೆಂಟ ಆಂಡ್ ಸೊಶಿಯಲ್ ಜಸ್ಟಿಸ್"* ಸೇಜ್ ಪಬ್ಲಿಕೇಷನ್ ನವದೆಹಲಿ. (೧೯೮೮)

೩೦. *ರಾಬರ್ಟ ಸಿ ವೈರಸಿಂಗ್. "ಸೋಷಿಯಾಲಜಿ, ಸೊಸೈಟಿ ಆಂಡ್ ಫ್ರೀ ಎಂಟರ್‌ಪ್ರೈಸ್ ಪಾಲಿಟಿಕ್ಸ್, ಎ ಸ್ಟಡಿ ಆಫ್ ವಾಲಂಟರಿ ಅಸೋಶಿಯೆಶನ್ ಇನ್ ಅರ್ಬನ್ ಇಂಡಿಯಾ",* ವಿಕಾಸ ನವದೆಹಲಿ. (೧೯೯೭)

೩೧. *ರಿಚ್. "ಕೊಲಾಬರೆಟಿಂಗ್ ಟು ರೆಡ್ಯೂಸ್ ಪಾವರ್ಟಿ: ಸಿಟಿ ಹಾಲ್ಸ್ ಆಂಡ್ ಕಮ್ಯುನಿಟಿ ಬೇಸ್‌ಡ್ ಆರ್ಗನೈಜೇಷನ್ಸ್ ವರ್ಕಿಂಗ್ ಟುಗೆದರ್ ಟು ರಿವೈಟಲೈಜ್ ನೇಬರ್ ಹುಡ್ಸ್",* ನ್ಯಾಷನಲ್ ಲೀಗ್ ಆಫ್ ಸಿಟಿಸ್ ವಾಷಿಂಗಟನ್ ಡಿ.ಸಿ. (೧೯೯೮)

೩೨. *ಲಲಿತಾ ಎನ್. "ವಾಲೆಂಟರಿ ವರ್ಕ್ಸ ಇನ್ ಇಂಡಿಯಾ".* ಎನ್‌ಐಪಿಸಿಸಿಡಿ ನವದೆಹಲಿ. (೧೯೭೫)

೩೩. *ವೆಲ್‌ಬ್ಯಾಕ್ ಡಿ. ಮತ್ತು ಸೆಲ್ ಪಿ. "ಡಸ್ ಪಾರ್ಟಿಸಿಪಿಶೇನ್ ಇನ್ ವಾಲೆಂಟರಿ ಅಸೋಸಿಯೇಶನ್ ಕಾಂಟ್ರಿಬ್ಯೂಟ್ ಟು ಸೊಸಿಯಲ್ ಕ್ಯಾಪಿಟಲ್? ದಿ ಇಂಪ್ಯಾಕ್ಟ ಆಫ್ ಇಂಟೆನ್ಸಿಟಿ ಸ್ಕೋಪ್ ಆಂಡ್ ಟೈಪ್ ನಾನ್ ಪ್ರಾಫಿಟ್",* ವಾಲಂಟರಿ ಸೆಕ್ಟರ್, ವಾಲ್ಯೂಮ್ ೩೧ ನಂ. ೧ (೨೦೦೨)

೩೪. *ಶೇಷಗಿರಿ ಎಸ್. "ರೋಲ್ ಆಫ್ ದಿ ಇಂಡಿಯನ್ ಸ್ಟೇಟ್ ಆ್ಯಂಡ ಎನ್‌ಜಿಓಸ್ ಇನ್ ಪಬ್ಲಿಕ್ ಹೆಲ್ತ"* ಎಂಫಿಲ್ ಪ್ರಭಂದ, ಸೆಂಟರ್ ಫಾರ್ ಪೊಲೊಟೊಕಲ್ ಸೈನ್ಸ್, ಜೆ.ಎನ್.ಯು. ನವದೆಹಲಿ. (೧೯೯೯)

೩೫. *ಸರ್ಕಾರ್ ಎ.ಕೆ. "ಎನ್.ಜಿ.ಓಸ್. ದ ನ್ಯೂ ಲೆಕ್ಸಿಕಾನ್ ಆಫ್ ಹೆಲ್ತ ಕೇರ್",* ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ ನವದೆಹಲಿ (೨೦೦೪)

೩೬. *ಸಚ್ಚಿದಾನಂದ. "ಟ್ರೈಬಲ್ ಡೆವಲಪಮೆಂಟ ಆಂಡ್ ವಾಲಂಟರಿ ಆ್ಯಕ್ಷನ್",* ಇಂಟರ್ ಇಂಡಿಯಾ ಪಬ್ಲಿಕೇಷನ್ ನವದೆಹಲಿ. (೧೯೯೪)

೩೭. *ಸಿಂಗ್ ಕೆ.ಎನ್. ಆಂಡ್ ರಾವ್ ಕೆ.ಎನ್. "ಆಟಿಟ್ಯೂಡ್ ಆಫ್ ರೂರಲ್ ಬಾಯ್ಸ್ ಟವರ್ಡ್‌ಸ್ ಯುಥ್ ಕ್ಲಬ್ಸ್ ಆಂಡ ಪ್ರೊಜೆಕ್ಟಿಂಗ ಲೈಕ್ಡ್ ಬೈ ದೆಮ್",* ಇಂಡಿಯನ್ ಜರ್ನಲ್ ಆಫ್ ಎಕ್ಸ್ಟೆನ್ಷನ್ ಎಜ್ಯುಕೇಶನ್, ವಾಲ್ಯೂಮ ೧೦(೩) ಪುಟ ೧೮೫–೧೯೧. (೧೯೬೫)

೩೮. *ಸೇನ್ ಎ.ಸಿ. "ಎ ರಿಪೋರ್ಟ ಆಫ್ ಸೆಂಟ್ರಲ್ ರಿಜನಲ್ ಕಾನ್ಫರೆನ್ಸ ಆಫ್ ವಾಲಂಟರಿ ಎಜೆನ್ಸಿಸ್",* ವಾಲೆಂಟರಿ ಆ್ಯಕ್ತನ್ ವಾಲ್ಯೂಮ ನಂ. ೧೭(೩) ಪುಟ ೭೧–೭೮ (೧೯೭೫)

೩೯. *ಜ್ಹಾನ್ಸನ್. "ಎನ್.ಜಿ.ಓ.ಸ್. ಹೆಲ್ತ ಪ್ರೊವೈಡ್ಸ್ ಆಂಡ್ ಯುನಿವ್ಹರ್ಸಿಟಿಸ್: ಕೊಲಾಬ್ರೇಷನ್ ಇನ್ ಸಿ.ಬಿ.ಆರ್"* ಐಸಿಎ ಸಿಬಿಆರ್ ಕ್ವೀನ್ಸ್ ಯುನಿವರ್ಸಿಟಿ ಕಿಂಗಸ್ಟನ್.

೪೦. *ಚಾರ್‍ಯಲು ವ್ಹಿ.ಎನ್. "ವಾಲೆಂಟರಿ ಆರ್ಗನೈಜೇಶನ್ ಇನ್ ರೂರಲ್ ಡೆವ್ಹಲಪಮೆಂಟ ಇನ್ ಇಂಡಿಯಾ, ಸಮ್‌ಪ್ಯಾಕ್ಟ್ಸ್"* ನ್ಯಾಶನಲ್ ಇನಸ್ಟ್ಯೂಟ್ ಆಫ್ ರೂರಲ್ ಡೆವಲಪಮೆಂಟ, ಹೈದರಾಬಾದ. (೧೯೭೧)

೪೧. *ಜೈನ. ಎಲ್. ಸಿ " ಗ್ರಾಸ್ ವಿದೌಟ ರೂಟ್ಸ ರೂರಲ್ ಡೆವಲ್‌ಪಮೆಂಟ್ ವಿದ ಗವರ್ನಮೆಂಟ ಆಸ್ಪಿಸ್‌ಸ",* ಸೇಜ ಪಬ್ಲಿಕೇಶನ, ನವದೆಹಲಿ (೧೯೮೫)

೪೨. *ಪ್ರಸಾದ. ಎ "ವಾಲೆಂಟರಿ ಆ್ಯಕ್ಸನ್ ಆ್ಯಂಡ ರೂರಲ್ ರಿ ಕನ್ಸಸ್ಟ್ರಕ್ಸನ್"* ಇಂಟರ್ ಇಂಡಿಯಾ ಪಬ್ಲಿಕೇಶನ್ ನವದೆಹಲಿ (೧೯೯೭)

೪೩. *ರಾವ್. ಡಿ. ಎನ್ "ಸೋಶಿಯಲ್ ಸೆಕ್ಟರ್ ಆ್ಯಂಡ ಡೆವಲ್‌ಪಮೆಂಟ್ ಪ್ಲ್ಯಾನಿಂಗ"* ಎಂಪ್ಲಾಯಮೆಂಟ ನ್ಯೂಸ್ ವಾಲ್ಯೂಮ ೨೪, ನಂ. ೧ (೧೯೯೯)

೪೪. *ಶ್ರೀಪತಿ ಕೆ.ಪಿ "ಪರ್ಫಾಮೆನ್ಸ್ ಆಫ್ ರೂರಲ್ ಡೆವಲ್‌ಪಮೆಂಟ್ ಪ್ರೊಜೇಕ್ಟ್ಸ ಬೈ ವಾಲೆಂಟರಿ ಏಜೆನ್ಸಿಸ್"* ಜರ್ನಲ್ ಆಫ್ ರೂರಲ್ ಡೆವಲ್‌ಪಮೆಂಟ್, ವಾಲ್ಯೂಮ್ ೧೪ (೪) ಪುಟ ೪೩೧–೪೪೧ (೧೯೮೫)

೪೫. *ಶ್ರೀವಾತ್ಸವ್. ಆರ್. ಎಲ್ "ಸೆಕ್ಯೂರಿಂಗ್ ಪಿಪಲ್ಸ್ ಪಾರ್ಟಿಸಿಪೇಶನ್ ಫಾರ್ ಪ್ರೊಗ್ರೆಸ್"* ಸೋಶಿಯಲ್ ವೆಲ್‌ಫೇರ, ವಾಲ್ಯೂಮ್ ೪೬ (೧೧), ಪುಟ ೧೫–೧೮ (೨೦೦೦)

೪೬. *ಸೂದ್. ಕೆ. ಎನ್ "ವಾಂಟೆಡ್ ವಾಲ್ಯೆಂಟರ್ಸ ಫಾರ್ ಗರೀಬಿ ಹಟಾವೋ"* ವಾಲೆಂಟರಿ ಆ್ಯಕ್ಸನ್, ವಾಲ್ಯೂಮ ೧೭ (೩) ಪುಟ ೭೧–೭೮ (೧೯೭೨)

೪೭. *ಸಿಂಘಲ್. ಆರ್ "ರೋಲ್ ಆಫ್ ಎನ್.ಜಿ.ಓ ಸ್ ಇನ್ ಡೆವಲ್‌ಪಮೆಂಟ್",* ಕುರುಕ್ಷೇತ್ರ ವಾಲ್ಯೂಮ್ ೯ (೩), ಪುಟ ೫೬–೫೯ (೧೯೯೮)

೪೮. *ಚೌಧರಿ .ಡಿ. ಪಿ "ವಾಲೆಂಟರಿಸ್‌ಮ – ವೆಲ್‌ಫೇರ್ ಆ್ಯಂಡ್ ಡೆವಲ್‌ಪಮೆಂಟ್",* ಸೂಶೀಯಲ್ ವೆಲ್‌ಫೇರ್, ವಾಲ್ಯೂಮ್ ೪೪(೧), ಪುಟ ೩–೧೦ (೨೦೦೦)

೪೯. *ಲಲಿತಾ ಎನ್ "ವ್ವಾಲೆಂಟರಿ ವರ್ಕ್ಸ ಇನ್ ಇಂಡಿಯಾ"*– ಎನ್.ಆಯ್.ಪಿ.ಸಿ.ಸಿ.ಡಿ, ನ್ಯೂದೆಹಲಿ (೧೯೭೫)

೫೦. *ಲಲಿತಾ. ಎನ್. ವ್ಹಿ ಕೊಪ್ಲಿ ಎಮ್ ಸ್ಟೇಟ್ಸ್ ಆಫ್ ವ್ವಾಲೆಂಟರಿ ಎಪರ್ಟ್ಸ ಇನ್ ಸೋಶಿಯಲ್ ವೆಲಫೇರ",* ಎನ್.ಆಯ್.ಪಿ.ಸಿ.ಸಿ.ಡಿ ನ್ಯೂದೆಹಲಿ (೧೯೮೭)

೫೧. *ಮೊಲ್ಲಿ. ಜೆ (೧೯೯೦) "ಆರ್ಗನೈಜೇಶನ್ ಎಲೀವ್ಹೇಶನ್ ಆಫ್ ಪಾವರ್ಟಿ ಅ್ಯಂಡ್ ಎಕ್ಸಪಿರಿಯನ್ಸ್ ವಿದ್ ವ್ವಾಲೆಂಟರಿ ಆರ್ಗನೈಜೇಶನ್"* ಕುರುಕ್ಷೇತ್ರ ಪಾರ್ಟ ೩೮(೯), ಪು ೨೪–೨೭

## ಅಧ್ಯಾಯ – ೩

# ಬೆಳಗಾವಿ ಜಿಲ್ಲೆಯ ಅಭಿವೃದ್ಧಿಯ ಪಕ್ಷಿನೋಟ

೩.೧ ಇತಿಹಾಸ

೩.೨ ಆಡಳಿತ ವಿಭಾಗಗಳು

೩.೩ ಜನಸಂಖ್ಯಾ ವಿವರಗಳು

೩.೪ ಭೌಗೋಳಿಕ ಲಕ್ಷಣಗಳು

೩.೫ ಹವಾಮಾನ

೩.೬ ಅಭಿವೃದ್ಧಿ ವಿಶೇಷತೆಗಳು

ಅ) ಸಾಮಾಜಿಕ ವಿಶೇಷತೆಗಳು

ಬ) ಧಾರ್ಮಿಕ

ಕ) ಆರ್ಥಿಕ

ಡ) ಕೃಷಿ

ಇ) ಔದ್ಯೋಗಿಕ

ಫ) ಆರೋಗ್ಯ

ಗ) ಶಿಕ್ಷಣ

ಹ) ಸಾರಿಗೆ ಮತ್ತು ಸಂವಹನ

ಐ) ಕಲೆ, ಸಾಹಿತ್ಯ ಮತ್ತು ಸಂಸ್ಕೃತಿ

೩.೭ ಸರ್ಕಾರೇತರ ಸಂಸ್ಥೆಗಳು

## ಅಧ್ಯಾಯ – ೩

# ಬೆಳಗಾವಿ ಜಿಲ್ಲೆಯ ಅಭಿವೃದ್ಧಿಯ ಪಕ್ಷಿನೋಟ

ಈ ಅಧ್ಯಾಯದಲ್ಲಿ ಬೆಳಗಾವಿ ಜಿಲ್ಲೆಯ ಭೌಗೋಳಿಕ, ಧಾರ್ಮಿಕ, ಸಾಮಾಜಿಕ, ಔದ್ಯೋಗಿಕ ಕ್ಷೇತ್ರಗಳ ಕುರಿತು ಸಂಕ್ಷಿಪ್ತ ಚಿತ್ರಣವನ್ನು ನೀಡಲಾಗಿದೆ.

**೩.೧ ಇತಿಹಾಸ :**

ಕ್ರಿ.ಪೂ. ೩ ನೇ ಶತಮಾನದಿಂದ ಕ್ರಿ.ಶ ೩ ನೇ ಶತಮಾನದವರೆಗೆ ಜಿಲ್ಲೆಯ ಬಹುಭಾಗ ಪೈಠಾಣದ ಶಾತವಾಹನರ ಅಳ್ವಿಕೆಯಲ್ಲಿದ್ದು, ಕುಂತಲಾ ಪ್ರಾಂತದ ಭಾಗವೆಂದು ಕರೆಯಲ್ಪಡುತ್ತಿತ್ತು. ಅವರ ಆಳ್ವಿಕೆ ಅಂತ್ಯವಾದನಂತರ, ಭೋಜರು, ಕದಂಬರು (೩೪೫ ರಿಂದ ಕ್ರಿ.ಶ ೫೪೦), ಬದಾಮಿಯ ಚಾಲುಕ್ಯರು (ಕ್ರಿ.ಶ ೫೪೦ ರಿಂದ ೭೭೩), ಮತ್ತು ಮಳಖೇಡದ ರಾಷ್ಟ್ರಕೂಟರು (ಕ್ರಿ.ಶ ೭೩೩ ರಿಂದ ೯೭೩) ಇದನ್ನು ಆಳಿದರು. ಬೆಳಗಾವಿ ಜಿಲ್ಲೆಯನ್ನು ಆಳಿದವರಲ್ಲಿ ಇನ್ನುಳಿದ ಪ್ರಮುಖರೆಂದರೆ ಕಲ್ಯಾಣದ ಚಾಲುಕ್ಯರು, ಗೋವಾದ ಕದಂಬರು, ದ್ವಾರಸಮುದ್ರ ಹೊಯ್ಸಳರು, ಮತ್ತು ವಿಜಯನಗರ ಅರಸರು (ಕ್ರಿ.ಶ ೧೩೭೫–೧೫೭೨) ಯಾದವರು ಗುರುತಿಸಿಕೊಳ್ಳುತ್ತಾರೆ. ೧೫೭೨ರಲ್ಲಿ ಬಹುತೇಕ ಎಲ್ಲ ಭಾಗಗಳನ್ನು ಬಹುಮನಿಯರು ಗೆದ್ದುಕೊಂಡರು, ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ಈ ಜಿಲ್ಲೆಯು ಮೊಘಲರ ಅಧೀನಕ್ಕೊಳಪಟ್ಟಿತು. ಅದರಂತೆಯೆ, ಹದಿನೆಂಟನೆಯ ಶತಮಾನವು ಪೂರ್ತಿಯಾಗಿ ಮರಾಠರಾದ ಪೇಶ್ವೆ, ಕೊಲ್ಹಾಪೂರ ಛತ್ರಪತಿ, ಸವಣೂರು ನವಾಬರ ಆಡಳಿತಕ್ಕೊಳಗೊಂಡಾಗ ಇಡೀ ಜಿಲ್ಲೆಯ ಭೌಗೋಳಿಕ ಚಿತ್ರಣವು ಬದಲಾಗಿ, ರಾಜಕೀಯ ಸ್ಥಿತ್ಯಂತರಗಳು ಕಂಡುಬಂದವು.

೧೮೧೮ರಲ್ಲಿ ಪೇಶ್ವೆಯವರನ್ನು ಸೋಲಿಸಿದ ಘಟನೆಯಿಂದ ಬೆಳಗಾವಿ ಜಿಲ್ಲೆಯು ಬ್ರಿಟಿಷರ ಕೈಗೆ ಸೇರಿತು: ಬ್ರಿಟಿಷರು ೧೮೨೪ರಲ್ಲಿ ಕಿತ್ತೂರನ್ನು ವಶಪಡಿಸಿಕೊಂಡರು. ೧೮೩೬ರಲ್ಲಿ ಬೆಳಗಾವಿಯನ್ನು ಆಡಳಿತ ಜಿಲ್ಲೆಯಾಗಿ ಪರಿವರ್ತನೆ ಮಾಡಿ, ಹಲವಾರು ಆಡಳಿತಾತ್ಮಕ ವಿಭಾಗಗಳನ್ನು ರೂಪಿಸಿದರು.

ಸ್ವಾತಂತ್ರ್ಯಾನಂತರ ಪ್ರಗತಿಯ ರಾಜ್ಯಗಳೆಲ್ಲವೂ ಭಾರತದ ಒಕ್ಕೂಟದಲ್ಲಿ ಸಮ್ಮಿಲನಗೊಂಡವು. ಪರಿಣಾಮವಾಗಿ ಇಡೀ ಜಿಲ್ಲೆಯು ಬಾಂಬೆ ರಾಜ್ಯದ ಭಾಗವಾಗಿ ಪರಿವರ್ತನೆಗೊಂಡಿತು. ೧೯೫೬ ನವೆಂಬರ್‌ನಲ್ಲಿ ಭಾಷಾವಾರು ಆಧಾರದಿಂದ ರಾಜ್ಯವೊಂದು ರಚನೆಯಾದಾಗ, ಪೂರ್ತಿಯಾಗಿ ಬಾಂಬೆ ಕರ್ನಾಟಕ ಬೆಳಗಾವಿಯನ್ನೊಳಗೊಂಡು ಮೈಸೂರು ರಾಜ್ಯಕ್ಕೆ ಸೇರಿದಂತಾಯಿತು ೧೯೭೩ರಲ್ಲಿ ಕರ್ನಾಟಕ ರಾಜ್ಯವೆಂದು ಮರುನಾಮಕರಣವಾದಾಗ ಬೆಳಗಾವಿಯು ಕರ್ನಾಟಕ ರಾಜ್ಯದ ಎರಡನೆಯ ದೊಡ್ಡ ಜಿಲ್ಲೆಯಾಗಿ ಹೊರಹೊಮ್ಮಿತ್ತು. ಈಗ ಬೆಳಗಾವಿಯು ಉತ್ತರ ಕರ್ನಾಟಕದ ಮುಖ್ಯವಾದ ಆಡಳಿತಾತ್ಮಕ ವಿಭಾಗವೆಂದು ಪರಿಗಣಿಸಲ್ಪಟ್ಟಿದೆ.

**೩.೨ ಆಡಳಿತ ವಿಭಾಗಗಳು :**

'ಬೆಳಗಾವಿ' ಜಿಲ್ಲೆಯ ಕೇಂದ್ರ ಸ್ಥಳವಾಗಿದ್ದು, ಇದರಲ್ಲಿ ೧೦ ತಾಲ್ಲೂಕುಗಳನ್ನು ರಚಿಸಲಾಗಿದೆ. ಅವುಗಳಲ್ಲಿ ಅಥಣಿ, ಬೈಲಹೊಂಗಲ, ಬೆಳಗಾವಿ, ಚಿಕ್ಕೋಡಿ, ಗೋಕಾಕ, ಹುಕ್ಕೇರಿ, ಖಾನಾಪೂರ, ರಾಯಬಾಗ್, ರಾಮದುರ್ಗ ಮತ್ತು ಸೌದತ್ತಿಗಳು ಸೇರಿವೆ, ಇವೆಲ್ಲ ಹತ್ತು ತಾಲೂಕುಗಳನ್ನು ಮೂರು ಕಂದಾಯ ಉಪ-ವಿಭಾಗಗಳೆಂದು ವರ್ಗೀಕರಿಸಿ - ಬೆಳಗಾವಿ, ಬೈಲಹೊಂಗಲ ಮತ್ತು ಚಿಕ್ಕೋಡಿ ಉಪವಿಭಾಗಗಳೆಂದು ರಚಿಸಲಾಗಿದೆ. ಈ ಹತ್ತು ತಾಲೂಕುಗಳಲ್ಲಿ ೧೯೯೬ ಚ.ಕಿ.ಮೀ ಕ್ಷೇತ್ರ ಹೊಂದಿದ ಅಥಣಿ ತಾಲೂಕು ದೊಡ್ಡದಾಗಿದ್ದರೆ, ೯೫೯ ಚ.ಕಿ.ಮೀ ಪ್ರದೇಶ ಹೊಂದಿದ ರಾಯಬಾಗ ತಾಲೂಕು ಅತೀ ಚಿಕ್ಕ ತಾಲೂಕು ಆಗಿದೆ.

**೩.೩ ಜನಸಂಖ್ಯಾ ವಿವರಗಳು :**

ಕರ್ನಾಟಕ ರಾಜ್ಯದ ಜನಸಂಖ್ಯೆಯ ಪ್ರಕಾರ ಬೆಳಗಾವಿ ಜಿಲ್ಲೆಯು ಎರಡನೆಯ ದೊಡ್ಡ ಜಿಲ್ಲೆಯಾಗಿದೆ. ೨೦೦೧ ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೪೨,೧೪,೫೦೫ ಜನವಸತಿಯಿದ್ದು, ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೭.೯೭ ರ ಪ್ರಮಾಣವನ್ನು ಹೊಂದಿದೆ. ರಾಜ್ಯದ ಒಟ್ಟು ಪ್ರದೇಶದಲ್ಲಿ ಶೇ. ೬.೯೯ ರಷ್ಟು ಜಿಲ್ಲೆಯ ಭಾಗವಾಗಿದ್ದು, ೧೩೪೧೫ ಚ.ಕಿ.ಮೀಟರ್‌ರಷ್ಟು ಭೌಗೋಳಿಕ ಕ್ಷೇತ್ರ ಹೊಂದಿದೆ. ಈ ಜಿಲ್ಲೆಯಲ್ಲಿ ಒಟ್ಟು ೧೨೭೦ ಗ್ರಾಮಗಳಿದ್ದು, ೪೮೫ ಗ್ರಾಮ ಪಂಚಾಯತಿ ಮತ್ತು ೧೭ ಪಟ್ಟಣ-ನಗರ ಸಭೆಗಳಿವೆ.

ಜಿಲ್ಲೆಯಲ್ಲಿ ಜನಸಂಖ್ಯಾ ಸಾಂದ್ರತೆ ಪ್ರತಿ ಕಿ.ಮೀಗೆ ೩೧೪ಇದ್ದು, ಇದು ರಾಜ್ಯದ ೨೭೬ ಕ್ಕಿಂತ ಹೆಚ್ಚಾಗಿದೆ. ಒಟ್ಟು ಜನಸಂಖ್ಯೆಯಲ್ಲಿ ೩೨.೧ ಲಕ್ಷದಷ್ಟು ಗ್ರಾಮೀಣ ಭಾಗಗಳಲ್ಲಿದ್ದರೆ, ಇನ್ನೂಳಿದ ಕೇವಲ ೧೦.೧೨ ಲಕ್ಷ ಜನತೆ ನಗರವಾಸಿಗಳಾಗಿದ್ದು, ಇದರಲ್ಲಿ ೧೧% ಪರಿಶಿಷ್ಟ ವರ್ಗದವರು ಮತ್ತು ಕೇವಲ ೬% ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದಾರೆ. ಪ್ರತಿ ೧೦೦೦ ಜನ ಪುರುಷರಿಗೆ ೯೬೦

ಸ್ತ್ರೀಯರಿದ್ದಾರೆ. ರಾಜ್ಯದ ಸಾಕ್ಷರತಾ ಪ್ರಮಾಣ ಶೇ. ೬೬.೬ಕ್ಕೆ ಹೋಲಿಸಿದರೆ, ಜಿಲ್ಲೆಯಲ್ಲಿ ಅದು ಶೇ. ೬೪.೨ ರಷ್ಟಿದೆ. ಪುರುಷರ ಸಾಕ್ಷರತೆಯು ಶೇ. ೭೫.೮೯ ರಷ್ಟಿದ್ದರೆ, ಮಹಿಳೆಯರಲ್ಲಿ ಕೇವಲ ಶೇ. ೫೨.೩ ರಷ್ಟು ಮಾತ್ರ ಇರುತ್ತದೆ.

***ಕೋಷ್ಟಕ–೩.೧ : ಬೆಳಗಾವಿ ಜಿಲ್ಲೆಯ ಜನಸಂಖ್ಯೆಯ ವಿಶೇಷತೆಗಳ ವಿವರ ೨೦೦೧ ರ ಮಾಹಿತಿ.***

| ಅ.ನಂ | ವಿವರ | ಬೆಳಗಾವಿ ಜಿಲ್ಲೆ | ಕರ್ನಾಟಕ ರಾಜ್ಯ |
|---|---|---|---|
| ೧ | ಭೌಗೋಳಿಕ ಕ್ಷೇತ್ರ (ಚ.ಕಿ.ಮೀ) | ೧೩,೪೧೫,೦೦ | ೧,೯೧೭೯೧ |
| ೨ | ಗ್ರಾಮಗಳು | ೧೨೭೦ | ೨೯೪೦೬ |
| | ವಸತಿ ಗ್ರಾಮಗಳು | ೧೨೫೫ | ೨೭೪೮೧ |
| | ವಸತಿಯೇತರ ಗ್ರಾಮಗಳು | ೧೫ | ೧೯೨೫ |
| ೩ | ನಗರ / ಪಟ್ಟಣಗಳು | ೨೨ | ೨೭೦ |
| ೪ | ಗ್ರಾಮ ಪಂಚಾಯ್ತಿಗಳು | ೪೮೫ | ೫೭೦೫ |
| ೫ | ಜನಸಂಖ್ಯೆಯ ವೈಶಿಷ್ಟಗಳು | | |
| | ಒಟ್ಟು ಜನಸಂಖ್ಯೆ (ಲಕ್ಷಗಳಲ್ಲಿ) | ೪೨೧೪೫೦೫ | ೪೨೮೫೦೫೬೨ |
| | ಗ್ರಾಮೀಣ ಜನಸಂಖ್ಯೆ (ಲಕ್ಷಗಳಲ್ಲಿ) | ೩೨೦೧೮೧೪ | ೩೪೮೮೯ |
| | ಪಟ್ಟಣ/ನಗರ ಜನಸಂಖ್ಯೆ (ಲಕ್ಷಗಳಲ್ಲಿ) | ೧೦೧೨೯೧ | ೧೭೯೬೧೫೨೯ |
| | ಪುರುಷರು ಜನಸಂಖ್ಯೆ (ಲಕ್ಷಗಳಲ್ಲಿ) | ೨೧೫೦೯೦ | ೨೬೮೯೮೯೧೮ |
| | ಮಹಿಳೆಯರು ಜನಸಂಖ್ಯೆ (ಲಕ್ಷಗಳಲ್ಲಿ) | ೨೦೬೪೪೧೫ | ೨೫೫೬೪೪ |
| | ಜನಸಂಖ್ಯೆ ಸಾಂದ್ರತೆ (ಪ್ರತಿ ಚ.ಕಿ.ಮೀ) | ೩೧೪ | ೨೭೬ |
| | ಸಾಕ್ಷರತಾ ಜನತೆ | ೬೪.೨ | ೬೬.೬ |
| | ಮಹಿಳೆಯರು (ಪ್ರತಿ ಸಾವಿರಕ್ಕೆ) | ೯೬೦ | ೯೬೫ |
| | ಕೃಷಿ ಕಾರ್ಮಿಕರು (ಶೇಕಡಾ ವಾರು) | ೩೧.೩ | ೨೬.೫ |
| ೬ | ಸರಾಸರಿ ಮಳೆ ಪ್ರಮಾಣ (ಮಿಮಿ) | ೮೩೫.೦೦ | ೯೧೦.೦೦ |
| ೭ | ಸರಾಸರಿ ಮಳೆಯಾಗಿದ್ದು (ಮಿಮಿ) | ೭೯೩ | ೬೧೧ |

***ಮೂಲ : ಬೆಳಗಾವಿ ಜಿಲ್ಲಾ ಅಂಕಿಅಂಶಗಳ ನೋಟ ೨೦೦೮–೦೯, ಜಿಲ್ಲಾ ಜನಸಂಖ್ಯಾ ಹೊತ್ತಿಗೆ (ಬೆಳಗಾವಿ) ೨೦೦೧ ಮತ್ತು ಭಾರತೀಯ ಜನಗಣತಿ.***

ಜಿಲ್ಲೆಗೆ ಕೃಷ್ಣ, ಮಲಪ್ರಭಾ ಮತ್ತು ಘಟಪ್ರಭಾ ನದಿಗಳಿಂದ ನೀರು ಪೂರೈಕೆ ಆಗುತ್ತಿದ್ದು, ಇವುಗಳಿಗೆ ವೇದಗಂಗಾ, ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ನದಿಗಳು ಉಪನದಿಗಳಾಗಿವೆ. ಜೊತೆಗೆ ಸ್ಥಳೀಯವಾಗಿ ನೀರು ಪೂರೈಸಲು ಹಲವಾರು ಹಳ್ಳ–ಕೆರೆಗಳಿವೆ.

ಘಟಪ್ರಭಾ ನದಿಗೆ ಹಿಡಕಲ್ ಆಣೆಕಟ್ಟನ್ನು ಮತ್ತು ಮಲಪ್ರಭಾ ನದಿಗೆ ನವಿಲುತೀರ್ಥದಲ್ಲಿ ಆಣೆಕಟ್ಟನ್ನು ಕಟ್ಟಲಾಗಿದೆ. ಇವೆರಡು ಆಣೆಕಟ್ಟುಗಳಿಂದ ಧಾರವಾಡ, ಬಿಜಾಪೂರ, ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಗಳಿಗೆ ಕುಡಿಯುವ ನೀರು ಹಾಗೂ ನೀರಾವರಿಯ ಸೌಲಭ್ಯ ಒದಗಿಸಿದೆ.

ಕೃಷಿಯ ಅಭಿವೃದ್ಧಿಗಾಗಿ ಭೂಮಿಯಲ್ಲಿನ ಮಣ್ಣು ಯಾವತರಹದ್ದೆಂಬುದು ಮಹತ್ವದ್ದೆನಿಸುತ್ತದೆ. ಬೆಳಗಾವಿ ಜಿಲ್ಲೆಯಲ್ಲಿರುವ ಭೂಮಿಯನ್ನು ನಾಲ್ಕು ತರಹದಲ್ಲಿ ವಿಂಗಡಿಸಬಹುದು. ಅವುಗಳೆಂದರೆ–

೧. ಗಾಡವಾದ ಕಪ್ಪು ಮಣ್ಣು

೨. ಮಧ್ಯಮ ಕಪ್ಪು ಮಣ್ಣು

೩. ನಸು ಕಪ್ಪು ಮಣ್ಣು

೪. ಕೆಂಪು ಮಿಶ್ರಿತ ಕಪ್ಪು ಮಣ್ಣು

**೩.೪ ಭೌಗೋಳಿಕ ಲಕ್ಷಣಗಳು:**

ಜಿಲ್ಲೆಯನ್ನು ಮುಖ್ಯವಾಗಿ ಮೂರು ಭೌಗೋಳಿಕ ಕ್ಷೇತ್ರವನ್ನಾಗಿ ವಿಂಗಡಿಸುತ್ತಾರೆ. ಅವುಗಳೆಂದರೆ–

೧. ಮಲೆನಾಡು

೨. ಅರೆ ಮಲೆನಾಡು

೩. ಬಯಲು ಪ್ರದೇಶ

ನೈಜವಾಗಿ ಮಲೆನಾಡು ಖಾನಾಪೂರ ತಾಲೂಕಿಗೆ ಸಿಮೀತವಾಗಿದೆ. ಬೈಲೂರು ಮತ್ತು ಜಾಂಬೋಟಿ ಭಾಗಗಳು ಪೂರ್ವಭಾಗಕ್ಕೆ ಪಸರಿಸಿದ್ದು ಪಶ್ಚಿಮ ಘಟ್ಟ ಸಾಲುಗಳೊಂದಿಗೆ ಸೇರಿಕೊಂಡಿವೆ. ಇಲ್ಲಿ ಮಲಪ್ರಭಾ ನದಿಯು ಖಾನಾಪೂರ ತಾಲೂಕಿನ ಕನಕುಂಬಿ ಎಂಬಲ್ಲಿ ಹುಟ್ಟಿ, ಪಶ್ಚಿಮದೆಡೆಗೆ ಹರಿಯುತ್ತದೆ.

ಅರೆ ಮಲೆನಾಡಿನ ಪ್ರದೇಶವು ಜಿಲ್ಲೆಯ ಪಶ್ಚಿಮ ದಿಕ್ಕಿನಲ್ಲಿ ಕಂಡುಬರುತ್ತಿದ್ದು, ಅದು ಬೆಳಗಾವಿಯ ಪಶ್ಚಿಮ ಮತ್ತು ಖಾನಾಪೂರ ತಾಲೂಕಿನ ಪೂರ್ವಭಾಗವನ್ನು ಆವರಿಸಿದೆ.

ಬಯಲು ಪ್ರದೇಶವು ಅಥಣಿ, ರಾಯಭಾಗ, ಗೋಕಾಕ, ರಾಮದುರ್ಗ ಮತ್ತು ಸೌದತ್ತಿ ತಾಲೂಕುಗಳ ವ್ಯಾಪ್ತಿಹೊಂದಿವೆ. ಈ ಭಾಗಗಳು ಕೃಷ್ಣಾ, ಘಟಪ್ರಭಾ ಮತ್ತು ಮಲಪ್ರಭಾ ನದಿಗಳಿಂದ ನೀರಾವರಿ ಹೊಂದಿವೆ. ಈ ಪ್ರದೇಶ ಸಮುದ್ರ ಘಟ್ಟದಿಂದ ೬೦೦ರಿಂದ ೯೦೦ ಮೀಟರದಷ್ಟು ಎತ್ತರದಲ್ಲಿದೆ. ಅದರಂತೆ ಜಿಲ್ಲೆಯಲ್ಲಿ ಗೋಕಾಕ ಜಲಪಾತ, ಗೊಡಚಿನಮಲ್ಕಿ, ನವಿಲುತೀರ್ಥ, ಸೊಗಲ ಮುಂತಾದವುಗಳು ಪ್ರವಾಸಿ ತಾಣಗಳಾಗಿವೆ.

### ೩.೫ ಹವಾಮಾನ:

ಜಿಲ್ಲೆಯ ವಾಯುಗುಣ ಸ್ಥಿತಿ ಆರೋಗ್ಯಕರ ಮತ್ತು ಹಿತರಕವಾಗಿದೆ. ಮಳೆಗಾಲವನ್ನು ಹೊರತು ಪಡಿಸಿ, ಇನ್ನಿತರ ಋತುಗಳಲ್ಲಿ ಒಣ ಹವಾಗುಣದ ಲಕ್ಷಣ ಹೊಂದಿದೆ. ಜೂನ್‌ದಿಂದ ಸಪ್ಟೆಂಬರ್‌ವರೆಗಿನ ಅವಧಿಯಲ್ಲಿ ಜಿಲ್ಲೆಯ ಪಶ್ಚಿಮ ಭಾಗದಲ್ಲಿ, ಅದರಲ್ಲೂ ಬೆಳಗಾವಿ ಪ್ರದೇಶಗಳಲ್ಲಿ ಮಂಜು ಮುಸುಕಿದ ವಾತಾವರಣ ಕಂಡು ಬರುತ್ತದೆ. ಈ ಭಾಗದಲ್ಲಿ ಮಳೆಯು ಸತತವಾಗಿದ್ದು, ಆಗೊಮ್ಮೆ-ಈಗೊಮ್ಮೆ ರಭಸದಿಂದ ಮಳೆ ಸುರಿಯುತ್ತದೆ. ಜಿಲ್ಲೆಯ ಪೂರ್ವಭಾಗವು ಒಣಹವೆಯನ್ನು ಹೊಂದಿದ್ದು ಬೇಸಿಗೆಯ ಬಿಸಿಲಿನ ಅನುಭವ ನೀಡುತ್ತದೆ. ಎಪ್ರಿಲ್-ಮೇ ತಿಂಗಳಲ್ಲಿ ಗರಿಷ್ಠ ತಾಪಮಾನ ೩೫.೭ ಡಿಗ್ರಿ ಸೆಲ್ಸಿಯಸ್ ಇರುತ್ತದೆ. ಅದರಂತೆ ಡಿಸೆಂಬರ್-ಜನೇವರಿ ತಿಂಗಳಲ್ಲಿ ಕನಿಷ್ಠ ತಾಪಮಾನ ೧೯.೫ ಡಿಗ್ರಿ ಸೆಲ್ಸಿಯಸ್ ದಾಖಲಾಗುತ್ತದೆ. ಬೆಳಗಾವಿ ಜಿಲ್ಲೆಯ ಬೇಸಿಗೆಯ ಋತುವು ನೆರೆಹೊರೆಯ ಜಿಲ್ಲೆಗಳಿಗಿಂತ ಸೌಮ್ಯ ರೀತಿಯದ್ದಾಗಿರುತ್ತದೆ.

ಜಿಲ್ಲೆಯಲ್ಲಿ ಸರಾಸರಿ ಮಳೆಯ ಪ್ರಮಾಣ ೮೦೮ ಮಿಲಿಮೀಟರ್ ಇರುತ್ತದೆ. ಖಾನಾಪುರ ತಾಲೂಕು ಗರಿಷ್ಠ ಮಳೆಯನ್ನು (೧೫೬೨ ಮಿ.ಮಿ) ಪಡೆದರೆ, ಸೌದತ್ತಿಯಲ್ಲಿ ೫೩೭ ಮಿ.ಮಿ ರಷ್ಟಾಗುತ್ತದೆ. ಚಿಕ್ಕೋಡಿ ಮತ್ತು ಅಥಣಿಯಲ್ಲಿ ಕ್ರಮವಾಗಿ ಸರಾಸರಿ ಮಳೆಯ ಪ್ರಮಾಣ ೭೭೭ ಮಿಲಿಮೀಟರ್ ಮತ್ತು ೬೧೧ ಮಿಲಿಮೀಟರ್ ಇರುತ್ತದೆ.

**ಬೆಳಗಾವಿ ಜಿಲ್ಲೆಯ ಋತುಗಳನ್ನು ಈ ಕೆಳಗಿನಂತೆ ಐದು ರೀತಿಯಲ್ಲಿ ವಿಂಗಡಿಸುತ್ತಾರೆ.**

೧. ಫೆಬ್ರುವರಿ ಮಧ್ಯಾವಧಿಯಿಂದ ಮೇ ತಿಂಗಳಾಂತ್ಯದವರೆಗೆ ಉಷ್ಣ ವಾತಾವರಣವಿದ್ದು, ಪಶ್ಚಿಮದಿಂದ ಬಿರುಗಾಳಿಯ ಅನುಭವ ಎಪ್ರೀಲ್ ಮಧ್ಯದ ಅವಧಿಯಲ್ಲಿ. ಇನ್ನುಳಿದನ್ನು ಅವಧಿಯಲ್ಲಿ ಗುಡುಗು ಮಿಶ್ರಿತ ಮಳೆಯು ಕಂಡುಬರುತ್ತದೆ.

೨. ಜೂನ್‌ದಿಂದ ಸೆಪ್ಟೆಂಬರ್‌ವರೆಗೆ ನೈಋತ್ಯ ಮಾರುತಗಳಿಂದ ಮಳೆಯು ಸುರಿಯುತ್ತದೆ. ಮುಂಗಾರು ನಂತರದ ಅವಧಿಯಲ್ಲಿ ತಂಪನೆಯ ವಾತಾವರಣ ಸಾಮಾನ್ಯವಾಗಿರುತ್ತದೆ.

೩. ಅಕ್ಟೋಬರ್‌ದಲ್ಲಿ ಈಶಾನ್ಯ ಮಾರುತಗಳ ಆಗಮನದಿಂದ ಮಳೆಯು ಪ್ರಾರಂಭಗೊಂಡು ನವ್ಹೆಂಬರ್‌ದವರೆಗೆ ಮುಂದುವರೆಯುತ್ತದೆ. ಮುಖ್ಯವಾದ ಮಳೆಗಾಲ ಮೇ ದಿಂದ ಅಕ್ಟೋಬರ್ ತಿಂಗಳವರೆಗೆ ಕಂಡುಬರುತ್ತದೆ.

೪. ಡಿಸೆಂಬರ್‌ದಿಂದ ಫೆಬ್ರುವರಿಯವರೆಗೆ ಚಳಿಗಾಲವಿರುತ್ತದೆ.

೫. ಎಪ್ರೀಲ್ ಮತ್ತು ಮೇ ತಿಂಗಳುಗಳಲ್ಲಿ ವಾತಾವರಣ ತೀಕ್ಷ್ಣ ಉಷ್ಣದಿಂದ ಕೂಡಿರುತ್ತದೆ.

**೩.೬ ಅಭಿವೃದ್ಧಿ ವಿಶೇಷತೆಗಳು**

**೩.೬ (ಅ) ಸಾಮಾಜಿಕ ವಿಶೇಷತೆಗಳು :**

ಜಿಲ್ಲೆಯಲ್ಲಿ ಕನ್ನಡ, ಹಿಂದಿ, ಮರಾಠಿ, ಉರ್ದು, ಗುಜರಾತಿ, ಮತ್ತು ಇಂಗ್ಲೀಷದಂತಹ ಮಹತ್ವದ ಭಾಷೆಗಳು ಬಳಕೆಯಲ್ಲಿದ್ದು, ಜಿಲ್ಲೆಯ ಹೆಚ್ಚಿನ ಜನರ ಭಾಷೆ ಕನ್ನಡ. ಮಹಾರಾಷ್ಟ್ರಕ್ಕೆ ಹೊಂದಿಕೊಂಡ ಭಾಗಗಳಲ್ಲಿ ಮರಾಠಿ ಭಾಷೆ ಬಳಕೆಯಲ್ಲಿದೆ.

ಬೆಳಗಾವಿ ಜಿಲ್ಲೆಯು ರಾಜ್ಯದ ಗಡಿ ಜಿಲ್ಲೆಗಳಲ್ಲೊಂದಾಗಿದ್ದು, ವಿವಿಧ ಭಾಷೆಗಳ ಸೌಂದರ್ಯದ ಚಿತ್ರಣ ನೀಡುತ್ತದೆ. ಧಾರವಾಡ, ಬಿಜಾಪೂರ ಮತ್ತು ಬಾಗಲಕೋಟ ಜಿಲ್ಲೆಗಳ ಪ್ರದೇಶಗಳು ಬೆಳಗಾವಿಗೆ ಹೊಂದಿದ್ದು, ಅಲ್ಲಿ ಹೆಚ್ಚಿನ ಜನ ಕನ್ನಡ ಭಾಷೆ ಬಳಸುತ್ತಾರೆ. ಖಾನಾಪುರ, ಚಿಕ್ಕೋಡಿ ಮತ್ತು ಬೆಳಗಾವಿ ತಾಲೂಕುಗಳಲ್ಲಿ ಕನ್ನಡದೊಂದಿಗೆ ಮರಾಠಿ ಭಾಷೆಯನ್ನು ಸಲೀಸಾಗಿ ಬಳಸುತ್ತಾರೆ. ಹೆಚ್ಚಿನ ಸಂಖ್ಯೆಯ ಮುಸ್ಲಿಂರು ಉರ್ದು ಭಾಷೆಯನ್ನು ಬಳಸಿದರೆ, ಗೋವಾ ರಾಜ್ಯದಿಂದ ವಲಸೆ ಬಂದ ಕೆಲವು ಜನರು ಕೊಂಕಣಿ ಭಾಷೆ ಉಪಯೋಗಿಸುವರು.

**೩.೬ (ಬ) ಧಾರ್ಮಿಕ ವಿಶೇಷತೆಗಳು :**

ಜಿಲ್ಲೆಯಲ್ಲಿರುವ ಜನರ ಧಾರ್ಮಿಕತೆ ಕುರಿತಾದ ಮಾಹಿತಿಯನ್ನು ಸಂಗ್ರಹಿಸುವ ಪ್ರಯತ್ನ ಮಾಡಲಾಯಿತು. ಏಕೆಂದರೆ ಬೆಳಗಾವಿ ಜಿಲ್ಲೆಯಲ್ಲಿ ಹಲವಾರು ಧರ್ಮಗಳಿಗೆ ಸೇರಿದ ಜನರೆಲ್ಲ ಒಂದಾಗಿ ಬಾಳುತ್ತಿದ್ದಾರೆ. ೨೦೦೧ನೇ ಜನಗಣತಿಯನ್ನಾಧರಿಸಿ ಜಿಲ್ಲೆಯಲ್ಲಿ ವಾಸಿಸುವ ಜನರ ಧಾರ್ಮಿಕ ಹಿನ್ನೆಲೆಯ ಮಾಹಿತಿಯು ಈ ಕೆಳಗಿನ ಕೋಷ್ಟಕದಲ್ಲಿ ನೀಡಿದೆ.

***ಕೋಷ್ಟಕ – ೩.೨ : ಬೆಳಗಾವಿ ಜಿಲ್ಲೆಯ ಪ್ರಮುಖ ಧರ್ಮಗಳು (೨೦೦೧ನೇ ಜನಗಣತಿಯಾಧಾರಿತ)***

| ಧರ್ಮ | ಒಟ್ಟು ಜನಸಂಖ್ಯೆ | ಶೇಕಡಾ ಪ್ರಮಾಣ |
|---|---|---|
| ಹಿಂದುಗಳು | ೩೫,೬೫,೧೫೩ | ೮೪.೫೯ |
| ಮುಸ್ಲಿಂರು | ೪,೪೦,೮೩೬ | ೧೦.೪೬ |
| ಕ್ರೈಸ್ತರು | ೧೭,೯೨ | ೦.೪೨ |
| ಜೈನರು | ೧,೬೯,೪೬೬ | ೪.೦೨ |
| ಇತರೆ | ೨೧,೩೫೮ | ೦.೫೨ |
| **ಒಟ್ಟು** | **೪೨,೧೪,೫೦೫** | **೧೦೦.೦೦** |

*ಮೂಲ : ಕರ್ನಾಟಕದ ಅಂಕಿಅಂಶಗಳು ೨೦೦೪-೦೫, ಆರ್ಥಿಕ ಮತ್ತು ಸಂಖ್ಯಾವಿಭಾಗದ ನಿರ್ದೇಶನಾಲಯ, ಬೆಂಗಳೂರು.*

ಈ ಕೋಷ್ಠಕದಿಂದ ಕಂಡು ಬರುವ ಅಂಶವೆಂದರೆ, ಗರಿಷ್ಠ ಸಂಖ್ಯೆಯಲ್ಲಿ (ಶೇ. ೮೪.೫೯) ಹಿಂದೂ ಧರ್ಮದ ಜನರು, ಮುಸ್ಲಿಂರು ಶೇ. ೧೦.೪೬ ಮತ್ತು ಶೇ. ೪.೦೨ ಜೈನ ಧರ್ಮಕ್ಕೆ ಸೇರಿದವರಾಗಿದ್ದಾರೆ.

ಪ್ರತಿವರ್ಷ ಜಿಲ್ಲೆಯಾದ್ಯಂತ ಹಲವು ಜಾತ್ರೆಗಳು ಜರುಗುತ್ತವೆ. ಬಹಳಷ್ಟು ಪ್ರಸಂಗಗಳಲ್ಲಿ ತಮ್ಮ ನಂಬುಗೆಯ ದೇವರ ಮೂರ್ತಿಯನ್ನು ಊರಿನಲ್ಲೆಲ್ಲ ಮೆರವಣಿಗೆಯ ಮಾಡುತ್ತಾ, ಜಾತ್ರೆಯ ಸ್ಥಳದಲ್ಲಿ ಜನಸಂದಣಿಯು ಹರುಷದಿಂದ ಜೈಕಾರ ಘೋಷಣೆಗಳನ್ನು ಕೂಗುತ್ತಾರೆ. ಕೆಲವು ನಿರ್ದಿಷ್ಟ ದಿನಗಳಂದು 'ದನಗಳ ಜಾತ್ರೆ'ಯು ಜರುಗುತ್ತದೆ. ಇದು ವಾಣಿಜ್ಯ ವ್ಯವಹಾರ ವೃದ್ಧಿಯ ಕೇಂದ್ರಗಳು ಒಂದೆಡೆಯಾದರೆ, ಹರುಷದ ಕ್ಷಣಗಳಾಗಿ ಮತ್ತೊಂದೆಡೆ ಮಹತ್ವ ಪಡೆಯುತ್ತವೆ. ಹತ್ತಾರು ಸಂದರ್ಭಗಳಲ್ಲಿ ಈ ಕೆಳಗಿನ ಜಾತ್ರೆ ಹಬ್ಬ ಹರಿದಿನಗಳ ಆಚರಣೆಯು ಬೆಳಗಾವಿ ಜಿಲ್ಲೆಯಾದ್ಯಂತ ಕಂಡು ಬರುತ್ತದೆ.

- ಯುಗಾದಿ ಹಬ್ಬ, ಚೈತ್ರಮಾಸದಲ್ಲಿ ಹೊಸ ವರುಷದಂತೆಯೇ ಆಚರಣೆ.
- ಚೈತ್ರದ ಹುಣ್ಣಿಮೆಯ ದಿನಗಳಂದು 'ರಾಮನವಮಿ' (ರಾಮನ ಹುಟ್ಟುಹಬ್ಬ) ಮತ್ತು ಹನುಮ ಜಯಂತಿಗಳ ಆಚರಣೆ.
- ವೈಶಾಖ ಶುದ್ಧ ಮೂರನೆಯ ದಿನದಂದು ಬಸವ ಜಯಂತಿ, ಇನ್ನೂ ಕೆಲವು ಬ್ರಾಹ್ಮಣರು 'ನರಸಿಂಹ ಜಯಂತಿ'ಯನ್ನು ಆಚರಿಸುತ್ತಾರೆ.
- ಶಿವಾರಾಧಕರಿಗೆ 'ಶಿವರಾತ್ರಿ'ಯೊಂದು ಮಹತ್ವದ ಹಬ್ಬ.
- ಗ್ರಾಮೀಣ ಭಾಗದಲ್ಲಿ ಬಹುತೇಕ ಜನರು ಶ್ರಾವಣ ಮಾಸದ ಐದನೆಯ ದಿನ ನಾಗರ ಪಂಚಮಿಯನ್ನು ಆಚರಿಸುತ್ತಾರೆ.
- ಬೆಳಗಾವಿ ಜಿಲ್ಲೆಯ ಭವ್ಯ ಹಬ್ಬದಾಚರಣೆಗಳಲ್ಲಿ 'ಗಣೇಶ ಚವತಿ'ಯೂ ಒಂದು.
- ಇವುಗಳ ಜೊತೆಗೆ, ಗೋಕುಲಾಷ್ಠಮಿ, ನವರಾತ್ರಿ, ದೀಪಾವಳಿ, ಮಕರ ಸಂಕ್ರಾಂತಿ, ಹೋಳಿ ಮುಂತಾದವುಗಳನ್ನು ಆಚರಿಸುತ್ತಾರೆ.

**೩.೬ (ಕ) ಆರ್ಥಿಕ ವಿಶೇಷತೆಗಳು :**

ರಾಷ್ಟ್ರದ ಮತ್ತು ಪ್ರದೇಶವೊಂದರ ಆರ್ಥಿಕ ಅಭಿವೃದ್ಧಿಯು ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿದೆ. ಈ ದೃಷ್ಠಿಕೋನದಿಂದ, ಬೆಳಗಾವಿ ಜಿಲ್ಲೆಯಲ್ಲಿ ಖನಿಜ ಮತ್ತು ಅರಣ್ಯ ಪ್ರದೇಶ ಕಡಿಮೆಯಿದೆಯೆಂದು ಹೇಳಬಹುದು. ಆದರೆ ಮಳೆ, ಬಾವಿ, ಕೆರೆ, ನದಿಗಳ ನೀರಾವರಿಯಿಂದ ಜಿಲ್ಲೆಯ ಕೃಷಿಯು ಮುಂದುವರೆದದ್ದಾಗಿದೆ. ಘಟಪ್ರಭಾ ಮತ್ತು ಮಲಪ್ರಭಾ ನದಿಗಳಿಗೆ ಕಟ್ಟಿದ ಬೃಹತ್ ಆಣೆಕಟ್ಟುಗಳಿಂದ ನೀರಾವರಿ ಅನುಕೂಲತೆಯಿಂದ ಜಿಲ್ಲೆಯ ೨/೩ ರಷ್ಟು ಪ್ರದೇಶ ನೀರಾವರಿಗೊಂಡಿದೆ. ಆದ್ದರಿಂದ ಕೃಷಿಯ ಚಟುವಟಿಕೆ ಮತ್ತಷ್ಟು ಬಲವಾಗಿ ವೃದ್ಧಿಯಾಗಿದೆ. ಹತ್ತಿ ಬೆಳೆಯುವ ಕ್ಷೇತ್ರವನ್ನು ಬೆಳಗಾವಿ ಜಿಲ್ಲೆಯು ಹೊಂದಿದ್ದು, ಬಟ್ಟೆ ಉದ್ದಿಮೆಗಳಿಗೆ ದಾರಿಮಾಡಿದೆ. ಕೃಷಿಯಾಧಾರಿತ ಉದ್ದಿಮೆ ಹೊರಹೊಮ್ಮಿವೆ. ಅಂದಾಜು ಶೇ. ೧೪.೩೨ ರಷ್ಟು ಪ್ರದೇಶ ಅರಣ್ಯದಿಂದ ಆವರಿಸಿದೆ. ಖಾನಾಪುರ ಮತ್ತು ಬೆಳಗಾವಿ ತಾಲೂಕುಗಳಲ್ಲಿ ದಟ್ಟವಾದ ಅರಣ್ಯಗಳಿದ್ದು, ಸಾಗವಾಣಿ–ಮತ್ತಿ, ಹೊನ್ನೆ, ಮುಂತಾದ ಮರಗಳು ಬೆಳೆಯುತ್ತವೆ.

ಜಿಲ್ಲೆಯಲ್ಲಿ ಖನಿಜ ಸಂಪನ್ಮೂಲಗಳಾದ ಬಾಕ್ಸೈಟ್, ಕಬ್ಬಿಣದ ಅದಿರು, ಮೆಂಗನೀಜ, ಸುಣ್ಣದ ಕಲ್ಲಿನ ಸಂಪನ್ಮೂಲ, ಕಾಪರ್, ಕಟ್ಟಡದ ಕಲ್ಲು, ಉಸುಕು ದೊರೆಯುತ್ತಿದೆ.

ಜಿಲ್ಲೆಯು ಪ್ರಮುಖವಾಗಿ ಕೃಷಿ ಚಟುವಟಿಕೆಯನ್ನು ಹೊಂದಿದೆ. ಅಂದಾಜು ಶೇ. ೮೪ ರಷ್ಟು ಬಿತ್ತನೆಗೆ ಒಳಪಡುತ್ತದೆ. ಅದರಲ್ಲಿ ಶೇ. ೪೦ ರಷ್ಟು ನೀರಾವರಿ ಹೊಂದಿದೆ. ನೀರಾವರಿಯ ಮುಖ್ಯ ಮೂಲಗಳೆಂದರೆ.

| | |
|---|---|
| ೧. ಕಾಲುವೆ ಮುಖಾಂತರ | (ಶೇ, ೨೯.೭೯) |
| ೨. ಕೊಳವೆ ಬಾವಿ | (ಶೇ, ೧೬.೯೦) |
| ೩. ಬಾವಿಗಳು | (ಶೇ, ೨೭.೫೦) |
| ೪. ಕೆರೆಗಳು | (ಶೇ, ೧.೨೪) |
| ೫. ಯಾತ ನೀರಾವರಿ | (ಶೇ, ೧೦.೦೬) |
| ೬. ಇತರ ಮೂಲಗಳು | (ಶೇ, ೧೪.೫೦) |

**೩.೬ (ಡ) ಕೃಷಿ ವಿಶೇಷತೆಗಳು :**

ಜಿಲ್ಲೆಯಲ್ಲಿ ಬಿತ್ತನೆಯ ಪ್ರಕಾರದ ಬಗ್ಗೆ ಅಧ್ಯಯನ ಮಾಡಿದಾಗ ಕೃಷಿ ಕ್ಷೇತ್ರದಲ್ಲಿ ಆಹಾರದ ಬೆಳೆಗಳಾದ ಜೋಳ, ಗೋವಿನ ಜೋಳ, ಭತ್ತ, ಗೋಧಿ, ರಾಗಿಯನ್ನು ಬೆಳೆಯುತ್ತಾರೆ. ಮುಖ್ಯವಾಗಿ

ಎಣ್ಣೆ ಬೀಜ ಬೆಳೆಗಳಾದ ಸೂರ್ಯಪಾನ ಮತ್ತು ಶೇಂಗಾವನ್ನು ಮತ್ತು ತೋಟಗಾರಿಕೆಯಲ್ಲಿ ದ್ರಾಕ್ಷಿ, ಪೇರು, ದಾಳಿಂಬೆ, ಸಪೋಟ, ಲಿಂಬೆಯನ್ನು ಬೆಳೆಯುತ್ತಾರೆ. ಮತ್ತು ಕಬ್ಬು-ಹತ್ತಿಯನ್ನು ವಾಣಿಜ್ಯ ಬೆಳೆಯಾಗಿ ಅಳವಡಿಸಿಕೊಂಡಿದ್ದಾರೆ.

ಕೃಷಿ ರಂಗದೊಂದಿಗೆ, ಹೈನು, ಕೋಳಿಸಾಕಾಣಿಕೆ, ಮೀನುಗಾರಿಕೆ, ಕುರಿ / ಆಡು ಸಾಕಾಣಿಕೆ, ರೇಶ್ಮೆ, ತೋಟಗಾರಿಕೆಯ ಚಟುವಟಿಕೆಗಳು ಕಂಡು ಬರುತ್ತವೆ.

**೩.೬ (ಇ) ಔದ್ಯೋಗಿಕ ವಿಶೇಷತೆಗಳು:**

೨೦೦೪-೦೫ನೇ ವರ್ಷದ ಅಂಕಿ ಅಂಶಗಳ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೫೮೮೦ ಕೈಗಾರಿಕಾ ಘಟಕಗಳಿದ್ದು, ಅದರಲ್ಲಿ ೧೭ ಸಕ್ಕರೆ ಕಾರ್ಖಾನೆಗಳು ಕಾರ್ಯಗೈಯ್ಯುತ್ತಿವೆ. ಒಟ್ಟು ೧೭ ಸಕ್ಕರೆ ಕಾರ್ಖಾನೆಗಳಲ್ಲಿ, ೧೧ ಸಹಕಾರ ಕ್ಷೇತ್ರದಲ್ಲಿ ಮತ್ತು ಇನ್ನುಳಿದವು ಖಾಸಗಿ ಒಡೆತನದಲ್ಲಿವೆ. ಜಿಲ್ಲೆಯಲ್ಲಿನ ಬೃಹತ್ ಉದ್ದಿಮೆಗಳಲ್ಲಿ ಇಂಡಾಲ್ ಅಲ್ಯುಮಿನಿಯಂ ಫ್ಯಾಕ್ಟರಿ, ಗೋಗಟೆ ಟೆಕ್ಸ್‌ಟೈಲ್ಸ್, ಬೆಮ್‌ಕೋ ಆಯಿಲ್ ಇಂಡಸ್ಟ್ರೀಜ್, ವ್ಯಾಟ್ಸನ್ ಸ್ಟ್ರಕ್ಚರಲ್ ಇಂಡಿಯಾ ಕಂ., ಬೆಳಗಾವಿ, ಕೋ-ಆಪರೇಟಿವ್ಹ್ ಕಾಟನ್ ಮಿಲ್ ಇತ್ಯಾದಿ ಹೆಸರುವಾಸಿಯಾಗಿವೆ. ಮಧ್ಯಮ ಮತ್ತು ಚಿಕ್ಕ ಯಂತ್ರೋಪಕರಣಗಳ ಉದ್ದಿಮೆಯ ಬಿಡಿ ಭಾಗಗಳನ್ನು ಪೂರೈಸುವಲ್ಲಿ ನಿರತರಾಗಿದ್ದು, ಅವುಗಳು ದೊಡ್ಡ ಉದ್ದಿಮೆಗಳಾದ ಬಜಾಜ, ಫ್ಯಾಕ್ಟ್, ಮೋಬಿಲ್, ಬೆಲ್, ಕಿರ್ಲೋಸ್ಕರ, ಎನ್‌ಜಿಇಎಫ್ ಮುಂತಾದವುಗಳಿಗೆ ಪೂರೈಕೆಗೊಳ್ಳುತ್ತವೆ. ಬೆಳಗಾವಿ ನಗರದ ಹೊನಗಾ, ಉದ್ಯಮಭಾಗ, ಅಟೋನಗರ ಪ್ರದೇಶಗಳು ಔದ್ಯಮಿಕ ಕೇಂದ್ರಗಳಾಗಿವೆ. ಕೈಮಗ್ಗ ಉದ್ದಿಮೆಯು ಜಿಲ್ಲೆಯ ಪ್ರಮುಖ ಕ್ಷೇತ್ರವಾಗಿದ್ದು, ಜಿಲ್ಲೆಯಾದ್ಯಂತ ಅಂದಾಜು ೮೦೦ ಘಟಕಗಳು ಚಾಲನೆಯಲ್ಲಿವೆ. ಇವುಗಳಿಂದ ೭೫,೦೦೦ ಕ್ಕಿಂತ ಅಧಿಕದಷ್ಟು ಉದ್ಯೋಗಿಗಳಿಗೆ ಅವಕಾಶ ದೊರೆತಿದೆ.

**೩.೬ (ಫ) ಆರೋಗ್ಯ ಸೇವೆಗಳು :**

ಆರೋಗ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಬೆಳಗಾವಿ ಜಿಲ್ಲೆಯು ಅತ್ಯಾಧುನಿಕ ಸೌಕರ್ಯಗಳನ್ನು ಹೊಂದಿದಂತಹ ಪ್ರಸಿದ್ಧ ದೊಡ್ಡ ಪ್ರಮಾಣದ ಆಸ್ಪತ್ರೆಗಳನ್ನು ಹೊಂದಿದೆ. ಜಿಲ್ಲಾ ಪಂಚಾಯ್ತದಲ್ಲಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮೂಲಕವೇ ಇಡೀ ಜಿಲ್ಲೆಯಲ್ಲಿನ ಎಲ್ಲ ಗ್ರಾಮಗಳಿಗೆ ಆರೋಗ್ಯ ರಕ್ಷಣೆ ಮತ್ತು ಆರೋಗ್ಯ ಕಾರ್ಯಕ್ರಮಗಳು ತಲುಪುತ್ತಿವೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಿಂದ ಸೇವೆಯನ್ನು ಸಾರ್ವಜನಿಕರಿಗೆ ಲಭ್ಯಗೊಳಿಸಲಾಗುತ್ತದೆ. ಪ್ರತಿ ೫೦೦೦ ಜನಸಂಖ್ಯೆಯಿರುವ ಸ್ಥಳದಲ್ಲಿ ಒಂದು ಉಪಕೇಂದ್ರವಿದ್ದು, ಅದು ರೋಗ ತಡೆಗಟ್ಟುವ ಮತ್ತು ಚಿಕಿತ್ಸೆ ನೀಡುವ ಸೇವೆಗಳನ್ನು ಮಾತ್ರವಲ್ಲದೆ, ಜನತೆಯಲ್ಲಿ ಆರೋಗ್ಯ ಕುರಿತಾದ ಜಾಗೃತಿಯನ್ನು ವೃದ್ಧಿಸುವಲ್ಲಿ

ಅತ್ಯಂತ ಮಹತ್ವದ ಪಾತ್ರ ನಿರ್ವಹಿಸುತ್ತವೆ. ಈ ಉಪಕೇಂದ್ರ ಮಟ್ಟದಲ್ಲಿ ಒಟ್ಟು ೯೭೫ ಪುರುಷರು ಮತ್ತು ಮಹಿಳಾ ಕಿರಿಯ ಆರೋಗ್ಯ ಸಹಾಯಕರು ಕಾರ್ಯನಿರತರಾಗಿದ್ದಾರೆ.

ಜಿಲ್ಲೆಯಲ್ಲಿ ಒಟ್ಟು ೧೩೦ ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ, ಮತ್ತು ನಗರ ಕುಟುಂಬ ಕಲ್ಯಾಣ ಆಸ್ಪತ್ರೆಗಳಿದ್ದು, ವೈದ್ಯಾಧಿಕಾರಿ ಮತ್ತು ಆರೋಗ್ಯ ಸಹಾಯಕರಾಗಿ ಸ್ತ್ರೀ ಮತ್ತು ಪುರುಷರು ಸೇವೆ ನೀಡುತ್ತಾರೆ. ಸರಾಸರಿ ಪ್ರತಿ ೨೫,೦೦೦ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪನೆಯಾಗಿರುತ್ತದೆ. ಆರೋಗ್ಯ ಕಾಳಜಿ, ರೋಗ ತಡೆಗಟ್ಟುವ, ರೋಗ ನಿರೋಧಕ, ಹೆರಿಗೆ, ಒಳರೋಗಿಗಳ ಸೌಕರ್ಯಗಳು ಲಭ್ಯವಿರುತ್ತವೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ೨೨೭ ವೈದ್ಯಾಧಿಕಾರಿಗಳು ಸೇವೆಯಲ್ಲಿದ್ದಾರೆ. ಆರೋಗ್ಯ ಸಂಸ್ಥೆಗಳು, ಸಾರ್ವಜನಿಕ ಆಸ್ಪತ್ರೆಗಳು ಮತ್ತು ಸಮುದಾಯ ಆರೋಗ್ಯ ಕೇಂದ್ರಗಳು ಕಾರ್ಯಗೈಯ್ಯುತ್ತಿವೆ.

ಈ ಜಿಲ್ಲೆಯಲ್ಲಿ ಎರಡು ಸಂಚಾರಿ ಕಣ್ಣಿನ ಆಸ್ಪತ್ರೆ ಘಟಕಗಳಿವೆ. ಜಿಲ್ಲೆಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮೂಲಕ ಕೇಂದ್ರ ಮತ್ತು ರಾಜ್ಯ ಸರ್ಕಾರದ ಎಲ್ಲ ಯೋಜನೆಗಳ ಪ್ರಯೋಜನ ಜನತೆಗೆ ತಲುಪಿಸಲಾಗುತ್ತದೆ. ದೇಶದಲ್ಲಿಯ ನಾಲ್ಕು ಪ್ರಮುಖ ಲಸಿಕೆ ಸಂಸ್ಥೆಗಳಲ್ಲಿನ ಒಂದು ಲಸಿಕೆಯ ಕೇಂದ್ರ ಬೆಳಗಾವಿಯಲ್ಲಿರುವದು ಪ್ರಖ್ಯಾತಿಯನ್ನು ಗಳಿಸಿದೆ. ಇದರೊಂದಿಗೆ ಈ ದಶಕದಲ್ಲಿ ಸ್ಥಾಪನೆಗೊಂಡಿರುವ ಕೆಎಲ್ಇ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರವು ಜಿಲ್ಲೆಗೆ ಉತ್ತಮ ಸ್ಥಾನ ತಂದಿದೆ. ಈ ಆಸ್ಪತ್ರೆಯು ಎಲ್ಲ ಆಧುನಿಕ ಸೌಕರ್ಯಗಳನ್ನು ಒಳಗೊಂಡಿದೆ. ಅದರಂತೆಯೇ ಒಟ್ಟು ೫೦ ನರ್ಸಿಂಗ್ ಹೋಮ್ ಮತ್ತು ೧೨೫ ಖಾಸಗಿ ಆಸ್ಪತ್ರೆಗಳು ಬೆಳಗಾವಿ ನಗರದಲ್ಲಿವೆ.

**೩.೬ (ಗ) ಶಿಕ್ಷಣ**

ಶಿಕ್ಷಣಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯು ಅತ್ಯುನ್ನತ ಸೌಲಭ್ಯಗಳನ್ನು ಹೊಂದಿರುತ್ತದೆ. ಪ್ರಾಥಮಿಕ ಶಾಲೆಗಳಿಂದ ಹಿಡಿದು ಸ್ನಾತಕೋತ್ತರ ಪದವಿಗಳನ್ನು ನೀಡುವ ಶಿಕ್ಷಣ ಸಂಸ್ಥೆಗಳನ್ನು ಬೆಳಗಾವಿ ಜಿಲ್ಲೆಯು ಹೊಂದಿದೆ. ಬೆಳಗಾವಿ ಜಿಲ್ಲೆಯಲ್ಲಿ ೩೧.೦೩.೨೦೧೦ ರಲ್ಲಿದ್ದಂತೆ ಒಟ್ಟು ೩,೯೩೬ ಪ್ರಾಥಮಿಕ ಶಾಲೆಗಳಿದ್ದು, ೭೮೬ ಪ್ರೌಢ ಶಾಲೆಗಳು ಹಾಗೂ ೨೪೯ ಪದವಿ ಪೂರ್ವ ಮಹಾವಿದ್ಯಾಲಯಗಳನ್ನು ಹೊಂದಿದೆ. ೨ ವೈದ್ಯಕೀಯ ಮಹಾವಿದ್ಯಾಲಯಗಳು, ೧೦ ಪಾಲಿಟೆಕ್ನಿಕ

ಮಹಾವಿದ್ಯಾಲಯಗಳು, ೭ ಇಂಜಿನಿಯರಿಂಗ್ ಮತ್ತು ೨ ದಂತ ವೈದ್ಯಕೀಯ ಮಹಾವಿದ್ಯಾಲಯಗಳು ಬೆಳಗಾವಿ ಜಿಲ್ಲೆಯು ಹೊಂದಿದೆ. ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಎರಡು ಕೂಡ ಪಾಲುದಾರಿಕೆಯನ್ನು ಹೊಂದಿದ್ದು ಗುಣಮಟ್ಟದ ಶಿಕ್ಷಣವನ್ನು ವಿದ್ಯಾರ್ಥಿ ಸಮುದಾಯಕ್ಕೆ ನೀಡುವಲ್ಲಿ ತನ್ನದೇ ಆದ ಯೋಜನೆಗಳನ್ನು ಹಾಕಿಕೊಂಡಿವೆ.

**೩.೬ (ಹ) ಸಾರಿಗೆ ಮತ್ತು ಸಂಪರ್ಕ :**

ಯಾವುದೊಂದು ಪ್ರದೇಶದ ಸಾಮಾಜಿಕ–ಆರ್ಥಿಕ ಸ್ಥಿತಿಯು ಅಲ್ಲಿರುವ ಸಾರಿಗೆ – ಸಂಪರ್ಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಜಿಲ್ಲೆಯು ಇವುಗಳ ಉತ್ತಮ ವ್ಯವಸ್ಥೆಯನ್ನು ಹೊಂದಿದ್ದು ಸುದೈವ! ಅಂದಾಜು ೨೦೦ ಕಿ.ಮೀ ಉದ್ದದ ಪುಣೆ – ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯು ಜಿಲ್ಲೆಯ ಮೂಲಕ ಸಾಗುತ್ತದೆ. ೨೨೦ ಕಿ.ಮೀ ಉದ್ದದ ೨೫ ರೈಲ್ವೆ ನಿಲ್ದಾಣಗಳು (ಬ್ರಾಡ್‌ಗೇಜ್) ಇವೆ. ಮುಂಬೈ, ಗೋವಾ ಮತ್ತು ಬೆಂಗಳೂರಿಗೆ ವಾಯು ಸೇವೆ ಕಲ್ಪಿಸುವ ಬೆಳಗಾವಿಯ ಸಾಂಬ್ರಾ ವಿಮಾಣ ನಿಲ್ದಾಣವು ಮಹತ್ವದ ಸೌಕರ್ಯವಾಗಿದೆ.

**೩.೬ (ಹ) ಕಲೆ, ಸಾಹಿತ್ಯ ಮತ್ತು ಸಂಸ್ಕೃತಿ**

ಕಲೆ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಬೆಳಗಾವಿ ಜಿಲ್ಲೆಯು ಅಪ್ರತಿಮ ಕೊಡುಗೆಯನ್ನು ನೀಡಿದೆ. ಬೆಳಗಾವಿ ಜಿಲ್ಲೆಯಲ್ಲಿ ಸಾಕಷ್ಟು ಸರ್ಕಾರೇತರ ಸಂಸ್ಥೆಗಳು ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯ ಔನ್ನತ್ಯಕ್ಕಾಗಿ ಕೆಲಸ ಮಾಡುತ್ತಿವೆ. ಜಿಲ್ಲೆಯಲ್ಲಿ ಶಾರದಾ ಸಂಗೀತಾ ಕಲಾ ಸಂಸ್ಥೆ, ಗಾನಯೋಗಿ ಪಂಚಾಕ್ಷರಿ ಗಾನ ಕಲಾ ಪರಿಷತ್, ಗುಂಪು ಕಲಾವಿದರ ಬಳಗ, ಚಿಂತನ ಕಮ್ಮಟ, ರಂಗದರ್ಶನ ಗ್ರಾಮೀಣ ವಿಕಾಸ ಸಂಸ್ಥೆ, ಡಾ. ಅಂಬೇಡ್ಕರ್ ಕಲಾ ಪೋಷಕ ಸಂಸ್ಥೆ ಮುಂತಾದವುಗಳು ಕಲೆ ಮತ್ತು ಸಂಸ್ಕೃತಿಗಾಗಿ ಕೆಲಸ ಮಾಡುತ್ತಿವೆ. ಅದೇ ರೀತಿ ಗೋಕಾಕದಲ್ಲಿ ಪ್ರತಿವರ್ಷ ಗ್ರಾಮೀಣ ಪ್ರತಿಭೆಗಳಿಗೆ ಪ್ರೋತ್ಸಾಹಕವಾಗಿ ನಡೆಯುವ ಸತೀಶ ಶುಗರ್ಸ ಕಾರ್ಯಕ್ರಮವು ಮನರಂಜನೀಯವಾಗಿರುತ್ತದೆ.

**೩.೭ ಸರ್ಕಾರೇತರ ಸಂಸ್ಥೆಗಳು :**

ಜಿಲ್ಲೆಯಲ್ಲಿ ಸಾಕಷ್ಟು ಸಂಖ್ಯೆಯ ಸರ್ಕಾರೇತರ ಸಂಸ್ಥೆಗಳು ಅಸ್ತಿತ್ವದಲ್ಲಿರುವುದೇ ಸಮಾಜದಲ್ಲಿನ ನಿರ್ಗತಿಕ ಜನತೆಯ ಬಗ್ಗೆ ತೋರುತ್ತಿರುವ ಕಾಳಜಿಗೆ ನಿದರ್ಶನವಾಗಿದೆ. ಕೆಳಗಿನ ಕೋಷ್ಟಕವನ್ನು ಗಮನಿಸಿದಾಗ ಬೆಳಗಾವಿ ಜಿಲ್ಲೆಯಲ್ಲಿ ನೊಂದಾಯಿತ ಸರ್ಕಾರೇತರ ಸಂಸ್ಥೆಗಳ ವಿವರ ತಿಳಿಯುತ್ತದೆ.

***ಕೋಷ್ಟಕ – ೩.೩ : ಬೆಳಗಾವಿ ಜಿಲ್ಲೆಯಲ್ಲಿ ನೊಂದಾಯಿತ ಸರ್ಕಾರೇತರ ಸಂಸ್ಥೆಗಳ ವಿವರ***

| ವರ್ಷ | ನೊಂದಾಯಿತ ಸರ್ಕಾರೇತರ ಸಂಸ್ಥೆಗಳು |
| --- | --- |
| ೨೦೦೧–೦೨ | ೪೫೦ |
| ೨೦೦೨–೦೩ | ೫೨೫ |
| ೨೦೦೩–೦೪ | ೨೭೫ |
| ೨೦೦೪–೦೫ | ೮೨೫ |
| ೨೦೦೫–೦೬ | ೯೨೧ |
| ೨೦೦೬–೦೭ | ೧೧೨೫ |
| ೨೦೦೭–೦೮ | ೧೩೪೨ |
| ೨೦೦೮–೦೯ | ೧೧೭೪ |
| ೨೦೦೯–೧೦ | ೧೪೮೫ |
| ೨೦೧೦–೧೧ | ೧೪೦೫ |
| ೨೦೧೧–೧೨ ಅಕ್ಟೋಬರ ೩೦ ರ ವರೆಗೆ | ೭೨೧ |




*ಮೂಲ :– ಸಹಕಾರಿ ಸಂಘಗಳ ನೋಂದಣಿ ಅಧಿಕಾರಿಗಳು ಬೆಳಗಾವಿ.*

*ಕೊಷ್ಟಕ – ೩.೪ : ಬೆಳಗಾವಿ ಜಿಲ್ಲೆಯಲ್ಲಿ ನವೀಕರಣಗೊಳ್ಳುವ ನೊಂದಾಯಿತ ಸರ್ಕಾರೇತರ ಸಂಸ್ಥೆಗಳ ವಿವರ*

| ವರ್ಷ | ನವೀಕರಣಗೊಳ್ಳುತ್ತಿರುವ ಸಂಸ್ಥೆಗಳು |
|---|---|
| ೨೦೦೮–೦೯ | ೪೨೮ |
| ೨೦೦೯–೧೦ | ೭೮೭ |
| ೨೦೧೦–೧೧ | ೧೦೧೦ |
| ೨೦೧೧–೧೨ ಅಕ್ಟೋಬರ ೩೦ ರ ವರೆಗೆ | ೫೨೪ |




*ಮೂಲ :- ಸಹಕಾರಿ ಸಂಘಗಳ ನೋಂದಣಿ ಅಧಿಕಾರಿಗಳು, ಬೆಳಗಾವಿ.*

ಕೆಲವು ಸರ್ಕಾರೇತರ ಸಂಸ್ಥೆಗಳು ಸಾಮಾಜಿಕ ಸೇವೆಯ ಕ್ಷೇತ್ರದಲ್ಲಿ ಮತ್ತು ಆರೋಗ್ಯ ಕ್ಷೇತ್ರಗಳಲ್ಲಿ ಅತ್ಯಂತ ಯಶಸ್ವಿಯಾಗಿ ಕಾರ್ಯಗೈಯ್ಯುತ್ತಿವೆ. ಬೆಳಗಾವಿ ಜಿಲ್ಲೆಯಾದ್ಯಂತ ಕಾರ್ಯನಿರತರಾಗಿರುವ ಪ್ರಮುಖ ಸರ್ಕಾರೇತರ ಸಂಸ್ಥೆಗಳಲ್ಲಿ ಕೆಲವನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು.

**ಅ) 'ಆಶ್ರಯ'** :

ಈ ಸರ್ಕಾರೇತರ ಸಂಸ್ಥೆಯು ಬೆಳಗಾವಿಯಲ್ಲಿ ೧೯೯೨ರಲ್ಲಿ ಸ್ಥಾಪನೆಗೊಂಡು, ಮಹಿಳಾ ಸಬಲೀಕರಣಕ್ಕಾಗಿ ಶ್ರಮಿಸುತ್ತದೆ. ತನ್ಮೂಲಕ ಅದು ಮಹಿಳೆಯರಿಗೆ ಉದ್ಯೋಗ, ವಿವಿಧ ಇಲಾಖೆಗಳ ತರಬೇತಿ ಕಾರ್ಯಕ್ರಮ ಮತ್ತು ಮಹಿಳೆಯರಲ್ಲಿ ಕೌಶಲ್ಯ ವೃದ್ಧಿಯ ಕಾರ್ಯಗಳಲ್ಲಿ ತೊಡಗಿದೆ.

**ಬ) ಬೆಳಗಾವಿ ಡಿಯೋಸೇಸನ್ ಸೋಸಿಯಲ್ ಸರ್ವಿಸ್ ಸೋಸೈಟಿ (ಬಿಡಿಎಸ್‌ಎಸ್‌ಎಸ್) :**

ಇದು ೧೯೬೩ರಲ್ಲಿ ಸ್ಥಾಪನೆಗೊಂಡು, ಇದೀಗ ೬ ಜಿಲ್ಲೆಗಳಲ್ಲಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿದೆ. ಇದರ ಮುಖ್ಯಗುರಿ ಹಾಗೂ ಚಟುವಟಿಕೆಗಳೆಂದರೆ ಕುಟುಂಬ ಮತ್ತು ಸಮಾಜದ ಅಭಿವೃದ್ಧಿಗಾಗಿ ಮಹಿಳೆಯರಿಗೆ ಪೂರ್ಣಪ್ರಮಾಣದ ಸಹಭಾಗಿತ್ವ ದೊರಕಿಸುವದು, ಮತ್ತು ಸಮಾಜದಲ್ಲಿ ಸ್ತ್ರೀ – ಪುರುಷರಲ್ಲಿ ಸಮಾನತೆ ಸ್ಥಾಪಿಸುವದಕ್ಕೆ ಮತ್ತು ಮಾನವನ ಗೌರವದ ಮೂಲಭೂತ ಪ್ರೇಮ, ನ್ಯಾಯ, ಸಮಾನತೆ, ಸ್ವಾತಂತ್ರ್ಯ ತತ್ವಾಧಾರಿತ ಸಮಾಜದ ಸ್ಥಾಪನೆಗೊಳಿಸುವದು.

**ಕ) ಬರ್ಡ್ಸ್ :**

ಬೆಳಗಾವಿ ಇಂಟಿಗ್ರೇಟೆಡ್ ರೂರಲ್ ಡೆವಲೆಪ್‌ಮೆಂಟ್ ಸಂಸ್ಥೆ (ಬೆಳಗಾವಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಸಂಸ್ಥೆ) :

ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ನಾಗನೂರು ಗ್ರಾಮದಲ್ಲಿ ಶ್ರೀ ಆರ್.ಎಂ.ಪಾಟೀಲರ ಮುಖಂಡತ್ವದಲ್ಲಿ ೧೯೮೦ರಲ್ಲಿಯೇ ಸ್ಥಾಪನೆಗೊಂಡ ಸರ್ಕಾರೇತರ ಸಂಸ್ಥೆ ಇದಾಗಿದೆ. ಲಾಭರಹಿತ ಉದ್ದೇಶದಿಂದ ಸಮಾಜದಲ್ಲಿನ ಎಲ್ಲ ಭಾಗಗಳ ಗ್ರಾಮೀಣ ಜನರ ಸಮಗ್ರ ಅಭಿವೃದ್ಧಿಯೇ 'ಬರ್ಡ್ಸ್'ನ ಮುಖ್ಯಗುರಿಯಾಗಿದೆ. ಪ್ರಾರಂಭದಲ್ಲಿ ಇದು ಹಾಲು ಉತ್ಪಾದಕರ ಸಹಕಾರಿ ಸಂಘವೆಂದು ಹೆಸರಿಸಲ್ಪಟ್ಟಿತ್ತು. ಇದೀಗ ಅದು ಖ್ಯಾತ ಸಾಂಸ್ಥಿಕ ಮತ್ತು ಸಾಂಸ್ಥಿಕೇತರ ಸಂಸ್ಥೆಗಳಾದ ಕಿವುಡು ಮಕ್ಕಳ ವಿಶೇಷ ವಸತಿ ಶಾಲೆ, ಕೃಷಿ ವಿಜ್ಞಾನ ಕೇಂದ್ರ, ಔಷಧಿ ಸಸ್ಯಗಳ ರಕ್ಷಣೆ, ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಸಮಗ್ರ ಶಿಕ್ಷಣ ಮುಂತಾದವುಗಳು ರೂಪಿಸುವ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ತೊಡಗಿಕೊಂಡಿದೆ. ಅದರಂತೆ, ಸಾಂಸ್ಥಿಕೇತರ ರಂಗದಲ್ಲಿ ವಿವಿಧ ನಿರ್ದಿಷ್ಟ ಗುಂಪುಗಳಿಗೆ ಅನೌಪಚಾರಿಕ ಶಿಕ್ಷಣ, ಕೌಶಲ್ಯ ಅಭಿವೃದ್ಧಿ ತರಬೇತಿಗಳು, ಸ್ವಸಹಾಯ ಗುಂಪುಗಳ ಸ್ಥಾಪನೆ ಹಾಗೂ ತರಬೇತಿ, ಹೊಲಿಗೆ ಮತ್ತು ಬಿದಿರು ಸಂಬಂಧಿತ ಕೆಲಸಗಳ ತರಬೇತಿ, ಸ್ವ-ನಿರ್ವಹಣೆಗಾಗಿ ಗ್ರಾಮೀಣ ಮಹಿಳೆಯರಿಗೆ ಸಬಲೀಕರಣ ತರಬೇತಿ, ಚಿಕ್ಕಕುಟುಂಬದ ತರಬೇತಿ, ಏಡ್ಸ್ ತಡೆಯ ಕಾರ್ಯಕ್ರಮಗಳ ಮೂಲಕ ಜಾಗೃತಿ ಮೂಡಿಸುತ್ತಿದೆ. ಬರ್ಡ್ಸ್ ಸಂಸ್ಥೆಯು ಕರ್ನಾಟಕದಾದ್ಯಂತ ಅಷ್ಟೇ ಅಲ್ಲದೇ, ಮಹಾರಾಷ್ಟ್ರದ ಕೆಲವು ಪ್ರದೇಶಗಳಿಗೂ ತನ್ನ ಕಾರ್ಯವಿಸ್ತರಿಸಿದೆ.

**ಡ) ಗ್ರಾಮ ಪರಿವರ್ತನ ಕೇಂದ್ರ (ಜಿಪಿಕೆ) :**

ಇದು ಕೂಡಾ ಬೆಳಗಾವಿಯಲ್ಲಿ ೧೯೬೦ ರಲ್ಲಿ ಸ್ಥಾಪನೆಗೊಂಡಿದೆ. ಗ್ರಾಮೀಣ ಮತ್ತು ನಗರಾಭಿವೃದ್ಧಿ, ಔದ್ಯೋಗಿಕ ರಂಗದಲ್ಲಿ ಉದ್ಯೋಗ ನೀಡುವಿಕೆ, ಎಲ್ಲ ಜನರಿಗೆ ಶಿಕ್ಷಣ ನೀಡುವ ಕಾರ್ಯಕ್ರಮಗಳನ್ನು ಇದು ಹಮ್ಮಿಕೊಳ್ಳುತ್ತಿದೆ.

**ಇ) ಗ್ರಾಮೀಣ ಕಲ್ಯಾಣ ಟ್ರಸ್ಟ್ (ಆರ್‌ಡಬ್ಲೂಡಿ) :**

ಬೆಳಗಾವಿ ಸಮೀಪದ ಸಂತೆಬಸ್ತವಾಡ ಗ್ರಾಮದಲ್ಲಿ ೧೯೮೧ರಲ್ಲಿ ಪ್ರಾರಂಭಗೊಂಡಿದೆ. ಇದರ ಗುರಿಗಳೆಂದರೆ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಸಾಮಾಜಿಕ – ಆರ್ಥಿಕವಾಗಿ ಹಿಂದುಳಿದ ಸಮುದಾಯದ ಜನರನ್ನು ಸಂಘಟಿಸಿ ಅವರ ಆದಾಯ ಹೆಚ್ಚಿಸುವ, ಶಿಕ್ಷಣ ಸೌಲಭ್ಯ, ಆರೋಗ್ಯ ಕಾಳಜಿ ಸೌಕರ್ಯ, ಮಾನವ ಸಂಪನ್ಮೂಲ ಅಭಿವೃದ್ಧಿಯ ತರಬೇತಿ ನೀಡುವದರೊಂದಿಗೆ ಸ್ತ್ರೀ–ಪುರುಷರ ಸಮಾನತೆ ಮತ್ತು ಪರಿಸರ ರಕ್ಷಣೆಯ ಒತ್ತು ನೀಡುವ ಕಾರ್ಯಕ್ರಮ ಹಮ್ಮಿಕೊಳ್ಳುವದಾಗಿದೆ.

ಈ ಸಂಸ್ಥೆಯು ಗಿರಿಜನರ ಗುಂಪುಗಳಲ್ಲಿ ಅತೀ ಹಿಂದುಳಿದ ಜನರ ಕಲ್ಯಾಣಕ್ಕಾಗಿ ಕಾರ್ಯಮಾಡುತ್ತಿದ್ದು, ಔಪಚಾರಿಕ – ಅನೌಪಚಾರಿಕ ಶಿಕ್ಷಣದ ಮೂಲಕ ಜಾಗೃತಿ ಮೂಡಿಸುವ, ಆರೋಗ್ಯ, ಶಿಕ್ಷಣ, ವೈದ್ಯಕೀಯ ಸೇವೆ ನೀಡುವವರ ಸಂಘಟನೆ, ಉಳಿತಾಯ ಯೋಜನೆಗಳನ್ನು ಬೆಂಬಲಿಸುವದು, ಸಹಕಾರದ ಸಾಹಸಿ ಕೆಲಸಗಳಿಗೆ ಪ್ರೇರಣೆ ನೀಡುವದು ಮುಂತಾದ ಮುಖ್ಯವಾದ ಕಾರ್ಯಗಳನ್ನು ಮಾಡುತ್ತಾರೆ. ಬೇಡರು, ಧನಗರ, ಗೌಳಿಗಳು, ಕುರುಬ ಜನಾಂಗದವರಿಗೆ ಸಂಘಟನಾತ್ಮಕ ಕಾರ್ಯಯೋಜನೆ ಸಿದ್ಧಗೊಳಿಸುವದು ಮತ್ತು ಮಾಲಿನ್ಯ ನಿಯಂತ್ರಣ ಮತ್ತು ಪರಿಸರ ರಕ್ಷಣೆಯ ಯೋಜನೆಗಳನ್ನು ಕಾರ್ಯಗತಗೊಳಿಸುತ್ತಿದೆ.

**ಫ) ಸಬೂರಿ ಅಸೋಶಿಯೇಶನ್ (ಎಸ್‌ಎ) :**

ಇದೂ ಸಹ ಬೆಳಗಾವಿಯಲ್ಲಿ ೧೯೯೧ರಲ್ಲಿ ಪ್ರಾರಂಭಗೊಂಡು, ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಜನಾಂಗದ ಜನತೆಗೆ ಶೈಕ್ಷಣಿಕ ಮತ್ತು ರೇಶ್ಮೆ – ಇತರ ವ್ಯವಹಾರಗಳ ಉದ್ಯೋಗ ತರಬೇತಿ ನೀಡುವ ಕಾರ್ಯಗಳಲ್ಲಿ ತೊಡಗಿಸಿ ತನ್ಮೂಲಕ ಫಲಾನುಭವಿಗಳ ಉದ್ಧಾರ ಇದರ ಮುಖ್ಯ ಉದ್ದೇಶವಾಗಿದೆ.

**ಗ) ಸಿದ್ಧನಾಥ ಶಿಕ್ಷಣ ಸಂಸ್ಥೆ (ಸಿದ್ಧನಾಥ ಎಜ್ಯುಕೇಶನ್ ಸೋಸಾಯಿಟಿ – ಎಸ್‌ಇಎಸ್):**

ಬೆಳಗಾವಿಯಲ್ಲಿ ೧೯೭೮ರಲ್ಲಿಯೇ ಸ್ಥಾಪನೆಗೊಂಡಿದ್ದು, ವಿಕಲಚೇತನ ಮಾನಸಿಕ ಅಸ್ವಸ್ಥ, ದೈಹಿಕ ವಿಕಲತೆ, ಶಾರೀರಿಕ ಅಂಗವಿಕಲತೆ ಮತ್ತು ದೃಷ್ಟಿಹೀನ ಜನಾಂಗಕ್ಕೆ ತರಬೇತಿ, ಶಿಕ್ಷಣ ಮತ್ತು ಮರುವಸತಿ ಕಲ್ಪಿಸುವ ಕಾರ್ಯಗಳಲ್ಲಿ ತೊಡಗಿಕೊಂಡಿದೆ.

**ಹ) ಸ್ವಾಮಿ ವಿವೇಕಾನಂದ ಸೇವಾ ಪ್ರತಿಷ್ಠಾನ (ಎಸ್‌ವಿಎಸ್‌ಪಿ) :**

ಈ ಸಂಸ್ಥೆಯು ೧೯೮೨ರಲ್ಲಿ ಬೆಳಗಾವಿಯಲ್ಲಿ ಸ್ಥಾಪನೆಯಾಯಿತು. ಬಡಜನರ, ಅಶಕ್ತರ ಮತ್ತು ಸಮಾಜದಲ್ಲಿ ನಿರ್ಗತಿಕರಾಗಿರುವ ಜನರ ಸೇವೆ ಮಾಡುವದು ಈ ಸಂಸ್ಥೆಯ ಉದ್ದೇಶವಾಗಿದೆ.

ಇವುಗಳಲ್ಲದೆ, ಹಲವಾರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಂಘಟನೆಗಳಾದ ರೋಟರಿ ಕ್ಲಬ್, ಲಾಯನ್ಸ್ ಕ್ಲಬ್, ಜೇಸಿ ಕ್ಲಬ್, ಇಂಡಿಯನ್ ರೆಡ್ ಕ್ರಾಸ್ ಸಂಸ್ಥೆ, ಮುಂತಾದವುಗಳು ಸಾಕಷ್ಟು ಸಮುದಾಯ ಅಭಿವೃದ್ಧಿ ಆರೋಗ್ಯ ಸಂಬಂಧಿತ ಕಾರ್ಯಕ್ರಮಗಳನ್ನು ನಡೆಸುತ್ತಿವೆ.

ಬೆಳಗಾವಿ ಜಿಲ್ಲೆಯಲ್ಲಿ ೨೦,೦೦೦ ಕ್ಕೂ ಅಧಿಕ ಸರ್ಕಾರೇತರ ಸಂಸ್ಥೆಗಳಿವೆ. ಹೆಚ್ಚಿನ ಸರ್ಕಾರೇತರ ಸಂಸ್ಥೆಗಳು ನೋಂದಣಿ ರಹಿತವಾಗಿದ್ದು ಸಣ್ಣ ಪ್ರಮಾಣದವುಗಳಾಗಿವೆ. ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಎಲ್ಲಾ ಸಾರ್ವಜನಿಕ ಕ್ಷೇತ್ರಗಳಲ್ಲಿಯು ತನ್ನ ವ್ಯಾಪ್ತಿಯನ್ನು ಹೊಂದಿದೆ. ಬಡವರ ಕಾಳಜಿ,ಆರೋಗ್ಯ ರಕ್ಷಣೆ, ಗ್ರಾಮೀಣ ಅಬಿವೃದ್ಧಿ,ಕಲೆ ಮತ್ತು ಸಾಹಿತ್ಯ, ಶಿಕ್ಷಣ,ಮಹಿಳಾ ಸಬಲೀಕರಣ,ಕ್ರೀಡಾ ಚಟುವಟಿಕೆಗಳು, ಪರಿಸರ ಸಂರಕ್ಷಣೆ, ಮಕ್ಕಳ ಹಕ್ಕುಗಳ ಸಂರಕ್ಷಣೆ, ಬಾಲ ಕಾರ್ಮಿಕ ಅಭಿವೃದ್ಧಿ ಮುಂತಾದ ವಿವಿಧ ಕ್ಷೇತ್ರಗಳಲ್ಲಿಯೂ ಸರ್ಕಾರೇತರ ಸಂಸ್ಥೆಗಳು ತನ್ನ ಛಾಪನ್ನು ಒತ್ತಿದೆ. ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಯ ಬಹು ಮುಖ್ಯ ಅಂಶವೆಂದರೆ, ಸಂಸ್ಥೆಗಳು ನೋಂದಣಿಯಾಗಿದ್ದು, ಕಾಲಕಾಲಕ್ಕೂ ನಿಯಮಗಳ ಪ್ರಕಾರ ನವೀಕರಣ ಹೊಂದುವದಿಲ್ಲ. ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಸಹಕಾರ ಸಂಘಗಳ ನೋಂದಣಿ ಕಾಯ್ದೆ ಮತ್ತು ಭಾರತೀಯ ನೋಂದಣಿ ಕಾಯ್ದೆಗಳಡಿಯಲ್ಲಿ ನೋಂದಾವಣೆಗೊಂಡಿವೆ.

**********

# ಅಧ್ಯಾಯ – ೪

# ಆಯ್ದ ಸರ್ಕಾರೇತರ ಸಂಸ್ಥೆಗಳು

೪. ಸರ್ಕಾರೇತರ ಸಂಸ್ಥೆಗಳ ವೈಶಿಷ್ಟ್ಯತೆ

೪.೧ ಜೆ.ಜಿ. ಸಹಕಾರಿ ಆಸ್ಪತ್ರೆ–ಆರೋಗ್ಯ ಕ್ಷೇತ್ರ

೪.೨ ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸೈಟಿ – ಶಿಕ್ಷಣ ಕ್ಷೇತ್ರ

೪.೩ ಭಾವಸಂಗಮ – ಕಲೆ ಮತ್ತು ಸಾಹಿತ್ಯ ಕ್ಷೇತ್ರ

೪.೪ ಮಹಿಳಾ ಸಮಾಖ್ಯಾ ಕರ್ನಾಟಕ –ಮಹಿಳಾ ಸಬಲೀಕರಣ ಕ್ಷೇತ್ರ

೪.೫ ಬರ್ಡ್ಸ್ ಸಂಸ್ಥೆ– ಗ್ರಾಮೀಣ ಅಭಿವೃದ್ಧಿ ಕ್ಷೇತ್ರ

ಅಧ್ಯಾಯ – ೪

# ಆಯ್ದ ಸರ್ಕಾರೇತರ ಸಂಸ್ಥೆಗಳು

ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಐದು ಸರ್ಕಾರೇತರ ಸಂಸ್ಥೆಗಳ ಸ್ವರೂಪ, ಉದ್ದೇಶ, ಕಾರ್ಯನಿರ್ವಹಣಾ ವಿಧಾನ ಹಾಗೂ ಸಾಧನೆಗಳನ್ನು ಪರಿಚಯಿಸಲಾಗಿದೆ.

**೪. ಸರ್ಕಾರೇತರ ಸಂಸ್ಥೆಗಳ ವೈಶಿಷ್ಟ್ಯತೆ :**

ಬೆಳಗಾವಿ ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳು ಹೆಚ್ಚಿನ ಪ್ರಮಾಣದಲ್ಲಿ ಕಾರ್ಯನಿರ್ವಹಿಸುತ್ತಿವೆ. ಕಲೆ, ಸಾಹಿತ್ಯ, ಪರಿಸರ, ಆರೋಗ್ಯ, ಶಿಕ್ಷಣ, ಮಹಿಳಾ ಸಬಲೀಕರಣ, ಉದ್ಯೋಗ, ಅರಿವುಮೂಡಿಸುವ ಕಾರ್ಯಕ್ರಮ, ಗ್ರಾಮೀಣಾಭಿವೃದ್ಧಿ ಮುಂತಾದ ಪ್ರತಿಯೊಂದು ಕ್ಷೇತ್ರಗಳಲ್ಲಿಯೂ ಅನೇಕ ಸರ್ಕಾರೇತರ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಆದರೆ ಅಧ್ಯಯನದಲ್ಲಿ ಐದು ವೈಶಿಷ್ಟ್ಯಪೂರ್ಣ ಸರ್ಕಾರೇತರ ಸಂಸ್ಥೆಗಳನ್ನು ಆಯ್ದುಕೊಳ್ಳಲಾಗಿದೆ.

**ಅ) ಜೆ. ಜಿ. ಸಹಕಾರಿ ಆಸ್ಪತ್ರೆ, ಘಟಪ್ರಭಾ**

ಆರೋಗ್ಯ ಕ್ಷೇತ್ರದಲ್ಲಿ ಕರ್ನಾಟಕ ಆರೋಗ್ಯ ಧಾಮ, ಕೆ.ಎಲ್.ಇ ಆಸ್ಪತ್ರೆ, ಲೇಕ್ ವ್ಯೂ ಆಸ್ಪತ್ರೆ, ನಿಮ್ರಾ ಆಸ್ಪತ್ರೆ, ಗಂಗಾ ಆಸ್ಪತ್ರೆ, ಮಾಸೂರಕರ ಆಸ್ಪತ್ರೆ, ಅಶೋಕಾ ಆಸ್ಪತ್ರೆ, ಬೆಳಗಾವಿ ಚಿಕ್ಕ ಮಕ್ಕಳ ಆಸ್ಪತ್ರೆ (ಬಿ.ಸಿ.ಹೆಚ್) ಇತ್ಯಾದಿ ಸಾಕಷ್ಟು ಸರ್ಕಾರೇತರ ಸಂಸ್ಥೆಗಳು ಆರೋಗ್ಯ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸತ್ತಿದ್ದರೂ ಸಹಿತ ಸಹಕಾರಿ ತತ್ವದಡಿಯಲ್ಲಿ ಜನರಿಗೆ ಆರೋಗ್ಯ ಭಾಗ್ಯವನ್ನು ಒದಗಿಸುತ್ತಿರುವ ಸರ್ಕಾರೇತರ ಸಂಸ್ಥೆ ಘಟಪ್ರಭಾದ ಜೆ. ಜಿ. ಸಹಕಾರಿ ಆಸ್ಪತ್ರೆಯೊಂದೇ. ಇದು ೧೯೫೧ ರಲ್ಲಿ ಬಾಂಬೆ ಸಹಕಾರಿ ಟ್ರಸ್ಟ ಕಾಯ್ದೆ ೧೯೨೫ ರಡಿಯಲ್ಲಿ ನೊಂದಾಯಿತಗೊಂಡು ಸಮಾಜದ ಆರ್ಥಿಕವಾಗಿ ಹಿಂದುಳಿದ ಜನರ ಸೇವೆಯನ್ನು ಮಾಡುವ ಧ್ಯೇಯವನ್ನು ಹೊಂದಿದೆ. ಈ ಸಂಸ್ಥೆಯು ಕಡಿಮೆ ವೆಚ್ಚದಲ್ಲಿ ಅತ್ಯುನ್ನತಮಟ್ಟದ ವೈದ್ಯಕೀಯ ಸೇವೆಯನ್ನು ಅವಶ್ಯವಿರುವ ಜನರಿಗೆ ಒದಗಿಸುತ್ತದೆ. ಆದುದರಿಂದ ಆರೋಗ್ಯ ಕ್ಷೇತ್ರದಲ್ಲಿ ಬೆಳಗಾವಿ ಜಿಲ್ಲೆಯಾದ್ಯಂತ

ಹೆಸರುವಾಸಿಯಾದಂತಹ ಸಹಕಾರಿ ತತ್ವದ ತಳಹದಿಯಡಿ ಕರ್ತವ್ಯ ನಿರ್ವಹಿಸುತ್ತಿರುವಂತಹ ಸರ್ಕಾರೇತರ ಸಂಸ್ಥೆಯಾದ ಜೆ. ಜಿ. ಸಹಕಾರಿ ಆಸ್ಪತ್ರೆ ಘಟಪ್ರಭಾ ಇದನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

**ಬ) ಕರ್ನಾಟಕ ಲಿಂಗಾಯತ ಎಜ್ಯುಕೇಶನ್ (ಕೆಎಲ್ಇ) ಸಂಸ್ಥೆ, ಬೆಳಗಾವಿ**

ಬೆಳಗಾವಿ ಜಿಲ್ಲೆಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ತನ್ನದೇ ಆದ ಛಾಪನ್ನು ಒತ್ತಿರುವ ಸಂಸ್ಥೆ ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ. ಈ ಸರ್ಕಾರೇತರ ಸಂಸ್ಥೆಯು ಬೆಳಗಾವಿ ಜಿಲ್ಲೆಯಲ್ಲಿ ಮಾತ್ರವಲ್ಲದೆ ರಾಜ್ಯಾದ್ಯಂತ ಶಿಕ್ಷಣದ ಕಂಪನ್ನು ಪಸರಿಸುವ ಕಾರ್ಯದಲ್ಲಿ ತೊಡಗಿದೆ. ಸಂಸ್ಥೆಯು ಸಂಸ್ಥೆಗಳ ನೊಂದಣಿ ಕಾಯ್ದೆ ೧೮೬೦ ರಡಿಯಲ್ಲಿ ನೊಂದಣಿಯನ್ನು ಹೊಂದಿದ್ದು, ಬೆಳಗಾವಿ ಜಿಲ್ಲೆಯ ಶಿಕ್ಷಣ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಅನನ್ಯ.

**ಕ) ಭಾವಸಂಗಮ, ಗೋಕಾಕ**

ಸರ್ಕಾರೇತರ ಸಂಸ್ಥೆ ಎಂದರೆ ನೊಂದಣಿ ಆಗಿರಬೇಕೆಂದೇನು ಇಲ್ಲ. ಈ ನಿಟ್ಟಿನಲ್ಲಿ ನೊಂದಾವಣಿ ಹೊಂದದ ಸರ್ಕಾರೇತರ ಸಂಸ್ಥೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಭಾವ ಸಂಗಮವು ಗೋಕಾಕ ಶಹರ ಮತ್ತು ಹತ್ತಿರದ ಹಳ್ಳಿಗಳಾದ ಮಾಲದಿನ್ನಿ, ಚಿಗಡೊಳ್ಳಿ, ಅಡಿಬಟ್ಟಿ, ಕೌಜಲಗಿ, ಯಾದವಾಡ, ಮೂಡಲಗಿ ಮುಂತಾದ ಗ್ರಾಮಗಳಲ್ಲಿ ನಿತ್ಯನಿರಂತರ ಕಾರ್ಯಕ್ರಮಗಳನ್ನು ನಡೆಸಿ ಜನಮನಗಳನ್ನು ಗೆದ್ದಿದೆ. ಕಾಯ್ದೆ ಬದ್ಧವಾಗಿ ನೊಂದಾವಣೆ ಹೊಂದದಿದ್ದರೂ ಕಲೆ ಮತ್ತು ಸಾಹಿತ್ಯದ ಸದಭಿರುಚಿಯನ್ನು ಎಲ್ಲೆಡೆ ಪಸರಿಸುವುದರ ಮೂಲಕ ಜನಸಾಮಾನ್ಯರ ಹೃದಯಗಳಲ್ಲಿ ನೊಂದಾವಣೆ ಹೊಂದಿದೆ.

**ಡ) ಮಹಿಳಾ ಸಮಾಖ್ಯಾ ಕರ್ನಾಟಕ, ಬೆಳಗಾವಿ**

ಶಿಕ್ಷಣದ ಮೂಲಕ ಮಹಿಳೆಯರ ಸಬಲೀಕರಣ ಸಲುವಾಗಿ ಕೇಂದ್ರ ಸರ್ಕಾರ ಪ್ರಾಯೋಜಿತ ಸರ್ಕಾರೇತರ ಸಂಸ್ಥೆಯೇ ಮಹಿಳಾ ಸಮಾಖ್ಯಾ ಕರ್ನಾಟಕ. ಈ ಸಂಸ್ಥೆಯು ಇನ್ನಿತರ ಸಂಸ್ಥೆಗಳಿಗಿಂತ ಭಿನ್ನ. ಏಕೆಂದರೆ ಇದರ ಮೂಲ ಕೇಂದ್ರ ಸರ್ಕಾರದ ಪ್ರಾಯೋಜನೆ. ಆದರೆ ಉದ್ದೇಶ ಮಹಿಳೆಯರ ಸಬಲೀಕರಣ.

**ಇ) ಬೆಳಗಾವಿ ಸಮಗ್ರ ಗ್ರಾಮೀಣಾಭಿವೃದ್ಧಿ ಸಂಸ್ಥೆ (ಬರ್ಡ್ಸ್) ತುಕ್ಕಾನಟ್ಟಿ**

ಗೋಕಾಕ ತಾಲೂಕಿನ, ತುಕ್ಕಾನಟ್ಟಿ ಎಂಬ ಅತೀ ಸಣ್ಣ ಗ್ರಾಮದಲ್ಲಿ ೧೯೮೦ ರಲ್ಲಿ ಪ್ರಾರಂಭವಾದ ಈ ಸಂಸ್ಥೆಯು ಗ್ರಾಮೀಣ ಅಭಿವೃದ್ದಿಗೆ ಹೊಸ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಮೂಲಕ ಗ್ರಾಮೀಣ ಅಭಿವೃದ್ದಿ ಕ್ಷೇತ್ರದಲ್ಲಿ ಇತರ ಸರ್ಕಾರೇತರ ಸಂಸ್ಥೆಗಳಿಗಿಂತ ಭಿನ್ನತೆಯನ್ನು ಹೊಂದಿದೆ. ಸರ್ಕಾರೇತರ ಸಂಸ್ಥೆಗಳ ವಿವಿಧ ಆಯಾಮಗಳಲ್ಲಿ ಆಗುತ್ತಿರುವ

ಬದಲಾವಣೆಗಳನ್ನು ಗಮನಿಸಿ ಅದನ್ನು ಜಾರಿಗೆ ತಂದು ಜನರ ಅಭಿವೃದ್ದಿಗೆ ಸಹಕಾರಿಯಾಗುವಂತಹ ಕಾರ್ಯಕ್ರಮವನ್ನು ಈ ಸಂಸ್ಥೆಯು ರೂಪಿಸಿದೆ.

### ೪.೧ ಜೆ. ಜಿ. ಸಹಕಾರಿ ಆಸ್ಪತ್ರೆ –ಆರೋಗ್ಯ ಕ್ಷೇತ್ರ :

ಪ್ರತಿ ವ್ಯಕ್ತಿಯ ಜೀವನದಲ್ಲಿ ಆರೋಗ್ಯಕ್ಕೆ ಪ್ರಥಮ ಆದ್ಯತೆ. ಆರೋಗ್ಯವೇ ಭಾಗ್ಯ ಎಂಬ ನಾಣ್ಣುಡಿಯಂತೆ, ಸಂತೋಷಮಯ ಹಾಗೂ ಸಂತೃಪ್ತ ಜೀವನಕ್ಕೆ ಆರೋಗ್ಯ ಅವಶ್ಯ ಹಾಗೂ ಸಮಾಜದಲ್ಲಿ ಉತ್ಪಾದಕತೆ ಕಾರ್ಯಗಳಿಗೂ ಅತ್ಯಗತ್ಯ. ಪ್ರಸ್ತುತ ಅಧ್ಯಯನವು ಸರ್ಕಾರೇತರ ಸಂಸ್ಥೆಗಳು ಕೈಗೊಂಡ ಆರೋಗ್ಯ ಅರಿವು ಕಾರ್ಯಕ್ರಮಗಳ ಬಗ್ಗೆ ಪರೀಕ್ಷಿಸುತ್ತದೆ. ಗ್ರಾಮೀಣ ಜನರ ಆರೋಗ್ಯದ ಮೇಲೆ ಯೋಜನೆಗಳ ಪರಿಣಾಮವನ್ನು ತಿಳಿದುಕೊಳ್ಳಲು ಹಾಗೂ ಈ ಮೂಲಕ ಸಮಗ್ರ ಅಭಿವೃದ್ಧಿಗೆ ನೀಡಿದ ಕೊಡುಗೆಯನ್ನು ತಿಳಿದುಕೊಳ್ಳಲು ಅಧ್ಯಯನವನ್ನು ಮಾಡಲಾಗಿದೆ.

ಈ ಸರ್ಕಾರೇತರ ಸಂಸ್ಥೆಯು ಮೂರುಸಾವಿರ ಮಠದ ಹುಬ್ಬಳ್ಳಿಯ ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗಿಂದ್ರ ಮಹಾಸ್ವಾಮಿಗಳು, ಇವರ ಮಾನವತೆಯ ಕಾಳಜಿಯಿಂದ ೧೯೫೧ ರಲ್ಲಿ ಗ್ರಾಮೀಣ ಜನರ ಸೇವೆಗಾಗಿ ಪ್ರಾರಂಭಿಸಲ್ಪಟ್ಟಿದೆ. ಇದನ್ನು ೬೩ ಎಕರೆ ಭೂಮಿಯನ್ನು ದಾನವಾಗಿ ಪಡೆದು, ಸಾಕಷ್ಟು ಹಣಕಾಸನ್ನು ನೀಡುವುದರೊಂದಿಗೆ ಹುಟ್ಟು ಹಾಕಲಾಯಿತು. ಆದ್ದರಿಂದ ಈ ಸಂಘಟಣೆಯ ಹೆಸರನ್ನು ಜೆ.ಜಿ.ಸಹಕಾರಿ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ, ಘಟಪ್ರಭಾ ಎಂದು ಇಡಲಾಗಿದೆ.

ಇದರ ಜನ್ಮಕ್ಕೆ ಕಾರಣವಾದ ಒಂದು ಕಥೆಯೇ ಇದೆ. ಇದನ್ನು ಪ್ರಾರಂಭಿಸುವ ಪೂರ್ವದಲ್ಲಿ ಪರಮಪೂಜ್ಯ ಜಗದ್ಗುರು ರಾಜಯೋಗಿಂದ್ರ ಮಹಾಸ್ವಾಮಿ ಇವರು, ತಾವೇ ಸ್ವತಃ ಆಯುರ್ವೇದದಲ್ಲಿ ಪಾಂಡಿತ್ಯಪಡೆದು, ಶುಲ್ಕವಿಲ್ಲದೆ ಸುತ್ತಲಿನ ಜನರ ಸೇವೆಯನ್ನು ಮಾಡುತ್ತಿದ್ದರು. ಒಂದು ಸಲ ಕರ್ನಾಟಕ ಸಹಕಾರಿ ಸಂಘಗಳ ನೋಂದಣಾಧಿಕಾರಿಯಾಗಿದ್ದ ದಿವಂಗತ ಬಿ.ಎ.ಪಾಟೀಲ ಅಮ್ಮಿನಭಾವಿ, ಇವರು ಚಿಕಿತ್ಸೆಗಾಗಿ ಗುರುಗಳ ಬಳಿಗೆ ಬಂದರು. ಗುರುಗಳ ಚಿಕಿತ್ಸೆ ಹಾಗೂ ಮಾನವೀಯತೆಯನ್ನು ನೋಡಿ ಅವರ ಶಿಷ್ಯರಾದರು. ಅವರು ಸ್ವಾಮಿಜಿಯವರಿಗೆ ಆಸ್ಪತ್ರೆ ಪ್ರಾರಂಭಿಸಲು ಒತ್ತಾಯಿಸಿದರು. ಗುರುಗಳು ಒಪ್ಪಿಕೊಂಡರು. ಅದರಂತೆ, ೧೯೫೧ರಲ್ಲಿ ಬಾಂಬೆ ಕೋ ಆಪರೇಟಿವ್ ಟ್ರಸ್ಟ್ ಕಾಯ್ದೆ ೧೯೨೫ರ ಅಡಿಯಲ್ಲಿ ಸಂಘವನ್ನು ನೋಂದಣಿ ಮಾಡಲಾಯಿತು. ಅಲ್ಲಿಂದ ಈ ಸಂಘವನ್ನು ಜೆ.ಜಿ.ಕೋ ಆಪರೇಟಿವ್ ಹಾಸ್ಪಿಟಲ್ ಲಿಮಿಟೆಡ್ ಎಂದು ನಾಮಕರಣ ಮಾಡಲಾಯಿತು. ಪ್ರಾರಂಭದಲ್ಲಿ ಯಾವುದೇ ಕಟ್ಟಡ ಅಥವಾ ಯಂತ್ರೋಪಕರಣಗಳು ಇರಲಿಲ್ಲ. ಆದ್ದರಿಂದ ಗುರುಗಳು ಹಾಗೂ ಭಕ್ತರು ಹಳ್ಳಿಗಳಿಂದ ದಾನ, ದತ್ತಿ ಸಂಗ್ರಹಿಸಲು ಮುಂದಾದರು. ಈ

ಹಣದಿಂದ ಆಸ್ಪತ್ರೆಯ ಮುಖ್ಯ ಕಟ್ಟಡ ಮತ್ತು ಕೆಲವು ಯಂತ್ರೋಪಕರಣ ಸಂಗ್ರಹಿಸಲು ಸಾಧ್ಯವಾಯಿತು. ಈಗ ಸುತ್ತಲಿನ ಗ್ರಾಮಸ್ಥರ ಸೇವೆಗೆ ಪೂರಕವಾದ ಎಲ್ಲಾ ಅಗತ್ಯ ಸಾಮಗ್ರಿ ಹಾಗೂ ಸೌಕರ್ಯಗಳಿಂದ ಆಸ್ಪತ್ರೆಯು ಸುಸಜ್ಜಿತವಾಗಿದೆ.

ಈ ರಚನಾತ್ಮಕ ಮುಂದಾಲೋಚನೆಯು ದಿವಂಗತ ಬಿ.ಎ.ಪಾಟೀಲರವರಿಂದ ಬಲಪಡೆದುಕೊಂಡಿತು. ಈ ಮಹಾನ್‌ಕಾರ್ಯಕ್ಕೆ ಆಧಾರಸ್ಥಂಬವಾಗಿ ನಿಂತು, ಅದಕ್ಕೆ ಮೂರ್ತಸ್ವರೂಪ ನೀಡಿದರು. ಅವರು ನೀಡಿದ ಆರಂಭಿಕ ಸಲಹೆಗಳು ಮತ್ತು ಭರವಸೆಗಳು ಸಂಘಕ್ಕೆ ಜೀವ ತುಂಬಿದವು. ಅವರ ಸೇವೆಯ ಸ್ಮರಣೆಗಾಗಿ, ಹೊಸದಾಗಿ ನಿರ್ಮಾಣಗೊಂಡ ಆಯುರ್ವೇದ ವೈದ್ಯಕೀಯ ಆಸ್ಪತ್ರೆಗೆ ದಿ: ಬಿ.ಎ ಪಾಟೀಲ ಇವರ ಹೆಸರು ಇಡಲಾಗಿದೆ.

ಈ ಸಂಸ್ಥೆಯ ಯಶಸ್ಸಿನ ಹಿಂದಿನ ರೂವಾರಿಗಳಲ್ಲಿ ಮುಖ್ಯ ಆರೋಗ್ಯಾಧಿಕಾರಿಗಳಾಗಿದ್ದ ಅತ್ಯಂತ ಹಿರಿಯ ವ್ಯಕ್ತಿತ್ವದ ಡಾ.ಎ.ಬಿ ನಾಯಕವಾಡಿಯವರು ಹಲವು ಸಮಸ್ಯೆಗಳಿಂದ ಆಸ್ಪತ್ರೆಯು ಗುಣವನ್ನು ಕಳೆದುಕೊಳ್ಳುತ್ತಿತ್ತು. ಇಂಥ ಸಂದರ್ಭದಲ್ಲಿ ಡಾ.ನಾಯಿಕವಾಡಿಯವರು 'ಆಶಾಕಿರಣ'ವಾಗಿ ಬಂದರು. ಅವರು ಆಸ್ಪತ್ರೆಗೆ ಅಗತ್ಯವಾದ ಅತ್ಯಾಧುನಿಕ ಸಾಮಗ್ರಿಗಳನ್ನು ಮತ್ತು ಸೌಕರ್ಯಗಳನ್ನು ನೀಡಿದರು. ಅವರು, ಪ್ರತ್ಯೇಕ ಹೆರಿಗೆ ವಾರ್ಡಗಳನ್ನು ನಿರ್ಮಿಸಿದರು ಹಾಗೂ ಆಸ್ಪತ್ರೆಯ ಅಭಿವೃದ್ಧಿಗೆ ಮೂಲಭೂತ ಸೌಕರ್ಯಗಳನ್ನು ನೀಡಿದರು. ಅವರ ದೂರದರ್ಶಿತ್ವ ಮತ್ತು ಸತತ ಪ್ರಯತ್ನಗಳ ಫಲದಿಂದ ಆಯುರ್ವೇದ ಆಸ್ಪತ್ರೆಯು ಸ್ಥಾಪನೆಯಾಯಿತು. ಮತ್ತು ಬಡವರಿಗೆ ಅಂತರಾಷ್ಟ್ರೀಯ ಮಟ್ಟದ ಬೋರ್ಡಿಂಗ, ೪೬ ಹಾಸಿಗೆಗಳ ನೈಸರ್ಗಿಕ ಚಿಕಿತ್ಸೆ ಯೋಗ ಕೇಂದ್ರ ಹಾಗೂ ಇತರೇ ವೈದ್ಯಕೀಯ ಸೇವೆಗಳು ಪ್ರಾರಂಭಗೊಂಡವು.

**ಅಮೂಲ್ಯ ನಿವೇಶನ :**

ಘಟಪ್ರಭಾ ರೈಲು ನಿಲ್ದಾಣದಿಂದ ಪಶ್ಚಿಮಕ್ಕೆ ಗುಬ್ಬಲಗುಡ್ಡದ ಬೆಟ್ಟದ ತುದಿಯಲ್ಲಿ ಜೆ.ಜಿ ಸಹಕಾರಿ ಆಸ್ಪತ್ರೆ ನಿರ್ಮಾಣಗೊಂಡಿದೆ. ಆಸ್ಪತ್ರೆಯ ಮೇಲೆ ನಿಂತಿರುವಾಗ ಶಿಖರದ ಸೌಂದರ್ಯ ಕಣ್ಣಿಗೆ ಕಾಣಿಸುತ್ತದೆ. ಇವು ಸಹ್ಯಾದ್ರಿಯ ಇಳಿಜಾರಿಗೆ ಸೀಮಿತವಾದವು. ಘಟಪ್ರಭಾ ನದಿ ಹಸಿರು ಇಳಿಜಾರಿನಿಂದ ಸಮಸ್ತ ಡೆಕ್ಕನ್ ಪ್ರಸ್ತಭೂಮಿಗೆ ಸೌಂದರ್ಯ ನೀಡಿ, ಗೋಕಾಕ ಸಮೀಪ ಜಲಪಾತವನ್ನು ನಿರ್ಮಿಸಿದೆ. ಧೂಪದಾಳದ ಹರವಿನಲ್ಲಿ ಒಂದು ರಮಣೀಯ ತಾಣವನ್ನೇ ನಿರ್ಮಿಸಿದೆ. ಇದು ಆಸ್ಪತ್ರೆಯಿಂದ ೩ ಕಿ.ಮೀ. ದೂರದಲ್ಲಿದೆ. ಇದರಿಂದ ಬೀಸುವ ತಂಗಾಳಿಯು ಆಸ್ಪತ್ರೆಯಲ್ಲಿ ಒಂದು ಸುಂದರವಾದ ವಾತಾವರಣ ಹಾಗೂ ಆರೋಗ್ಯಪೂರ್ಣ ಕಂಪು ಹರಡಿದೆ. ಘಟಪ್ರಭಾ ಪಟ್ಟಣವು ಬೆಳಗಾವಿಯಿಂದ ೬೦ ಕಿ.ಮೀ. ದೂರದಲ್ಲಿದೆ. ಇಲ್ಲಿಯ ವೈದ್ಯರ

ನಂಬಿಗೆಯಂತೆ, ನಿಸರ್ಗವು ರೋಗಿಗಳನ್ನು ಅರ್ಧಗುಣಪಡಿಸುತ್ತದೆ. ಮತ್ತು ಉಳಿದರ್ಧ ಅವರ ಪಾಲು. ದೇಶದಲ್ಲಿಯೇ ಜೆ.ಜಿ.ಆಸ್ಪತ್ರೆಯು ಸಹಕಾರಿ ರಂಗದ ದೊಡ್ಡ ಆಸ್ಪತ್ರೆಗಳಲ್ಲಿ ಒಂದಾಗಿದೆ. ಇದು ಸಹಕಾರಿ ಸಂಘವಾದರೂ ಇದರಲ್ಲಿ ವ್ಯಕ್ತಿಗತ ಪಾಲುಗಾರಿಕೆ ಯಾರಿಗೂ ಇಲ್ಲ. 'ಲಾಭ – ನಷ್ಟ ಇಲ್ಲದ ಸಂಸ್ಥೆ' ಎಂಬ ಧ್ಯೇಯ ದಾನಿಗಳ ದಾನದ ಮೇಲೆ ಅವಲಂಬಿಸಿದ ಸಂಸ್ಥೆಯಿದು.

**ಸಂಸ್ಥೆಯ ಧ್ಯೇಯೋದ್ದೇಶಗಳು**

ಸರ್ಜಿಕಲ್, ಗೈನೆಕಾಲಾಜಿಕಲ್ ಮತ್ತು ಅಬ್ಸೆಟ್ರಿಕ್ ಸೇವೆಗಳ ಜೊತೆಗೆ ಇತರ ಎಲ್ಲ ಸೇವೆಗಳನ್ನು ನೀಡುವುದು.

- ಕುಟುಂಬ ಕಲ್ಯಾಣ, ಆರೋಗ್ಯದ ಶಿಕ್ಷಣ, ನರ್ಸಿಂಗ ಶಿಕ್ಷಣ, ಆಯುರ್ವೇದಿಕ್ ವೈದ್ಯಶಿಕ್ಷಣ, ನೈಸರ್ಗಿಕ ಚಿಕಿತ್ಸೆ, ಯೋಗ ಚಿಕಿತ್ಸೆ ನೀಡುವುದು.
- ಸಾರ್ವಜನಿಕರಲ್ಲಿ ಆರೋಗ್ಯದ ಅರಿವು ಮೂಡಿಸುವುದು.
- ಬಡವರಿಗೆ ಶಿಕ್ಷಣ, ಆಹಾರ ಮತ್ತು ಸೂರು ಒದಗಿಸುವುದು.
- ಮಹಿಳೆ ಮತ್ತು ಮಕ್ಕಳಿಗೆ ಹಲವಾರು ಕಲ್ಯಾಣ ಕಾರ್ಯಕ್ರಮ ರೂಪಿಸುವುದು.

**ಮುಖ್ಯ ಸೌಲಭ್ಯಗಳು :**

ಜೆ.ಜಿ. ಆಸ್ಪತ್ರೆಯಲ್ಲಿ ಈ ಕೆಳಗಿನ ಸೌಲಭ್ಯಗಳು ಲಭ್ಯವಿವೆ.

ಕ್ಷಕಿರಣ ಮತ್ತು ವೈದ್ಯಕೀಯ ಪರೀಕ್ಷಾ ಕೊಠಡಿಗಳು ಸುಸಜ್ಜಿತವಾಗಿದ್ದು, ಎಲ್ಲ ಪ್ರಕಾರದ ಪರೀಕ್ಷೆಗಳನ್ನು ಕಡಿಮೆ ದರದಲ್ಲಿ ಮಾಡುವ ಸೌಲಭ್ಯವಿದೆ.

ಹೆರಿಗೆ ವಿಭಾಗಕ್ಕೆ ೨೦ ಹಾಸಿಗೆ ವ್ಯವಸ್ಥೆ ನೀಡಲಾಗಿದ್ದು, ಉಚಿತ ಸೇವೆಗೆ ಮೀಸಲಿಡಲಾಗಿದೆ. ಲ್ಯಾಪ್ರೋಸ್ಕೋಪಿ ಚಿಕಿತ್ಸೆಯ ವ್ಯವಸ್ಥೆಯಿದೆ.

**ಟಿ.ಬಿ ಸ್ಯಾನಿಟೋರಿಯಂ :**

ಜೆ.ಜಿ ಆಸ್ಪತ್ರೆಯ ಟಿ ಬಿ ಸ್ಯಾನಿಟೋರಿಯಮ್‌ದಲ್ಲಿ ೩೦ ಹಾಸಿಗೆಗಳಿವೆ. ಘಟಪ್ರಭಾದ ಒಣ ಹಾಗೂ ಆರೋಗ್ಯಪೂರ್ಣ ವಾತಾವರಣದಿಂದಾಗಿ ದೂರದ ರಾಯಚೂರು, ಗುಲಬರ್ಗಾ, ಕಾರವಾರ, ಕೊಲ್ಹಾಪೂರ, ಹುಬ್ಬಳ್ಳಿಯಿಂದಲೂ ಕ್ಷಯರೋಗಿಗಳು ಇಲ್ಲಿಗೆ ಬರುತ್ತಾರೆ. ಶ್ರೀ ಜಗದ್ಗುರು ಗಂಗಾಧರ ಮೂರುಸಾವಿರ ಮಠದ ಬಡರೋಗಿಗಳ ಪ್ರಸಾದ ನಿಲಯದಲ್ಲಿ ಕಲ್ಪಿಸಲಾಗಿದೆ.

ಕಾರ್ಯಾಗಾರ, ಚರ್ಚಾಕೂಟ ಹಾಗೂ ಆರೋಗ್ಯ ಪರೀಕ್ಷಾ ಶಿಬಿರಗಳ ಮೂಲಕ ಸಮುದಾಯ ಆರೋಗ್ಯಸೇವೆಯನ್ನು ನಡೆಸಲಾಗುತ್ತದೆ.

ಆರೋಗ್ಯದ ಅರಿವು ಮೂಡಿಸುವ ಕಾರ್ಯವನ್ನು ಕಾರ್ಯಗಾರ ಮತ್ತು ವಿಚಾರ ಕಮ್ಮಟಗಳ ಮೂಲಕ ಮಾಡಲಾಗುತ್ತಿದೆ. ರೋಗಗಳ ಬಗ್ಗೆ ಅರಿವು ಹಾಗೂ ತಡೆಗಟ್ಟುವುದು ಮತ್ತು ಆರೋಗ್ಯವರ್ಧನೆ ಕೈಗೊಳ್ಳುವ ಉದ್ದೇಶಹೊಂದಿದೆ. ಸಣ್ಣ ಕುಟಂಬವನ್ನು ಹೊಂದುವಂತೆ ಸಲಹೆ ನೀಡುತ್ತದೆ.

೧. ಆರೋಗ್ಯದ ಬಗ್ಗೆ ಸಾರ್ವಜನಿಕರಲ್ಲಿರಬಹುದಾದ ತಪ್ಪುಗ್ರಹಿಕೆ, ಸಂಶಯ ಹಾಗೂ ಅಜ್ಞಾನವನ್ನು ಹೋಗಲಾಡಿಸುವುದು.

೨. ಜನರು ತಮ್ಮದೇ ಆದ ಪ್ರಯತ್ನಗಳಿಂದ ಮತ್ತು ಕ್ರಿಯೆಗಳಿಂದ ಆರೋಗ್ಯ ಪೂರ್ಣವಾಗಿರುವಂತೆ ಜಾಗೃತಗೊಳಿಸುವುದು.

೩. ಸಮುದಾಯ ಆರೋಗ್ಯ ಸೇವೆಗಳನ್ನು ಬಳಸಿಕೊಳ್ಳಲು ಪ್ರೇರಣೆ ನೀಡುವುದು.

**ದಿ ಫೋರ್ಬ್ಸ್ ತುರ್ತು ಚಿಕಿತ್ಸೆ ವಿಭಾಗ :**

ಗೋಕಾಕ ಮಿಲ್ಸ್ ಚಾರಿಟೇಬಲ್ ಟ್ರಸ್ಟ ಅವರ ರೂ ೭.೫ ಲಕ್ಷ ಹಾಗೂ ಶ್ರೀ ಬಸನಗೌಡಾ ಅಪ್ಪಯ್ಯಗೌಡ ಪಾಟೀಲ ಟ್ರಸ್ಟದವರ ರೂ ೫೦,೦೦೦ ರೂಪಾಯಿಗಳ ದೇಣಿಗೆಯಿಂದ ಇದು ಪ್ರಾರಂಭಗೊಂಡಿದೆ. ಇದರೊಂದಿಗೆ ೯ ತುರ್ತು ಚಿಕಿತ್ಸಾ ವಾರ್ಡಗಳಿದ್ದು, ಅವುಗಳಿಗಾಗಿ ರೂ ೫೨ ಲಕ್ಷ ವಿನಿಯೋಗಿಸಲಾಗಿದೆ.

**ನರ್ಸಿಂಗ ಇನ್‌ಸ್ಟಿಟ್ಯುಟ್ (ದಾದಿಯರ ಸಂಸ್ಥೆ) :**

ಕರ್ನಾಟಕ ಸರ್ಕಾರದಿಂದ ಮಾನ್ಯತೆ ಪಡೆದ ನರ್ಸಿಂಗ ಇನ್‌ಸ್ಟಿಟ್ಯೂಟನ್ನು ೧೯೭೪ರಲ್ಲಿ ಪ್ರಾರಂಭಿಸಲಾಗಿದೆ. ಆರಂಭದಲ್ಲಿ ೨೫ ಸಾಮರ್ಥ್ಯದ ಅಕ್ಸಿಲರಿ ನರ್ಸಿಂಗ್ ಆ್ಯಂಡ್ ಮಿಡ್‌ವೈಫ್ ವರ್ಗವನ್ನು ಪ್ರಾರಂಭಿಸಲಾಗಿತ್ತು.

೧೯೮೮ರಲ್ಲಿ ರಾಜ್ಯ ಸರ್ಕಾರವು ೨೦ ವಿದ್ಯಾರ್ಥಿ ಸಾಮರ್ಥ್ಯದ ಜನರಲ್ ನರ್ಸಿಂಗ್ ವರ್ಗ ಪ್ರಾರಂಭಿಸಲು ಅನುಮತಿ ನೀಡಿತು. ಈಗ ೧೫೦ ವಿದ್ಯಾರ್ಥಿಗಳ ಸಾಮರ್ಥ್ಯ ಹೊಂದಿದೆ. ಇದಕ್ಕೆ ಆಯ್.ಎಂ.ಸಿ ಅನುಮತಿ ಸಿಕ್ಕಿ. ಬೆಂಗಳೂರಿನ ರಾಜೀವಗಾಂಧಿ ಆರೋಗ್ಯ ವಿಶ್ವವಿದ್ಯಾಲಯವು ಬಿ.ಎಸ್.ಸಿ ನರ್ಸಿಂಗ್ ಕೋರ್ಸ್ ಪ್ರಾರಂಭಿಸಲು ಅನುಮತಿ ನೀಡಿದೆ.

**ಆಯುರ್ವೇದ ವೈದ್ಯಕೀಯ ಕಾಲೇಜು :**

ಗ್ರಾಮೀಣ ವಿದ್ಯಾರ್ಥಿಗಳಿಗೆ ಆಯುರ್ವೇದ ಶಿಕ್ಷಣ ನೀಡಲು, ೧೯೬೬ರಲ್ಲಿ ಆಯುರ್ವೇದ ವೈದ್ಯಕೀಯ ಕಾಲೇಜನ್ನು ಈ ಸಂಸ್ಥೆ ಪ್ರಾರಂಭಿಸಿತು. ಪ್ರತಿವರ್ಷ ೪೦ ವಿದ್ಯಾರ್ಥಿಗಳಿಗೆ ಅವಕಾಶ ಇದಕ್ಕೆ ಕರ್ನಾಟಕ ಸರ್ಕಾರ ಹಾಗೂ ರಾಜೀವ ಗಾಂಧಿ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯ ಹಾಗೂ

ದೆಹಲಿಯ ಸಿ.ಸಿ.ಆಯ್.ಎಮ್ ಮಾನ್ಯತೆ ನೀಡಿದೆ. ೪೧೦೦ ಔಷಧಿ ಸಸ್ಯಗಳ ಐದು ಎಕರೆ ವಿಸ್ತೀರ್ಣದಲ್ಲಿ ಆಯುರ್ವೇದ ಉದ್ಯಾನವನ್ನು ಅಭಿವೃದ್ಧಿ ಪಡಿಸಲಾಗಿದೆ. ಪ್ರಸ್ತುತ ಆಡಳಿತ ಮಂಡಳಿಯವರು, ೧೦ ಎಕರೆ ಭೂಮಿಯನ್ನು ಸಂಶೋಧನೆಗೆ ಹಾಗೂ ಆಯುರ್ವೇದ ಗಿಡಮೂಲಿಕೆಗಳಿಂದ ಔಷಧ ಪಡೆದು ಬಡರೋಗಿಗಳಿಗೆ ಶುಲ್ಕರಹಿತ ಚಿಕಿತ್ಸೆ ನೀಡುವ ಯೋಜನೆಯಲ್ಲಿದ್ದಾರೆ.

**ಆಯರ್ವೇದ ಆಸ್ಪತ್ರೆ :**

ಆಯುರ್ವೇದ ಆಸ್ಪತ್ರೆಯಲ್ಲಿ ವೈದ್ಯರು ಉತ್ಕೃಷ್ಟ ಮತ್ತು ತೃಪ್ತಿಕರ ಸೇವೆ ನೀಡುತ್ತಿದ್ದಾರೆ. ಇದರಿಂದ ಬಡವರು ತಮ್ಮ ಪ್ರದೇಶದಲ್ಲಿಯೇ ಉತ್ತಮ ವೈದ್ಯಕೀಯ ಸೇವೆ ಪಡೆಯಲು ಸಾಧ್ಯವಾಗಿದೆ. ಗ್ರಾಮೀಣ ಜನರಿಗೆ ಸೇವೆ ಸಲ್ಲಿಸಲು ಅನುಕೂಲಕರವಾಗುವಂತೆ, ಹಳ್ಳಿಗಳಾದ ಗೋಕಾಕದ ಅರಭಾವಿ, ಚಿಕ್ಕೋಡಿಯ ಕಬ್ಬೂರದಲ್ಲಿ ಆಸ್ಪತ್ರೆಗಳನ್ನು ತೆಗೆದು ಅಲ್ಲಿ ಪ್ರತಿವಾರ ಆಯುರ್ವೇದ ವೈದ್ಯರು ಭೇಟಿ ನೀಡಿ ರೋಗಿಗಳಿಗೆ ಚಿಕಿತ್ಸೆ ನೀಡುತ್ತಾರೆ.

ರೂ. ೩ ಕೋಟಿ ವೆಚ್ಚದಲ್ಲಿ ೧೨೦ ಹಾಸಿಗೆಗಳ ನೂತನ ಆಯುರ್ವೇದ ಆಸ್ಪತೆಯನ್ನು ನಿರ್ಮಿಸುವ ಯೋಜನೆ ರೂಪಿಸಲಾಗಿದೆ.

ರೂ. ೩ ಕೋಟಿ ವೆಚ್ಚದಲ್ಲಿ ನಿಸರ್ಗ ಚಿಕಿತ್ಸೆ ಮತ್ತು ಯೋಗ ಕೇಂದ್ರಗಳನ್ನು (೬೦ ಹಾಸಿಗೆ ಒಳಗೊಂಡಿರುವ) ಪ್ರಾರಂಭಿಸಲಾಗಿದೆ. ಕೇರಳದ ಪಂಚಕರ್ಮ ಪದ್ಧತಿಯ ಚಿಕಿತ್ಸೆಯನ್ನು ಆಸ್ಪತ್ರೆಯಲ್ಲಿ ನೀಡಲಾಗುತ್ತಿದೆ. ಇದು ಔಷಧರಹಿತ ಚಿಕಿತ್ಸೆಯಾಗಿದೆ. ತೀವ್ರತರ ರೋಗಗಳಿಗೂ ನಿಸರ್ಗ ಚಿಕಿತ್ಸೆ ನೀಡಲಾಗುತ್ತಿದೆ.

ನೈಸರ್ಗಿಕ ಚಿಕಿತ್ಸೆಗಳಾದ, ಸ್ಟೀಮಬಾತ್, ಮಡ್‌ಬಾತ್, ಹಿಪ್‌ಬಾತ್, ಘೂಟ ಬಾತ್, ಸ್ಪೈನಲ್ ಬಾತ್, ಎನಿಮಾ ಥೇರಿಪಿ, ಏರೋಬಿಕ್ಸ, ಟ್ರಾಮ ಪ್ಯಾಕ್, ಕೋಲನ ಇರ್ರಿಗೇಶನ್, ಹಾಗೂ ಇತರ ಹಲವು ಚಿಕಿತ್ಸೆಗಳನ್ನು ನೀಡಲಾಗುತ್ತದೆ. ಪೂರ್ಣ ಆರೋಗ್ಯ ಹೊಂದಲು ಯೋಗ ಹಾಗೂ ಧ್ಯಾನ ಚಿಕಿತ್ಸೆ ನೀಡುತ್ತಾರೆ. ಈಜುಕೊಳ ನಿರ್ಮಾಣ ಮಾಡಿ ಗ್ರಂಥಾಲಯ ಸೌಲಭ್ಯವನ್ನು ಕಲ್ಪಿಸಲಾಗಿದೆ. ಇಲ್ಲಿಯ ಕಾರಂಜಿಯು ಇನ್ನೊಂದು ಆಕರ್ಷಣೆಯಾಗಿದೆ. ಒಟ್ಟು ಹಾಸಿಗೆಗಳಲ್ಲಿ ೧/೩ ರಷ್ಟನ್ನು ಬಡಜನರ ಚಿಕಿತ್ಸೆಗಾಗಿ ಮೀಸಲಿಡಲಾಗಿದೆ. ಸೂಕ್ತವಾದ ವ್ಯಕ್ತಿಗಳಿಗೆ ಶೇಕಡಾ ೨೦ ರಷ್ಟು ರಿಯಾಯತಿಯನ್ನು ನೀಡಲಾಗುತ್ತಿದೆ.

**ಸಹಕಾರಿ ಭವನ**

ಸಹಕಾರಿ ಅಧಿಕಾರಿಗಳ ಬ್ಯಾಂಕುಗಳ, ಸಕ್ಕರೆ ಕಾರ್ಖಾನೆಗಳ, ಹಾಗೂ ಸಾರ್ವಜನಿಕರ ದೇಣಿಗೆಗಳಿಂದ ಸ್ವೀಕರಿಸಿದ ಹಣದಿಂದ ಸಹಕಾರಿ ಭವನವನ್ನು ನಿರ್ಮಾಣಮಾಡಲಾಗಿದೆ. ೧೬.೫೦ ಲಕ್ಷ ರೂಗಳಲ್ಲಿ ನಿರ್ಮಿಸಲಾದ ಎರಡು ಅಂತಸ್ತುಗಳ ಈ ಕಟ್ಟಡದಲ್ಲಿ ೨೨ ಕೊಠಡಿಗಳಿವೆ.

**ವೃತ್ತಿ ನಿರತ ಮಹಿಳೆಯರ ವಸತಿಗೃಹ :**

೩೦ ಲಕ್ಷರೂಪಾಯಿಗಳಲ್ಲಿ ವೃತ್ತಿ ನಿರತ ಮಹಿಳೆಯರ ವಸತಿಗೃಹ ನಿರ್ಮಾಣಗೊಂಡಿದ್ದು, ಇಲ್ಲಿ ಈಗ ೬೦ ಮಹಿಳೆಯರು ವಾಸವಾಗಿದ್ದು, ಅವರ ಮಕ್ಕಳಿಗಾಗಿ 'ಡೇ'ಕೇರ್ ಕೇಂದ್ರದ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.

೧೯೯೧ರಲ್ಲಿ ವೈದ್ಯಕೀಯ ಸಂಶೋಧನಾ ಕೇಂದ್ರವನ್ನು ಪ್ರಾರಂಭಿಸಲಾಯಿತು. ವಿವಿಧ ರೋಗಗಳಿಗೆ ಸಂಬಂಧಿಸಿದಂತೆ ಸಂಶೋಧನಾ ಯೋಜನೆಗಳನ್ನು ಕೈಗೊಳ್ಳಲು, ಜಿ.ಜಿ ಸಹಕಾರಿ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರವು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲ್ಪಟ್ಟಿದೆ. ಇಲ್ಲಿ ವಿಶೇಷವಾಗಿ ಮೂಲವ್ಯಾಧಿ ತಡೆಗಟ್ಟುವ ಸಂಶೋಧನೆ ನಡೆಯುತ್ತಿದೆ.

**ರೋಗಿಗಳಿಗೆ ಸೌಲಭ್ಯಗಳು :**

ಬಡ ರೋಗಿಗಳಿಗೆ ಉಚಿತ ಆಹಾರವನ್ನು ನೀಡಲಾಗುತ್ತದೆ. "ಶ್ರೀ ಜಗದ್ಗುರು ಗಂಗಾಧರ ಮೂರುಸಾವಿರಮಠ ಬಡರೋಗಿಗಳ ಪ್ರಸಾದ ನಿಲಯ"ವು ೧೯೯೩ರಲ್ಲಿ ಪ್ರಾರಂಭವಾಯಿತು. ಇಲ್ಲಿ, ಕ್ಷಯ (ಟಿಬಿ) ರೋಗಿಗಳಿಗೆ ಉಚಿತ ಊಟದ ವ್ಯವಸ್ಥೆ ಮಾಡಲಾಗಿದೆ.

**ಆಡಳಿತ ರಚನಾ ವಿನ್ಯಾಸ :**

ಈ ಸರ್ಕಾರೇತರ ಸಂಘಟನೆಯ ರಚನಾ ಪದ್ಧತಿ ಹೀಗಿದೆ. ಎಲ್ಲ ವೈದ್ಯಕೀಯ ಮತ್ತು ವೈದ್ಯಕಿಯೇತರ ಸಿಬ್ಬಂದಿಯವರು ಸಿಎಮ್‌ಓ ಅವರಿಗೆ ವರದಿಮಾಡಿಕೊಳ್ಳುತ್ತಾರೆ. ಸಹಕಾರ ಸಂಘಗಳ ಕಾನೂನಿನ ಪ್ರಕಾರ, ನಿರ್ದೇಶಕ ಮಂಡಳಿ ಇದ್ದು, ನೀತಿಗಳ ನಿರ್ಮಾಣದಲ್ಲಿ ಮುಖ್ಯಪಾತ್ರವಹಿಸುತ್ತಾರೆ. ಪ್ರತಿ ತಿಂಗಳಿಗೊಮ್ಮೆ ಸಾಮಾನ್ಯ ಮಂಡಳಿಯ ಸಭೆ ಜರುಗುತ್ತವೆ. ಮತ್ತು ಪ್ರಮುಖ ನಿರ್ಧಾರಗಳನ್ನು ಕೈಗೊಳ್ಳುತ್ತಾರೆ.

**ಜೆ.ಜಿ ಸಹಕಾರಿ ಸಂಸ್ಥೆಯ ಸಂಘಟನಾ ವ್ಯವಸ್ಥೆ :**



*ಕೋಷ್ಟಕ – ೪.೧.೧ : ಜೆ.ಜಿ.ಸಹಕಾರಿ ಆಸ್ಪತೆ ಘಟಪ್ರಭಾದವರಿಂದ ನಡೆಸಲ್ಪಡುತ್ತಿರುವ ಶಿಕ್ಷಣ ಸಂಸ್ಥೆಗಳು.*

| ಅ.ನಂ | ಸಂಸ್ಥೆ ಹೆಸರು | ಸ್ಥಳ |
|---|---|---|
| ೧ | ಶ್ರೀ ಬಿ.ಎ.ಪಾಟೀಲ ಆಯುರ್ವೇದ ಮೆಡಿಕಲ್ ಕಾಲೇಜು | ಘಟಪ್ರಭಾ |
| ೨ | ಪೋಸ್ಟ –ಗ್ರಾಜ್ಯುವೇಟ್ ಆಯುರ್ವೇದ ಮೆಡಿಕಲ್ ಕಾಲೇಜು | ಘಟಪ್ರಭಾ |
| ೩ | ಎ.ಎನ್.ಎಮ್ ನರ್ಸಿಂಗ್ ಸ್ಕೂಲ್ | ಘಟಪ್ರಭಾ |
| ೪ | ಜಿ.ಎನ್.ಎಮ್ ನರ್ಸಿಂಗ್ ಸ್ಕೂಲ್ | ಘಟಪ್ರಭಾ |
| ೫ | ಕಾಲೇಜ್ ಆಫ್ ನರ್ಸಿಂಗ್ | ಘಟಪ್ರಭಾ |
| ೬ | ಶ್ರೀಮತಿ ಭೋಪಾಳಪುರಮಠ ನಿಸರ್ಗ ಚಿಕಿತ್ಸೆ ಮತ್ತು ಯೋಗ ಕೇಂದ್ರ | ಘಟಪ್ರಭಾ |
| ೭ | ಶಿಶುಪಾಲನಾ ಕೇಂದ್ರ | ಘಟಪ್ರಭಾ |
| ೮ | ವೃತ್ತಿ ನಿರತ ಮಹಿಳೆಯರ ವಸತಿ ಗೃಹ | ಘಟಪ್ರಭಾ |
| ೯ | ಶ್ರೀ ಜಗದ್ಗುರು ಡಾ. ಗಂಗಾಧರ ಮೂರುಸಾವಿರ ಮಠ ಬಡರೋಗಿಗಳ ಪ್ರಸಾದ ನಿಲಯ | ಘಟಪ್ರಭಾ |

ಇಂದು ಈ ಸಂಸ್ಥೆ ಅತ್ಯಾಧುನಿಕ ಸೌಲಭ್ಯವುಳ್ಳ ಬೃಹತ್ ಸಹಕಾರಿ–ಆಸ್ಪತ್ರೆಯಾಗಿ ಹೊರಹೊಮ್ಮಿದೆ. ಜಾತಿ, ಧರ್ಮಗಳ ಯಾವುದೇ ಭೇದ–ಭಾವ ವಿಲ್ಲದೆ ಬಡವರಿಗೆ ಆರೋಗ್ಯ ಸೇವೆ ಸಲ್ಲಿಸುತ್ತಿದೆ. 'ಲಾಭ–ನಷ್ಟ ಇಲ್ಲದ' ಸಿದ್ಧಾಂತದ ತಳಹದಿಯ ಮೇಲೆ ಕಾರ್ಯ ನಿರ್ವಹಿಸಿ ಉತ್ತಮ ಸಾಧನೆಗೈದಿದೆ. ೨೦೦೪ರ ಕಿತ್ತೂರು ಉತ್ಸವದಲ್ಲಿ ಅತ್ಯುತ್ತಮ ಸಹಕಾರಿ ಆಸ್ಪತ್ರೆಯೆಂದು ಪಶಸ್ತಿ ಪಡೆದಿದೆ. ಆರೋಗ್ಯ ರಕ್ಷಣೆಯಲ್ಲಿ ಪಂಚಕರ್ಮ ಚಿಕಿತ್ಸೆಯನ್ನು ಪ್ರಚಾರಗೊಳಿಸಲಾಗುತ್ತಿದೆ. ಇದಕ್ಕೆ ೫ ಎಕರೆ ಗಿಡಮೂಲಿಕೆಗಳ ಉದ್ಯಾನವನವಿದ್ದು, ಇದರಲ್ಲಿ ಆಯುರ್ವೇದ ಚಿಕಿತ್ಸೆಗೆ ಬೇಕಾದ ಔಷಧಿ ಸಸ್ಯಗಳಿವೆ.

**ಸಂಸ್ಥೆಯ ಇತರ ಚಟುವಟಿಕೆಗಳು :**

ಆರೋಗ್ಯದ ಸೌಕರ್ಯಗಳನ್ನು ನೀಡುವದರ ಜೊತೆಗೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಆರೋಗ್ಯ ತಿಳುವಳಿಕೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಆರೋಗ್ಯದ ಬಗ್ಗೆ ಮೌಢ್ಯತೆಯನ್ನು ತಪ್ಪು ತಿಳುವಳಿಕೆಯನ್ನು ಹೊಡೆದೋಡಿಸಿ, ಆರೋಗ್ಯದ ಬಗ್ಗೆ ಮಾಹಿತಿ ನೀಡುವ ಮುಖ್ಯ ಉದ್ದೇಶಗಳನ್ನು ಹೊಂದಿದೆ.

**ಕುಟುಂಬ ಕಲ್ಯಾಣ ಕಾರ್ಯಕ್ರಮ :**

ತಾಯಿ ಹಾಗೂ ಮಕ್ಕಳ ಆರೋಗ್ಯದ ಕಾಳಜಿ, ಈ ಸಂಘದ ಕಾರ್ಯ ಯೋಜನೆಯ ಪ್ರಮುಖ ಅಂಶಗಳಾಗಿವೆ. ನಿಮ್ನ ವರ್ಗದ ತಾಯಿ ಹಾಗೂ ಮಕ್ಕಳಿಗೆ, ಗರ್ಭಿಣಿಯರಿಗೆ ಉಚಿತ

ವೈದ್ಯಕೀಯ ಸೌಲಭ್ಯವೊದಗಿಸುವ ಉದ್ದೇಶವನ್ನು ಈ ಸಂಸ್ಥೆ ಹೊಂದಿದೆ. ಮಕ್ಕಳ ಹಾಗೂ ತಾಯಂದಿರ ಆರೋಗ್ಯ ಕಾಪಾಡುವುದು ಸರ್ಕಾರದ ಆದ್ಯತೆ. ಪ್ರಸ್ತುತ ಸಂಘವು ಆರ್‌ಸಿಎಚ್ ಯೋಜನೆಯಡಿಯಲ್ಲಿ ಗೋಕಾಕ ಹಾಗೂ ಹುಕ್ಕೇರಿ ತಾಲೂಕುಗಳಲ್ಲಿರುವ ಹಳ್ಳಿಗಳ ೬೦,೦೦೦ ಜನರನ್ನು ಸೇವೆಗೆ ಆಯ್ಕೆಮಾಡಿಕೊಂಡಿದೆ.

**ಈ ಯೋಜನೆಯ ಮುಖ್ಯ ಉದ್ದೇಶಗಳು :**

೧. ಹದಿಹರೆಯದವರಿಗೆ ಲೈಂಗಿಕ ಶಿಕ್ಷಣ ನೀಡುವುದು, ಮದುವೆಯ ವಯಸ್ಸು, ಮಕ್ಕಳ ಜನನದ ಕುರಿತು ಮಾಹಿತಿ ನೀಡುವುದು.

೨. ಆರ್‌ಟಿಅಯ್, ಕುಟುಂಬ ಕಲ್ಯಾಣ ಹಾಗೂ ಮಕ್ಕಳ ಜನನದ ನಡುವಿನ ಅಂತರದ ಬಗ್ಗೆ ಅರಿವು ಮೂಡಿಸುವುದು.

೩. ನವದಂಪತಿಗಳಲ್ಲಿ ಆಂಟಿನಾಟೆಲ್ ಮತ್ತು ಪೋಸ್ಟನ್ಯಾಟಲ್ ಕಾಳಜಿ ಬಗ್ಗೆ ಶಿಕ್ಷಣ ನೀಡುವುದು.

೪. ಮಕ್ಕಳಿಗೆ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟುವ ಲಸಿಕೆ ಹಾಕುವುದು.

೫. ಸಂತಾನ ಶಸ್ತ್ರ ಚಿಕಿತ್ಸೆ ಮಾಡಿಕೊಳ್ಳುವಂತೆ ಅರ್ಹ ದಂಪತಿಗಳನ್ನು ಪ್ರೇರೇಪಿಸುವುದು.

೬. ಕಾಂಡೋಮ್ ಪೂರೈಕೆ, ಓರಲ್ ಪಿಲ್ಸ, ಓಆರ್‌ಎಸ್ ಪಾಕೀಟುಗಳನ್ನು ಪೂರೈಸುವುದು, ಲ್ಯಾಪ್ರೋಸ್ಕೋಪಿಕ್ ಶಸ್ತ್ರ ಚಿಕಿತ್ಸೆಯ ಶಿಬಿರಗಳನ್ನು ಏರ್ಪಡಿಸುವುದು.

೭. ಎ.ಎನ್.ಸಿ ಕೇಸುಗಳನ್ನು ದಾಖಲಿಸುವುದು.

೮. ಎ.ಎನ್.ಸಿ ಪರೀಕ್ಷೆ, ತಾಯಿ ಹಾಗೂ ಮಗುವಿಗೆ ಲಸಿಕೆ ಹಾಕುವುದು.

೯. ಸುರಕ್ಷಿತ ಹೆರಿಗೆಯ ವ್ಯವಸ್ಥೆ ಕಲ್ಪಿಸುವುದು.

ಈ ಮೇಲಿನ ಎಲ್ಲ ಯೋಜನೆಗಳಲ್ಲಿ ಶೇಕಡಾ ೧೦೦ ರಷ್ಟು ಯಶಸ್ಸನ್ನುಗಳಿಸಿದೆ. ೨೦೦೦ರಲ್ಲಿ ಪ್ರಾರಂಭವಾದ ಈ ಯೋಜನೆಗಾಗಿ ರೂ. ೩೮,೬೩,೦೦೦ ಸರ್ಕಾರದ ಮತ್ತು ಸರಕಾರೇತರ ಮೂಲಗಳಿಂದ ಧನಸಹಾಯವನ್ನು ಬಳಸಿಕೊಳ್ಳಲಾಗಿದೆ.

**ಏಡ್ಸ್ ಅರಿವು ಕಾರ್ಯಕ್ರಮ:**

ಗೋಕಾಕ ತಾಲೂಕಿನ ಅರಭಾವಿ, ಮಲ್ಲಾಪೂರ, ಧೂಪದಾಳ, ಶಿಂಧಿಕುರಬೆಟ್, ಪಾಮಲದಿನ್ನಿಗಳಲ್ಲಿ ಏಡ್ಸ್ ಕುರಿತು ಜಾಗೃತಿ ಮೂಡಿಸಿ ಅದರ ನಿಯಂತ್ರಣ ಕ್ರಮಗಳನ್ನು ಕೈಗೊಂಡಿದೆ.

ಬೆಳಗಾವಿಯ ಕಾಡಾ, ಮಲಪ್ರಭಾ ಮತ್ತು ಘಟಪ್ರಭಾ ಯೋಜನೆ ಅಡಿಯಲ್ಲಿ ಆಯ್.ಇ.ಸಿ ಕಾರ್ಯಕ್ರಮಗಳನ್ನು ರೂಪಿಸಿದೆ. ಬೀದಿನಾಟಕ, ಟಿವಿ ಚಿತ್ರ ಪ್ರದರ್ಶನ, ಮಾಹಿತಿ ಹಾಗೂ ಅರಿವು ಕಾರ್ಯಕ್ರಮ, ಪುಸ್ತಕ ಹಂಚುವುದು, ಗೋಡೆ ಬರಹ, ಜಾಥಾ, ಪ್ರದರ್ಶನ ರ್‍ಯಾಲಿಗಳನ್ನು ಹಮ್ಮಿಕೊಂಡಿದೆ. ಸಂಪನ್ಮೂಲ ವ್ಯಕ್ತಿಗಳನ್ನು ಆಮಂತ್ರಿಸಿ, ಏಡ್ಸ್ ಬಗ್ಗೆ ವಿವರಿಸುವುದು ಹಾಗೂ ಗ್ರಾಮಗಳ ಮಟ್ಟದಲ್ಲಿ ಕಾರ್ಯಕರ್ತರನ್ನು ನೇಮಿಸಿ, ಅವರು ತಮ್ಮ ಕ್ಷೇತ್ರಗಳಲ್ಲಿ ೨-೩ ಸುತ್ತುಗಳಲ್ಲಿ ಮಾಹಿತಿ ನೀಡುವ ಕಾರ್ಯಕ್ರಮ ಏರ್ಪಡಿಸುವುದು. ಈ ಕಾರ್ಯಕ್ರಮದಲ್ಲಿ ಏಡ್ಸ್ ಬಗ್ಗೆ ಅರಿವು, ತಡೆಗಟ್ಟುವ ವಿಧಾನ, ಲಕ್ಷಣಗಳು, ಎಚ್.ಐ.ವಿಯ ಪ್ರಮುಖ ಕಾರಣಗಳು, ಎಸ್.ಟಿ.ಡಿ ಹರಡುವ ಸಮಸ್ಯೆಗಳು, ಲೈಂಗಿಕ ಸಮಸ್ಯೆಗಳು, ಆರೋಗ್ಯಪೂರ್ಣ ಲೈಂಗಿಕತೆ, ಕಾಂಡೋಮ್ ಬಳಕೆ ಮೊದಲಾದ ಚಟುವಟಿಕೆಗಳನ್ನು ಒಳಗೊಂಡಿವೆ. ಇದನ್ನು ಹೊರತುಪಡಿಸಿ ಕಾಂಡೋಮ್‌ಗಳನ್ನು ಸಾಧ್ಯವಾದೆಡೆಗಳಲ್ಲಿ ಸುಲಭವಾಗಿ ವಿತರಿಸುವ ವ್ಯವಸ್ಥೆ ಮಾಡಲಾಗಿದೆ.

ಈ ಎಲ್ಲ ಮೂಲಭೂತ ಸೌಕರ್ಯ ಹಾಗೂ ಸೌಲಭ್ಯಗಳನ್ನು ಜೆ.ಜಿ.ಸಹಕಾರಿ ಆಸ್ಪತ್ರೆ ಕಳೆದ ೫ ವರ್ಷಗಳಿಂದ ನೀಡುತ್ತಾ ಬಂದಿದೆ.

**ಕಣ್ಣಿನ ಆರೋಗ್ಯದ ಅರಿವು ಹಾಗೂ ಚಿಕಿತ್ಸೆ ಕಾರ್ಯಕ್ರಮ :**

ಜೆ.ಜಿ.ಸಹಕಾರಿ ಆಸ್ಪತ್ರೆಯ ಚಟುವಟಿಕೆ ಕಣ್ಣು ಪರೀಕ್ಷೆಯ ಅರಿವು ಹಾಗೂ ಚಿಕಿತ್ಸೆ ಕಾರ್ಯಕ್ರಮವು ಮಹತ್ವದ್ದಾಗಿದೆ. ಇದನ್ನು ಸಾಧಿಸಲು ಆಸ್ಪತ್ರೆಯು ನಿರಂತರವಾಗಿ ಶ್ರಮಿಸುತ್ತಿದೆ.

ಗ್ರಾಮೀಣ ಪ್ರದೇಶದ ಜನರಲ್ಲಿ ಬರಬಹುದಾದ ತೀವ್ರ ಅಂಧತ್ವವನ್ನು ತಡೆಗಟ್ಟಲು ಕಣ್ಣು ಪರೀಕ್ಷೆ ಹಾಗೂ ಚಿಕಿತ್ಸಾ ಶಿಬಿರಗಳನ್ನು ನಡೆಸುತ್ತಿದೆ. ಕಳೆದ ೫ ವರ್ಷಗಳಲ್ಲಿ ಘಟಪ್ರಭಾದ ಜೈಂಟ್ಸಗ್ರುಪ್, ಹೆಲ್ಪೇಜ್ ಇಂಡಿಯಾ ಮತ್ತು ಜಿಲ್ಲಾ ಅಂಧತ್ವ ನಿವಾರಣಾ ಸಂಸ್ಥೆಗಳ ಸಹಯೋಗದಲ್ಲಿ ಹಲವಾರು ಶಿಬಿರಗಳನ್ನು ಏರ್ಪಡಿಸಲಾಗಿದೆ. ಸುಮಾರು ೨೨೦೦ ಜನರ ಕಣ್ಣು ಪರೀಕ್ಷೆ ಮಾಡಿ, ೫೦೦ ಜನರಿಗೆ ಕ್ಯಾಟರೈಟ ಚಿಕಿತ್ಸೆಯನ್ನು ನೀಡಲಾಗಿದೆ.

ಆರೋಗ್ಯ ಕಾಪಾಡುವ ಉದ್ದೇಶಕ್ಕಾಗಿ, ಹಲವಾರು ಯೋಜನೆಗಳನ್ನು ಹಮ್ಮಿಕೊಳ್ಳುತ್ತಿದ್ದು, ದಂತ ಪರೀಕ್ಷಾ ಶಿಬಿರಗಳನ್ನು ಏರ್ಪಡಿಸಿದೆ. ದಂತ ಸಮಸ್ಯೆಯ ಸುಮಾರು ೨೦೦೦ ರೋಗಿಗಳನ್ನು ಪರೀಕ್ಷಿಸಿದ್ದು,

**ಲಸಿಕೆ ಕಾರ್ಯಕ್ರಮ :**

ಜೆ.ಜಿ.ಸಹಕಾರಿ ಆಸ್ಪತ್ರೆಯ ಪ್ರಮುಖ ಕಾರ್ಯಕ್ರಮದಲ್ಲಿ ಲಸಿಕೆ ಕಾರ್ಯಕ್ರಮ ಮಹತ್ವದ್ದಾಗಿದೆ. ಈ ಕಾರ್ಯಕ್ರಮದ ಮುಖ್ಯ ಉದ್ದೇಶವು ಬ್ರೂಣಹತ್ಯೆ ತಡೆಗಟ್ಟುವುದು ಹಾಗೂ ಶಿಶುಮರಣ

ಪ್ರಮಾಣವನ್ನು ಕಡಿಮೆಗೊಳಿಸುವುದಾಗಿದೆ. ಮುಖ್ಯವಾಗಿ ಗರ್ಭಿಣಿ ಮಹಿಳೆ ಹಾಗೂ ಹಸುಳೆಗಳನ್ನು ಗಮನದಲ್ಲಿಟ್ಟು ರೂಪಿಸಲಾಗಿರುವ ಕಾರ್ಯಕ್ರಮವಿದು. ಹಲವಾರು ಶಿಬಿರಗಳನ್ನು ಆಯೋಜಿಸಿ ಶಿಶು ಮರಣ ಹಾಗೂ ಗರ್ಭಿಣಿ ಮಹಿಳೆಯರ ಆರೋಗ್ಯವನ್ನು ರಕ್ಷಿಸಲಾಗಿದೆ.

**ಆರೋಗ್ಯ ಮೇಳ :**

ಗ್ರಾಮೀಣ ಜನಸಮುದಾಯದಲ್ಲಿ ಆರೋಗ್ಯ ಶಿಕ್ಷಣದ ಕೊರತೆಯಿದೆ. ಅವರಲ್ಲಿ ಅನೇಕರು ಪೌಷ್ಠಿಕತೆಯಿಂದ ನರಳುತ್ತಿದ್ದಾರೆ. ಅವರಲ್ಲಿ ಬಹಳಷ್ಟು ಜನರಿಗೆ ಪೌಷ್ಠಿಕತೆಯ ಅರ್ಥ ತಿಳಿಯದು. ಹಲವಾರು ರೋಗಗಳಿಗೆ ಸೂಕ್ತ ಪರೀಕ್ಷೆ ಹಾಗೂ ಚಿಕಿತ್ಸೆ ಇಲ್ಲದೆ ನೆರಳುವುದು. ಈ ಎಲ್ಲ ಸಮಸ್ಯೆಗಳಿಗೆ ಈ ಸಂಸ್ಥೆ ರೂಪಿಸಿದ ಎಕೈಕ ಪರಿಹಾರ ಆರೋಗ್ಯಮೇಳ. ಆರೋಗ್ಯ ಮೇಳವೆಂದರೆ, ಆರೋಗ್ಯದ ಬಗ್ಗೆ ಅರಿವು ಮೂಡಿಸುವ ಗ್ರಾಮೀಣ ಜಾತ್ರೆ ಈ ಸರ್ಕಾರೇತರ ಸಂಘವು ಈ ದಿಶೆಯಲ್ಲಿ ಒಂದು ಹೊಸ ಪರಿಕಲ್ಪನೆಯನ್ನೇ ಹುಟ್ಟುಹಾಕಿದೆ. ಒಂದೇ ಸೂರಿನಡಿಯಲ್ಲಿ ಎಲ್ಲ ಆರೋಗ್ಯ ಸೇವೆಗಳು ಲಭ್ಯವಾಗುವ ಬೃಹತ್ ಕಾರ್ಯಯೋಜನೆ ರೂಪಿಸಿದೆ.

ಆರೋಗ್ಯ ಮೇಳದಲ್ಲಿ, ಮುಕ್ತ ಆರೋಗ್ಯ ಪರೀಕ್ಷೆ, ಆರೋಗ್ಯ ಸಮಸ್ಯೆಗಳ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಿರೂಪಿಸಲಾಗುತ್ತದೆ. ಗೋಕಾಕ ಮತ್ತು ಹುಕ್ಕೇರಿ ತಾಲೂಕುಗಳಲ್ಲಿ ರೂ ೫,೪೩,೮೪೦ ಸರ್ಕಾರದ ಸಹಾಯಧನದಿಂದ (ಭಾರತ ಸರ್ಕಾರದ, ಕುಟುಂಬ ಕಲ್ಯಾಣ ಕೇಂದ್ರ ಸಚಿವಾಲಯದ, (ಇಂಡಿಯನ್ ಸಿಸ್ಟಮ್ಸ್ ಆಫ್ ಹೆಲ್ಥ್ ನವದೆಹಲಿ) ಸಹಯೋಗ) ಎರಡು ಆರೋಗ್ಯ ಮೇಳಗಳನ್ನು ಏರ್ಪಡಿಸಲಾಗಿದೆ. ಆರೋಗ್ಯ ಮೇಳದ ಪ್ರಮುಖ ಉದ್ದೇಶಗಳೆಂದರೆ:

೧. ಸುತ್ತಲಿನ ಗ್ರಾಮಗಳ ಸಮುದಾಯ ಆರೋಗ್ಯದ ಅರಿವು ಮೂಡಿಸುವ ಯೋಜನೆ.

೨. ಆಯುರ್ವೇದದ ಬಗ್ಗೆ ಕಾರ್ಯಾಗಾರ ಹಾಗೂ ತರಬೇತಿ.

೩. ಹೋಮಿಯೊಪತಿ ಜನಪ್ರಿಯಗೊಳಿಸುವುದು.

೪. ಪ್ರಾಥಮಿಕ ಶಾಲಾ ಮಕ್ಕಳಿಗೆ ಯೋಗ ತರಗತಿಗಳು.

೫. ಔಷಧ ಸಸ್ಯಗಳ ವಿತರಣೆ ಹಾಗೂ ಆಯುರ್ವೇದವನ್ನು ಜನಪ್ರಿಯಗೊಳಿಸುವುದು.

ಈ ಮೇಲಿನ ಉದ್ದೇಶಗಳನ್ನು ಸಾಧಿಸಲು, ಸಂಘವು ಈ ವರೆಗೆ ಎರಡು ಆರೋಗ್ಯ ಮೇಳಗಳನ್ನು ಆಯೋಜಿಸಿದೆ. ಈ ಚಟುವಟಿಕೆಗಳ ವಿವರಗಳು ಈ ಕೆಳಗಿನಂತಿವೆ.

ಆಯುರ್ವೇದ ಪದ್ಧತಿಯನ್ನು ಜನಮಾನ್ಯಗೊಳಿಸಿತು, ಆಯುರ್ವೇದದ ಜ್ಞಾನ ನೀಡಲು ಸಂಘವು ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸಿದೆ. ಸಾಮಾನ್ಯ ರೋಗಿಗಳಿಗೆ ಚಿಕಿತ್ಸೆ ನೀಡಲು

ಸ್ಥಳೀಯ ಔಷಧಿಗಳನ್ನು ಬಳಸುವ ತರಬೇತಿಗಳನ್ನು ಸಂಘಟಿಸಿದೆ. ಇದುವರೆಗೆ ೮ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ೪೦೦ ಕ್ಕಿಂತ ಅಧಿಕ ಜನರನ್ನು ಅಯುರ್ವೇದದೆಡೆಗೆ ಸೆಳೆದಿದೆ. ಅವರಿಗೆ ವಿಶೇಷ ತರಬೇತಿ ನೀಡಿ, ಆಯುರ್ವೇದ ಪ್ರಚಾರಕ್ಕೆ ಚಾಲನೆ ನೀಡಿದೆ.

ಆರೋಗ್ಯದ ಔಷಧಿ ಸಸಿಗಳನ್ನು ಬೆಳೆಸುವ ತರಬೇತಿ ಕಾರ್ಯಕ್ರಮವನ್ನು ಜೆ.ಜಿ.ಸಹಕಾರಿ ಆಸ್ಪತ್ರೆ ಹಮ್ಮಿಕೊಂಡಿತ್ತು. ಇದು ಗೋಕಾಕ ಹಾಗೂ ಚಿಕ್ಕೋಡಿ ತಾಲೂಕಿನ ಆಯ್ದ ೨೪ ಗ್ರಾಮಗಳ ವ್ಯಾಪ್ತಿಯನ್ನು ಒಳಗೊಂಡಿತ್ತು. ೮೨೦ ಔಷಧೀಯ ಸಸ್ಯಗಳನ್ನು ೪೮೦ ರೈತರಿಗೆ ವಿತರಿಸಿ ಹೊಲಗಳಲ್ಲಿ ಬೆಳೆಸುವಂತೆ ಪ್ರೇರೆಪಿಸಿದೆ.

ಪ್ರಾಥಮಿಕ ಶಾಲಾ ಮಕ್ಕಳಿಗೆ ಯೋಗ ತರಬೇತಿಯನ್ನು ಏರ್ಪಡಿಸುತ್ತಿದೆ. ಹುಕ್ಕೇರಿ ಮತ್ತು ಗೋಕಾಕ ತಾಲೂಕುಗಳಲ್ಲಿ ೨೪ ಪ್ರಾಥಮಿಕ ಶಾಲೆಗಳಲ್ಲಿ ಈ ತರಬೇತಿ ಕಾರ್ಯಕ್ರಮವನ್ನು ನಡೆಸಲಾಗಿದೆ. ಅಲ್ಲಿ ಎಸ್‌ಓಡಿ ತರಬೇತಿ ವರ್ಗಗಳನ್ನು ನಡೆಸಿ ಸುಮಾರು ೧೨೦೦ ಶಾಲಾಮಕ್ಕಳಿಗೆ ಯೋಗ ತರಬೇತಿ ನೀಡಿದೆ.

ಈ ಸಂಸ್ಥೆ ರಾಜ್ಯದ ಹೊರಗೂ ತನ್ನ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಗ್ರಾಮೀಣ ಜನರಲ್ಲಿ ಆರೋಗ್ಯದ ಅರಿವು ಮೂಡಿಸುವ ಕಾರ್ಯಕ್ರಮಗಳಲ್ಲಿ ಮುಖ್ಯವಾಗಿ ಎರಡು ವಿಧಗಳು. ಒಂದು ಬಾಹ್ಯ ಹಾಗೂ ಇನ್ನೊಂದು ಆಂತರಿಕ ಕಾರ್ಯಯೋಜನೆ. ಕೊಲ್ಹಾಪೂರ, ಸಾತಾರಾ, ಕರಾಡ, ಸಾಂಗ್ಲಿ, ಪುಣೆ, ತಿರುಪತಿ, ಮೊದಲಾದ ಹೊರರಾಜ್ಯದ ಪ್ರಮುಖ ಪಟ್ಟಣಗಳಲ್ಲಿ ಹಾಗೂ ಬಳ್ಳಾರಿ, ದಾವಣಗೆರೆಯಂಥ ರಾಜ್ಯದ ಪ್ರಮುಖ ನಗರಗಳಲ್ಲಿ ಬಾಹ್ಯ ಕಾರ್ಯಕ್ರಮಗಳನ್ನು ಏರ್ಪಡಿಸಿದೆ. ಈ ಕಾರ್ಯಯೋಜನೆಗಳ ಮುಖ್ಯ ಉದ್ದೇಶವು ಯೋಗ ಮತ್ತು ನಿಸರ್ಗ ಚಿಕಿತ್ಸೆಗಳ ಬಗ್ಗೆ ಅರಿವು ಮೂಡಿಸುವುದು ಹಾಗೂ ರೋಗಗಳಿಗೆ ಸೂಕ್ತ ಚಿಕಿತ್ಸೆ ನೀಡುವುದಾಗಿದೆ.

ಸಂಘವು ರಕ್ತದಾನ, ವಿಶೇಷ ನರ್ಸಿಂಗ ತರಬೇತಿ, ಸಿಹಿ ಮೂತ್ರ ರೋಗ ಪರೀಕ್ಷೆ, ಹೃದಯ ಬಡಿತ ಪರೀಕ್ಷೆ, ಬಿಪಿ ಪರೀಕ್ಷೆ ಹಾಗೂ ಸಾಮಾನ್ಯ ಆರೋಗ್ಯ ತಪಾಸಣೆ ಶಿಬಿರಗಳನ್ನು ಹಮ್ಮಿಕೊಂಡಿದೆ.

**ಇತರ ಸಂಸ್ಥೆಗಳೊಂದಿನ ಸಹಕಾರ ಮತ್ತು ಸಹಯೋಗ :**

ಯೋಜನೆಗಳನ್ನು ಕಾರ್ಯರೂಪಕ್ಕಿಳಿಸುವಲ್ಲಿ ಜೆ.ಜಿ.ಸಹಕಾರಿ ಸಂಘವು ಭಾರತ ಸರ್ಕಾರ ಮತ್ತು ಕರ್ನಾಟಕ ಸರ್ಕಾರಗಳ ಸಹಯೋಗ ಹೊಂದಿದೆ. ಸರ್ಕಾರೇತರ ಸಂಘಗಳಾದ ಹೆಲ್ಪೇಜ್ ಇಂಡಿಯ, ಬರ್ಡ್ಸ್ ನಾಗನೂರು, ಜೈಂಟ್ಸ್ ಗ್ರುಪ್ ಆಫ್ ಘಟಪ್ರಭಾ, ಕೆ.ಎಲ್.ಇ ಹಾಸ್ಪಿಟಲ್ ಬೆಳಗಾವಿ, ಪಿ.ಎಮ್.ನಾಡಗೌಡಾ ಮೆಮೋರಿಯಲ್ ಡೆಂಟಲ್ ಹಾಸ್ಪಿಟಲ್ ಬಾಗಲಕೋಟೆ ಮತ್ತು

ಇತರ ಸ್ಥಳೀಯ ಪಂಚಾಯತಗಳ ಸಹಯೋಗದೊಂದಿಗೆ ವಿಶೇಷ ಜನಪರ ಕಾರ್ಯಕ್ರಮಗಳನ್ನು ಯೋಜಿಸಿದೆ.

ಈ ರೀತಿಯಾಗಿ ಜೆ.ಜಿ.ಸಹಕಾರಿ ಆಸ್ಪತ್ರೆಯು ಗ್ರಾಮೀಣ ಭಾಗದಲ್ಲಿ ಜನರ ಆರೋಗ್ಯದ ಬಗ್ಗೆ ವಿಶೇಷ ಕಾಳಜಿಯನ್ನು ವಹಿಸಿ ಆರೋಗ್ಯಪೂರ್ಣ ಸಮಾಜ ನಿರ್ಮಾಣಕ್ಕೆ ಕಂಕಣಬದ್ಧವಾಗಿದೆ.

## ೪.೨ ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸಂಸ್ಥೆ – ಶಿಕ್ಷಣ ಕ್ಷೇತ್ರ

ಕರ್ನಾಟಕದ ಸುಪ್ರಸಿದ್ಧ ಶಿಕ್ಷಣ ಸಂಸ್ಥೆಗಳಲ್ಲಿ ಬೆಳಗಾವಿಯ ಕೆ.ಎಲ್.ಇ ಸಂಸ್ಥೆಯೂ ಒಂದು. ಬೆಳಗಾವಿ ಜಿಲ್ಲೆಯ ಅಭಿವೃದ್ಧಿಯಲ್ಲಿ ಅದರ ಪಾತ್ರ ಮಹತ್ತರವಾದುದು. ಕಳೆದ ಒಂದು ಶತಮಾನದಿಂದ ಕರ್ನಾಟಕದ ಅಭಿವೃದ್ಧಿಗೆ ಅದು ನೀಡಿದ ಕೊಡುಗೆ ಉಲ್ಲೇಖನಿಯವಾಗಿದೆ.

ಮಾನವನಿಗೆ ಶಿಕ್ಷಣವು ಅನ್ನ, ಆಶ್ರಯ, ನೀರು, ಗಾಳಿಯಷ್ಟೇ ಅಗತ್ಯವಾದುದು. ಮಾನವಾಭಿವೃದ್ಧಿಯೆಂದರೆ ಶಿಕ್ಷಣಾಭಿವೃದ್ಧಿಯೇ. ೧೯೮೧ ರಲ್ಲಿ ಸಾಕ್ಷರತೆಯ ಪ್ರಮಾಣ ಪ್ರತಿಶತ ೫೬.೦೪. ೨೦೦೧ ರಲ್ಲಿ ಅದು ಶೇ. ೬೬.೬೪ಕ್ಕೆ ತಲುಪಿದ್ದು, ಗ್ರಾಮೀಣ ಭಾಗದಲ್ಲಿ ಶೇ. ೫೯.೩೩ರಷ್ಟು ಮತ್ತು ಪಟ್ಟಣ ಪ್ರದೇಶಗಳಲ್ಲಿ ಶೇ ೮೦.೫೮ ರಷ್ಟು ಇತ್ತು.

ಮಹಿಳೆಯರ ಸಾಕ್ಷರತಾ ಪ್ರಮಾಣ ೧೯೯೧ರಲ್ಲಿ ಶೇ. ೪೪.೩೪ ಆಗಿತ್ತು. ಅದು ೨೦೦೧ರಲ್ಲಿ ಶೇ. ೫೬.೮೭ ಕ್ಕೇರಿತ್ತು. ಇತ್ತೀಚಿನ ೨೦೧೧ ರ ಅಂಕಿ ಅಂಶದಂತೆ ಮಹಿಳೆಯರ ಸಾಕ್ಷರತೆಯು ಶೇ. ೬೮.೧೮ ಕ್ಕೇರಿದೆ. ಈಗಲೂ ಪುರಷರ ಸಾಕ್ಷರತೆಯು ಮಹಿಳೆಯರ ಪ್ರಮಾಣ ಮೀರಿಯೇ ಶೇ. ೮೨.೮೫ ರ ಎತ್ತರದಲ್ಲಿದೆ. ೨೦೦೧ ರಲ್ಲಿ ನಗರ ಮತ್ತು ಗ್ರಾಮೀಣ ಮಹಿಳೆಯರಲ್ಲಿ ಸಾಕ್ಷರತೆ ಪ್ರಮಾಣ ಶೇ. ೨೬.೧೨ ರ ಅಂತರವಿದೆ. ದೇಶದ ಸರಾಸರಿ ಸಾಕ್ಷರತೆ ಪ್ರಮಾಣಕ್ಕಿಂತ ಕರ್ನಾಟಕ ರಾಜ್ಯದ ಸರಾಸರಿ ಸಾಕ್ಷರತೆಯು ಸ್ವಲ್ಪ ಹೆಚ್ಚಾಗಿದೆ. ಆದರೆ ಗ್ರಾಮೀಣ ಪುರುಷರ ಸಾಕ್ಷರತಾ ಪ್ರಮಾಣ ದೇಶದ ಸರಾಸರಿಗಿಂತ ಅಲ್ಪ ಕಡಿಮೆ ಮಟ್ಟದಲ್ಲಿದೆ. ಇಡೀ ರಾಜ್ಯದ ಮಹಿಳೆ ಮತ್ತು ಪುರುಷರ ಸಾಕ್ಷರತೆ ಪ್ರಮಾಣದಲ್ಲಿ ಶೇ. ೧೯.೨೩ರಷ್ಟು ವ್ಯತ್ಯಾಸವಿದೆ. ಒಟ್ಟು ೨೭ ಜಿಲ್ಲೆಗಳಲ್ಲಿ, ೧೨ ಜಿಲ್ಲೆಗಳಲ್ಲಿ ದೇಶದ ಸರಾಸರಿಗಿಂತ ಮಹಿಳೆಯರ ಸಾಕ್ಷರತೆಯು ಕಡಿಮೆಯಿದೆ. (ಶೇ. ೫೪.೧೬) ಆ ಜಿಲ್ಲೆಗಳೆಂದರೆ ಚಾಮರಾಜನಗರ, ಮಂಡ್ಯ, ಕೋಲಾರ, ಬಿಜಾಪೂರ, ಬೀದರ, ಬೆಳಗಾವಿ, ಬಳ್ಳಾರಿ, ಗುಲ್ಬರ್ಗಾ, ರಾಯಚೂರು, ಗದಗ, ಬಾಗಲಕೋಟೆ ಮತ್ತು ಕೊಪ್ಪಳ. ಮೊದಲಿನ ಮೂರು ಜಿಲ್ಲೆಗಳನ್ನು ಹೊರತು ಪಡಿಸಿ, ಇನ್ನುಳಿದ ಒಂಭತ್ತು ಜಿಲ್ಲೆಗಳಲ್ಲಿ ಪುರುಷ ಮತ್ತು ಮಹಿಳೆಯರ ಲಿಂಗಾನುಪಾತ ವ್ಯತ್ಯಾಸವೂ ಸಹ ರಾಷ್ಟ್ರೀಯ ಸರಾಸರಿಗಿಂತ ಹೆಚ್ಚಿದೆ. (ಶೇ. ೨೧.೬೩). ೧೯೯೧ ಮತ್ತು ೨೦೦೧ರ ಅವಧಿಯಲ್ಲಿ ಇದು ರಾಯಚೂರು ಜಿಲ್ಲೆಯಲ್ಲಿ ಸ್ವಲ್ಪ ಹೆಚ್ಚಾಗಿದೆ.

ಪರಿಶಿಷ್ಟ ಜಾತಿಯ ಜನರಲ್ಲಿ ೨೦೦೧ರ ಪ್ರಕಾರ ಪಟ್ಟಣ ಹಾಗೂ ಗ್ರಾಮೀಣ ಭಾಗದಲ್ಲಿ ಒಟ್ಟು ಸಾಕ್ಷರತೆ ಕ್ರಮವಾಗಿ ಶೇ. ೫೨.೮೭ ಮತ್ತು ೪೭.೨೫ ರಷ್ಟಿತ್ತು. ಈ ಪ್ರಮಾಣಗಳು ರಾಷ್ಟ್ರೀಯ ಸರಾಸರಿಗಿಂತ ಕಡಿಮೆ. ತದ್ವಿರುದ್ಧವಾಗಿ, ಪಟ್ಟಣಗಳಲ್ಲಿ ಇವು ಹೆಚ್ಚಾಗಿವೆ. ಪರಿಶಿಷ್ಟ ಪಂಗಡದವರಲ್ಲಿ ೨೦೦೧ರ ಪ್ರಕಾರ, ಒಟ್ಟು ಸಾಕ್ಷರತೆ ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಕ್ರಮವಾಗಿ ಶೇ. ೪೮.೨೭ ಮತ್ತು ೪೫.೨೬ ರ ಪ್ರಮಾಣದಲ್ಲಿದ್ದವು. ಈ ಮೂರು ತರಹದ ಪ್ರಮಾಣಗಳಲ್ಲಿ (ಒಟ್ಟು ನಗರ ಮತ್ತು ಗ್ರಾಮೀಣ) ಪರಿಶಿಷ್ಠ ಜಾತಿಯ ಸಂಖ್ಯೆಯಲ್ಲಿ ಪರಿಶಿಷ್ಠ ಪಂಗಡದವರಿಗಿಂತ ಸಾಕ್ಷರತಾ ಪ್ರಮಾಣ ಹೆಚ್ಚಾಗಿದೆ.

**ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆಯ ಸ್ಥಾಪನೆ (ಕೆ.ಎಲ್.ಇ) :**

೧೯೧೬ರಲ್ಲಿ ಅರ್ಪಣಾ ಮನೋಭಾವದ ಏಳು ಜನ ಶಿಕ್ಷಕರು ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ (ಕೆ.ಎಲ್.ಇ)ಯನ್ನು ಹುಟ್ಟು ಹಾಕಿದರು. ರಾಜ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವ ರೈತ ವರ್ಗದ ಮಕ್ಕಳಿಗೆ ಶಿಕ್ಷಣದ ಸೌಲಭ್ಯ ನೀಡುವುದೇ ಅವರ ಮುಖ್ಯ ಗುರಿಯಾಗಿತ್ತು. ಅವರ ಈ ಕಾರ್ಯ ಜಿಲ್ಲೆಯ ಶೈಕ್ಷಣಿಕ ಇತಿಹಾಸದಲ್ಲಿ ಸಂಚಲನವನ್ನುಂಟು ಮಾಡಿತು.

ಪ್ರಾತಃಸ್ಮರಣೀಯರಾದ ಸಪ್ತಋಷಿಗಳು ೧೯೧೬ ರಲ್ಲಿ ನೆಟ್ಟ ಈ ಸಸಿ ಇಂದು ಹೆಮ್ಮರವಾಗಿ ಬೆಳೆದು, ಶಾಖೋಪಶಾಖೆಗಳಲ್ಲಿ ವಿಸ್ತರಿಸಿಕೊಂಡಿದೆ. ಜನಮನ್ನಣೆಗೆ ಪಾತ್ರವಾಗಿ, ಇಡೀ ಸಮಾಜಕ್ಕೆ ಭೂಷಣಪ್ರಾಯವೆನಿಸಿದೆ. ಸಂಸ್ಥಾಪಕರ ಅಂದಿನ ಸಂಕಲ್ಪ ಇಂದು ಸಾಕಾರಗೊಂಡಿದೆ.

ಹರಿದು ಹಂಚಿಹೋಗಿದ್ದ ಕರ್ನಾಟಕದ ನೆಲದಲ್ಲಿ, ಅವರು ' ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ' ಹೆಸರಿನ ಶಿಕ್ಷಣ ಸಂಸ್ಥೆ ಪ್ರಾರಂಭಿಸಲು ಯೋಚನೆ ಮಾಡಿದ್ದೇ ಒಂದು ಅದ್ಭುತವೆನಿಸುತ್ತದೆ. ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆಯ ಸಂಸ್ಥಾಪಕರ ಆ ಪ್ರಯತ್ನಗಳ ಫಲವಾಗಿಯೇ ಧಾರವಾಡದಲ್ಲಿ ಕರ್ನಾಟಕ ಕಾಲೇಜು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳು ತಲೆಯೆತ್ತಿದವು. ೧೯೩೩ರಲ್ಲಿ ಲಿಂಗರಾಜು ಕಾಲೇಜು ಪ್ರಾರಂಭವಾಗಿ ಬೆಳಗಾವಿಯ ಶೈಕ್ಷಣಿಕ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಆರಂಭಿಸಿತು.

**ಕೆ.ಎಲ್.ಇ ಸಂಸ್ಥೆ – ೧೯೧೬ :**

ಕರ್ನಾಟಕ ಶಿಕ್ಷಣ ರಂಗದ ಜೀವನಾಡಿ ಎನಿಸಿರುವ ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸಂಸ್ಥೆಯ ಸ್ಥಾಪನೆಯ ಹಿನ್ನಲೆ ರೋಮಾಂಚನಕಾರಿಯಾಗಿದೆ. ಅದು ತ್ಯಾಗದ ಕಥೆಯಾಗಿದೆ. ಋಷಿಸದೃಶ ಜೀವನ ನಡೆಸಿದ ಏಳು ಜನ ಸಂಸ್ಥಾಪಕ ಆಜೀವ ಸದಸ್ಯರು ಶಿಕ್ಷಣ ಪ್ರಸಾರಕ್ಕಾಗಿ ಮಾಡಿದ ಹೋರಾಟದ ಚರಿತ್ರೆಯದು.

ಕೆ.ಎಲ್.ಇ ಸಂಸ್ಥೆಯ ದಾಖಲೆಗಳ ಪ್ರಕಾರ ಎ.ವ್ಹಿ. ಸ್ಕೂಲ (ಗಿಲಗಂಚಿ ಅರಟಾಳ ಹೈಸ್ಕೂಲ) ೧೯೧೬ ನವೆಂಬರ ೧೩ ರಂದು ಪ್ರಾರಂಭವಾಯಿತು.

೧೯೧೬ ರಲ್ಲಿ ಸ್ಥಾಪನೆಗೊಂಡ 'ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸಂಸ್ಥೆ' ಯು ೧೯೧೭ ಜುಲೈ ೨೦ ರಂದು ಸಂಸ್ಥೆಗಳ ನೋಂದಣಿ ಕಾಯಿದೆ ೧೮೬೦ ರ ಅಡಿಯಲ್ಲಿ ಕಾನೂನು ಬದ್ಧವಾಗಿ ನೋಂದಣಿಯಾಯಿತು. ಆಗ ಅದರ ಕಾರ್ಯಕಾರಿ ಮಂಡಳಿ ಕೆಳಗಿನಂತಿತ್ತು.

೧. ಶ್ರೀಮಂತ ಸರದಾರ ವೀರಭದ್ರಪ್ಪ ಗುಣಪ್ಪ ನಾಯಿಕ ಬಹದ್ದೂರ ದೇಸಾಯಿ ಚಚಡಿ

೨. ರಾವ್‌ಬಹದ್ದೂರ ಶ್ರೀ ಆರ್. ಸಿ. ಅರಟಾಳ

೩. ರಾವ್‌ಬಹದ್ದೂರ ವಿ.ಎ ಅನಿಗೋಳ

೪. ಶ್ರೀ ಬಿ.ಎಸ್. ಹಂಚಿನಾಳ, ಬಿ.ಎ, ಬಿ.ಎಡ್

೫. ಶ್ರೀ ಎಚ್.ಎಫ್. ಕಟ್ಟಿಮನಿ, ಬಿ.ಎ

೬. ಶ್ರೀ ಬಿ.ಬಿ. ಮಮದಾಪೂರ, ಬಿ.ಎ

೭. ಶ್ರೀ ಎಮ್.ಆರ್. ಸಾಖರೆ, ಎಮ್.ಎ

೮. ಶ್ರೀ ಎಸ್.ಎಸ್. ಬಸವನಾಳ, ಎಮ್.ಎ

೯. ಶ್ರೀ ಪಿ.ಆರ್. ಚಿಕ್ಕೋಡಿ, ಬಿ.ಎ

೧೦. ಶ್ರೀ. ವಿ.ವಿ ಪಾಟೀಲ, ಬಿ.ಎಸ್ಸಿ

ಈ ಹತ್ತು ಜನ ಸಂಸ್ಥಾಪಕ ಸದಸ್ಯರಲ್ಲಿ ಮೊದಲಿನ ಮೂವರು ಸಂಸ್ಥಾಪಕ ಸದಸ್ಯರು, ಉಳಿದ ಏಳು ಜನರು ಸಂಸ್ಥಾಪಕ ಪುಣ್ಯ ಪುರುಷರು. ಇವರಲ್ಲಿ ಪಂಡಿತಪ್ಪ ಚಿಕ್ಕೋಡಿಯವರು ಸಾರ್ವಜನಿಕ ಜೀವನಕ್ಕೆ ಪ್ರವೇಶಿಸುವ ಹಿನ್ನೆಲೆಯಲ್ಲಿ ೧೯೧೮ ರಲ್ಲಿ ಸದಸ್ಯತ್ವಕ್ಕೆ ರಾಜಿನಾಮೆ ನೀಡಿದರು. ಸರದಾರ ವೀರನಗೌಡ ಪಾಟೀಲರೂ ರಾಷ್ಟ್ರೀಯ ಚಳುವಳಿಯಲ್ಲಿ ಧುಮುಕ್ಕಿದ್ದರಿಂದ ೧೯೩೧ರಲ್ಲಿ ರಾಜಿನಾಮೆ ನೀಡಿದರು. ಉಳಿದ ಐವರು ಕೊನೆಯವರೆಗೂ ಕೆ.ಎಲ್.ಇ ಸಂಸ್ಥೆಯ ಪಂಚಪ್ರಾಣಗಳಾಗಿ ಸಂಸ್ಥೆಯ ಪ್ರಗತಿಗಾಗಿ ಅಹರ್ನಿಶಿ ಶ್ರಮಿಸಿದರು.

**ಕೆ.ಎಲ್.ಇ ಸಂಸ್ಥೆಯ ಪ್ರಗತಿ :**

೧೯೧೬ ರಲ್ಲಿ ಕೆ.ಎಲ್.ಇ ಸಂಸ್ಥೆಯು ಕಳೆದ ಒಂಬತ್ತು ದಶಕಗಳ ಅವಧಿಯಲ್ಲಿ ಗಣನೀಯ ಪ್ರಗತಿ ಸಾಧಿಸಿದೆ ಎಂಬುದು ಅಂಕಿ ಅಂಶಗಳ ಮೂಲಕ ತಿಳಿದುಬರುತ್ತದೆ.

೧೯೧೬-೧೭ ರಲ್ಲಿ ಕೆ.ಎಲ್.ಇ ಸಂಸ್ಥೆಯಲ್ಲಿ ವಾರ್ಷಿಕ ಹಣಕಾಸು ಕೇವಲ ೧೨,೨೦೦ ರೂಪಾಯಿಗಳಷ್ಟು ಇದ್ದದು, ೧೯೯೯-೨೦೦೦ ರಲ್ಲಿ ೯೮,೧೪,೯೮,೦೦೦ ರೂಪಾಯಿಗಳಿಗೆ ಏರಿದ್ದನ್ನು ಕಂಡರೆ ಆಶ್ಚರ್ಯ ಮತ್ತು ಅಭಿಮಾನ.

೧೯೧೬-೧೭ ರಲ್ಲಿ ಕೇವಲ ೩೦ ವಿದ್ಯಾರ್ಥಿಗಳು ಈ ಸಂಸ್ಥೆಯಲ್ಲಿ ಓದುತ್ತಿದ್ದರು. ಈಗ ೨೦೧ ಅಂಗಸಂಸ್ಥೆಗಳಿದ್ದು ೫೦ ಸಾವಿರಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದಾರೆ. ಪ್ರಾರಂಭದಲ್ಲಿ ಕೇವಲ ಇಂಗ್ಲಿಷ ಒಂದನೇ ವರ್ಗ ಅಂದರೆ ಕನ್ನಡ ಐದನೆಯ ವರ್ಗ ಹೊಂದಿದ್ದ ಸಂಸ್ಥೆ, ಇಂದು ಶಿಶುವಿಹಾರದಿಂದ ಸ್ನಾತಕೋತ್ತರ ಪದವಿಯವರೆಗೆ ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಶಿಕ್ಷಕ ತರಬೇತಿ, ತಂತ್ರಜ್ಞಾನ, ವೈದ್ಯಕೀಯ, ದಂತ ವೈದ್ಯಕೀಯ, ಶುಶ್ರೂಷಾ, ಕೃಷಿವಿಜ್ಞಾನ, ವ್ಯವಹಾರ ನಿರ್ವಹಣೆ, ಮಾಹಿತಿ ತಂತ್ರಜ್ಞಾನ, ಔಷಧಿ ವಿಜ್ಞಾನ, ಹೊಟೇಲ್ ಉದ್ಯಮ ಮುಂತಾದ ವೈವಿಧ್ಯಮಯ ಕೋರ್ಸುಗಳನ್ನು ಬೋಧಿಸುತ್ತ ಸಮಾಜದ ಎಲ್ಲ ವರ್ಗದ ಜನರಿಗೆ ಜ್ಞಾನಪ್ರಕಾಶ ನೀಡುತ್ತ ಸಾಗಿದೆ.

೧೯೧೬-೧೭ ರಲ್ಲಿ ಕೆ.ಎಲ್.ಇ ಸಂಸ್ಥೆಯ ಅಂಗಸಂಸ್ಥೆಯೊಂದು ಬೆಳಗಾವಿ ಕಿಲ್ಲಾ ಪ್ರದೇಶದ ಬಂಗ್ಲೆ ನಂ. ೨೪ ರಲ್ಲಿ ಬಾಡಿಗೆ ಮೇಲೆ ನಡೆಯುತ್ತಿತ್ತು. ಆದರೆ ಇಂದು ಪ್ರತಿಯೊಂದು ಅಂಗಸಂಸ್ಥೆಯು ಸರ್ಕಾರ ಮತ್ತು ಇಲಾಖೆಯ ನೀತಿ ನಿಯಮಾವಳಿ ಪ್ರಕಾರ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ವರ್ಗಕೋಣೆ, ಪೀಠೋಪಕರಣ, ಪಾಠೋಪಕರಣ, ಅಧ್ಯಾಪಕರ ಕೋಣೆ, ಪ್ರಾಚಾರ್ಯರ ಕೋಣೆ, ಕಾರ್ಯಾಲಯ, ವಿಜ್ಞಾನ ಭವನ, ಸಭಾ ಭವನ, ಆಟದ ಮೈದಾನಗಳನ್ನು ಹೊಂದಿದೆ. ಅಲ್ಲದೆ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ, ಪ್ರತ್ಯೇಕ ವಸತಿ ಗೃಹಗಳನ್ನು ಶಿಕ್ಷಕ ಸಿಬ್ಬಂದಿಯವರಿಗೆ ಪ್ರತ್ಯೇಕ ವಸತಿ ಗೃಹಗಳಿವೆ. ಜವಾಹರಲಾಲ್ ನೆಹರು ಮೆಡಿಕಲ್ ಕಾಲೇಜ ಆವರಣದಲ್ಲಿ ಒಂದು ವಿಶಾಲವಾದ ಕ್ರೀಡಾಂಗಣ ಮತ್ತು ಸುಸಜ್ಜಿತವಾದ (ಡಾ. ಬಿ.ಎಸ್. ಜೀರಗೆ ಆಡಿಟೋರಿಯಂ) ಸಭಾಗೃಹವನ್ನು ನಿರ್ಮಿಸಲಾಗಿದೆ.

ಇದು ಲಿಂಗಾಯತರ ಶಿಕ್ಷಣ ಸಂಸ್ಥೆಯಾಗಿದ್ದರೂ ಅವರಿಗೆ ಮಾತ್ರ ಮಿಸಲೂಗೊಳ್ಳದೆ ಜಾತ್ಯತೀತವಾಗಿ ಬೆಳೆದು ನಿಂತಿದೆ. ಕೆ.ಎಲ್.ಇ ಆಸ್ಪತ್ರೆ ಉತ್ತರ ಕರ್ನಾಟಕದಲ್ಲಿಯೇ ಹೈಟೆಕ್ ಆಗಿರುವ ಆಸ್ಪತ್ರೆ. ಶಿಕ್ಷಣ, ಆರೋಗ್ಯ ಹಾಗೂ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಇದನ್ನು ಸರಿಗಟ್ಟಲು ಇನ್ನೊಂದು ಸಂಸ್ಥೆ ಉತ್ತರ ಕರ್ನಾಟಕದಲ್ಲಿಲ್ಲವೆಂದೇ ಹೇಳಬೇಕಾಗುತ್ತದೆ.

ಕೆ.ಎಲ್.ಇ ಸಂಸ್ಥೆಯ ಸಾಮಾನ್ಯ ಸದಸ್ಯರು ಆರಂಭದಲ್ಲಿ ಪ್ರತಿವರ್ಷ, ನಂತರ ೩ ವರ್ಷಕ್ಕೊಮ್ಮೆ, ಈಗ ಪ್ರತಿ ೫ ವರ್ಷಕ್ಕೊಮ್ಮೆ ಮತದಾನದ ಮೂಲಕ ಒಬ್ಬರು ಅಧ್ಯಕ್ಷರನ್ನು, ಇಬ್ಬರು ಉಪಾಧ್ಯಕ್ಷರನ್ನು ಮತ್ತು ೧೨ ಜನ ಆಡಳಿತ ಮಂಡಳಿಯ ಸದಸ್ಯರನ್ನು ಆಯ್ಕೆ ಮಾಡುತ್ತಾರೆ. ಆಯ್ಕೆಯಾದ ೧೨ ಜನ ಆಡಳಿತ ಮಂಡಳಿಯ ಸದಸ್ಯರಲ್ಲಿ ಒಬ್ಬರನ್ನು ಕಾರ್ಯಾಧ್ಯಕ್ಷರೆಂದು ಮತ್ತೊಬ್ಬರನ್ನು ಉಪಕಾರ್ಯಾಧ್ಯಕ್ಷರೆಂದು ಆಯ್ಕೆ ಮಾಡಲಾಗುತ್ತದೆ. ಅಲ್ಲದೆ ಆಜೀವ ಸದಸ್ಯರ ಪೈಕಿ

ಮೂವರನ್ನು ಸೇವಾ ಜ್ಯೇಷ್ಠತೆಯನ್ನು ಆಧರಿಸಿ ಆಡಳಿತ ಮಂಡಳಿಗೆ ಸದಸ್ಯರಾಗಿ ಎರಡುವರೆ ವರ್ಷದ ಅವಧಿಗೆ ನೇಮಿಸಲಾಗುತ್ತದೆ.

೧೯೧೬-೧೭ ರಿಂದ ೧೯೪೫ ವರೆಗೆ ಆಜೀವ ಸದಸ್ಯರೇ ಕಾರ್ಯಕಾರಿ ಮಂಡಳಿಯ ಕಾರ್ಯವನ್ನು ನಿರ್ವಹಿಸುತ್ತಿದ್ದರು. ೧೯೪೫ ರ ಬಳಿಕ ಭಾರತದ ಕೇಂದ್ರ ಸರ್ಕಾರ ಮತ್ತು ಬಾಂಬೆ ಸರ್ಕಾರಗಳ ನಿಯಮಾವಳಿಗಳ ಪ್ರಕಾರ ಸಿಬ್ಬಂದಿ ನೇಮಕ ನಡೆದವು. ಭಾಷಾವಾರು ಪ್ರಾಂತ ರಚನೆಯಾದ ಬಳಿಕ ಕರ್ನಾಟಕ ಸರ್ಕಾರದ ನಾಗರಿಕ ಸೇವಾ ನಿಯಮ ಮತ್ತು ಅನುದಾನ ನಿಯಮಗಳ ಅನ್ವಯ ಶಿಕ್ಷಕ ಶಿಕ್ಷಕೇತರ ಸಿಬ್ಬಂದಿಯನ್ನು ಆಯ್ಕೆ ಮಾಡಲಾಗುತ್ತಿದೆ. ೧೯೯೦-೨೦೦೦ ರಲ್ಲಿ ಒಟ್ಟು ಶಿಕ್ಷಕ-ಶಿಕ್ಷಕೇತರ ಸಂಖ್ಯೆ ೬೦೦೦ ಕ್ಕಿಂತ ಅಧಿಕವಾಗಿತ್ತು. ಅಲ್ಲದೆ ಸಂಸ್ಥೆಯ ಕಾರ್ಯ ನಿರ್ವಹಿಸಲು ಕೇಂದ್ರ ಕಛೇರಿಯಲ್ಲಿ ೨೦ ಜನ ಸಿಬ್ಬಂದಿ ಪ್ರತ್ಯೇಕವಾಗಿ ಕಾರ್ಯ ನಿರ್ವಹಿಸುತ್ತಾರೆ.

ಕೆ.ಎಲ್.ಇ ಸಂಸ್ಥೆ ಸ್ಥಾಪನೆಯಾದ ಪ್ರಥಮ ದಶಕದಲ್ಲಿ ಮೂರು, ಎರಡನೆಯ ದಶಕದಲ್ಲಿ ಎರಡು, ಮೂರನೆಯ ದಶಕದಲ್ಲಿ ನಾಲ್ಕು, ನಾಲ್ಕನೆಯ ದಶಕದಲ್ಲಿ ಐದು, ಆರನೆಯ ದಶಕದಲ್ಲಿ ಹತ್ತು, ಏಳನೆಯ ದಶಕದಲ್ಲಿ ಹದಿಮೂರು ಎಂಟನೆಯ ದಶಕದಲ್ಲಿ ೧೯ ಅಂಗಸಂಸ್ಥೆಗಳು ಸ್ಥಾಪನೆಯಾಗಿದ್ದು ಪ್ರಸ್ತುತ ೨೧೧ ಅಂಗಸಂಸ್ಥೆಗಳಿವೆ.

ಶಿಕ್ಷಣದಿಂದ ವಂಚಿತರಾಗಿದ್ದ ಉತ್ತರ ಕರ್ನಾಟಕದ ಸಾಮಾನ್ಯ ಜನತೆ ಅದನ್ನು ಪಡೆಯುವ ಬಗ್ಗೆ ಹೆಚ್ಚಿನ ಆಸಕ್ತಿ ತಾಳಿದ್ದು ಕೆ.ಎಲ್.ಇ ಸಂಸ್ಥೆ ಸ್ಥಾಪನೆಗೊಂಡ (೧೯೧೬) ತರುವಾಯವೇ.

**ಅರುಣೋದಯ:**

೧೯೧೬ ರಲ್ಲಿ ಬೆಳಗಾವಿಯಲ್ಲಿ ಕೆ.ಎಲ್.ಇ ಸಂಸ್ಥೆ ಕುಡಿಯೊಡೆದು, ಅಂಕುರಿಸಿ, ಪಲ್ಲವಿಸಿ ಅನೇಕ ಅಡ್ಡಿ ಆತಂಕಗಳ ನಡವೆಯೂ ಹೆಮ್ಮರವಾಗಿ ಬೆಳೆದು ನಿಂತಿದೆ. ಪ್ರಾರಂಭದ ದಿನಗಳಲ್ಲಿ ಸಂಸ್ಥಾಪಕರ ಉದ್ದೇಶ ಸಾಮಾನ್ಯ ಶಿಕ್ಷಣದ ಪ್ರಸಾರವೇ ಆಗಿತ್ತು. ಶ್ರೀ ಸಾಮಾನ್ಯರು ಓದು- ಬರಹ ಕಲಿಯಬೇಕೆಂಬುದೇ ಗುರಿಯಾಗಿತ್ತು.  ಶಿಕ್ಷಣ ಪ್ರಸಾರವೇ ನಿಜವಾದ ಅಭಿವೃದ್ಧಿಯೆಂದು ಅವರು ಅರಿತಿದ್ದರು. ೧೯೧೬ ರಿಂದ ೧೯೪೭ ರ ವರೆಗಿನ ಕಾಲಾವಧಿ ಕೆ.ಎಲ್.ಇ ಸಂಸ್ಥೆಯ ಅರುಣೋದಯ ಘಟ್ಟ.

**ನವೋದಯ:**

೧೯೪೭ ರಲ್ಲಿ ಕೆ.ಎಲ್.ಇ ಸಂಸ್ಥೆ ಹೊಸ ಆಯಾಮ ಪಡೆಯಿತು. ತನ್ನ ಆಲೋಚನಾ ಕ್ರಮ ಬದಲಾಯಿಸಿತು. ಸಾಮಾನ್ಯ ಶಿಕ್ಷಣವಷ್ಟೇ ಅಲ್ಲದೆ ತಾಂತ್ರಿಕ ಶಿಕ್ಷಣದ ಪ್ರಸಾರಕ್ಕೆ ಮುಂದಾಯಿತು. ಮಹಾದಾನಿ ಲಿಂಗೈಕ್ಯ ಬಿ. ವ್ಹಿ. ಭೂಮರೆಡ್ಡಿಯವರ ಉದಾರ ಕೊಡುಗೆ ಹಾಗೂ ಹೊಸ ಚಿಂತನೆಯ ಫಲವಾಗಿ ಕೆ.ಎಲ್.ಇ ಸಂಸ್ಥೆ ೧೯೪೬ ರಲ್ಲಿ ಗದಗಿನಲ್ಲಿ ತಾಂತ್ರಿಕ ಕಾಲೇಜು (ಪಾಲಿಟೆಕ್ನಿಕ್)

ಪ್ರಾರಂಭಿಸಿತು. ಈ ಸಂಸ್ಥೆ ೧೯೪೭ ರಲ್ಲಿ ಹುಬ್ಬಳ್ಳಿಗೆ ಸ್ಥಳಾಂತರಗೊಂಡಿತು. ೧೯೪೮ರಲ್ಲಿ ಬಿ.ವಿ ಭೂಮರೆಡ್ಡಿ ಇಂಜನೀಯರಿಂಗ್ ಕಾಲೇಜು ಪೂರ್ಣ ಪ್ರಮಾಣದ ತಾಂತ್ರಿಕ ಶಿಕ್ಷಣ ನೀಡುವ ಸಂಸ್ಥೆಯಾಗಿ ಕಾರ್ಯನಿರ್ವಹಿಸತೊಡಗಿತು. ಹುಬ್ಬಳ್ಳಿಯ ಶಿಕ್ಷಣ ಪ್ರೇಮಿಗಳು, ಕರ್ನಾಟಕ ಚೇಂಬರ ಆಫ್ ಕಾಮರ್ಸ್ ಹಾಗೂ ಮೂರುಸಾವಿರ ಮಠದ ಅಂದಿನ ಪೂಜ್ಯ ಜಗದ್ಗುರುಗಳ ಉದಾರ ಕೊಡುಗೆ ಹಾಗೂ ವಂತಿಗೆಗಳ ನೆರವಿನಿಂದ ಜಗದ್ಗುರು ಗಂಗಾಧರ ವಾಣಿಜ್ಯ ಕಾಲೇಜು ಪ್ರಾರಂಭವಾಯಿತು. ಜನಮನದ ಬಯಕೆಯನ್ನು, ಕಾಲಮಾನದ ಅವಶ್ಯಕತೆಯನ್ನು ಅರಿತುಕೊಂಡ ಕೆ.ಎಲ್.ಇ ಸಂಸ್ಥೆ, ಗದಗಿನಲ್ಲಿ ೧೯೪೭ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿ ಸಂಸ್ಥೆಯನ್ನು ಸ್ಥಾಪಿಸಿತು.

೧೯೫೦ ರ ದಶಕದ ಮಹತ್ವದ ಸಾಧನೆ–ಕರ್ನಾಟಕ ವಿಶ್ವವಿದ್ಯಾನಿಲಯದ ಸ್ಥಾಪನೆ. ಇದು ಉತ್ತರ ಕರ್ನಾಟಕದ ಬಹುದಿನಗಳ ಬೇಡಿಕೆ ಹಾಗೂ ಕನಸಾಗಿತ್ತು. ಈ ಬೇಡಿಕೆ ಸಾಕಾರಗೊಳ್ಳುವಲ್ಲಿ ಕೆ.ಎಲ್.,ಇ ಸಂಸ್ಥೆಯ ಸಂಸ್ಥಾಪಕರು, ಆಡಳಿತ ಮಂಡಳಿಯವರು, ಅಭಿಮಾನಿ ಸದಸ್ಯರು ನಿರ್ವಹಿಸಿದ ಪಾತ್ರ ಸಲ್ಲಿಸಿದ ಸೇವೆ ಸ್ಮರಣೀಯವಾಗಿದೆ.

೧೯೬೩ ರಿಂದ ಕೆ.ಎಲ್.ಇ ಸಂಸ್ಥೆ ವಿನೂತನ ಸಾಧನೆಗಳಿಗೆ ನಾಂದಿ ಹಾಡಿತು. ೧೯೬೩ ರಲ್ಲಿ ಸಂಸ್ಥೆಯ ಅಧ್ಯಕ್ಷರಾಗಿದ್ದ ಬಿ. ವ್ಹಿ. ಭೂಮರೆಡ್ಡಿ ಹಾಗೂ ೧೯೬೮ ರಲ್ಲಿ ಅಧ್ಯಕ್ಷರಾಗಿದ್ದ ಎಚ್.ವಿ ಕೌಜಲಗಿ ಅವರ ಮಾರ್ಗದರ್ಶನದಲ್ಲಿ ಹಾಗೂ ಕಾರ್ಯಾಧ್ಯಕ್ಷರಾಗಿದ್ದ ಡಾ. ವಿ. ವಿ. ತೆಗ್ಗಿಮನಿಯವರ ಕ್ರಿಯಾಶೀಲ ನೇತ್ರತ್ವದಲ್ಲಿ ಕೆ.ಎಲ್.ಇ ಸಂಸ್ಥೆ ಅನೇಕ ಅಡ್ಡಿ ಆತಂಕಗಳನ್ನು ಮೀರಿ ಬೆಳಗಾವಿಯಲ್ಲಿ ಜವಾಹರಲಾಲ ನೆಹರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರಿನಲ್ಲಿ ಎಸ್.ನಿಜಲಿಂಗಪ್ಪ ಮಹಾವಿದ್ಯಾಲಯ ಹಾಗೂ ಹಾವೇರಿಯಲ್ಲಿ ಗುದ್ಲೆಪ್ಪ ಹಳ್ಳಿಕೇರಿ ಮಹಾವಿದ್ಯಾಲಯಗಳನ್ನು ಪ್ರಾರಂಭಿಸುವಲ್ಲಿ ಸಫಲವಾಯಿತು. ಕೆ.ಎಲ್.ಇ ಸಂಸ್ಥೆಗೆ ದೂರಗಾಮಿ ನೋಟ ಒದಗಿಸಿದ ಡಾ. ವಿ.ವಿ ತೆಗ್ಗಿಮನಿಯವರ ಪರಿಶ್ರಮದ ಫಲಗಳು ಸಂಸ್ಥೆಗೆ ದೊರೆಯುವಂತಾಯಿತು.

ಫಾರ್ಮಸಿ ಕಾಲೇಜು, ಕಾನೂನು ಪದವಿ ಕಾಲೇಜು, ಆಂಗ್ಲ ಮಾಧ್ಯಮ ಶಾಲೆಗಳು ಪ್ರಾರಂಭಗೊಂಡಿದ್ದು, ಈ ಅವಧಿಯಲ್ಲಿಯೇ. ಹುಬ್ಬಳ್ಳಿಯಲ್ಲಿ ಗುರುಸಿದ್ದಪ್ಪ ಕೋತಂಬರಿ ಕಾನೂನು ಕಾಲೇಜು, ಬೆಳಗಾವಿಯಲ್ಲಿ ಬಿ.ವಿ ಬೆಲ್ಲದ ಕಾನೂನು ಕಾಲೇಜು ಬೆಂಗಳೂರಿನಲ್ಲಿ ಸಂಜೆ ಕಲಾ ಪದವಿ ಮಹಾವಿದ್ಯಾಲಯ, ಫಾರ್ಮಸಿ ಕಾಲೇಜು, ಬೆಳಗಾವಿಯಲ್ಲಿ ಫಾರ್ಮಸಿ ಕಾಲೇಜು, ಸವದತ್ತಿಯಲ್ಲಿ

ಬೆಳ್ಳುಬ್ಬಿ ಕಾಲೇಜುಗಳು ಸ್ಥಾಪನೆಗೊಂಡವು. ಆದ್ದರಿಂದ ತೆಗ್ಗಿನಮನಿಯವರ ಆಡಳಿತಾವಧಿಯನ್ನು ಕೆ.ಎಲ್.ಇ ಸಂಸ್ಥೆಯ ಚರಿತ್ರೆಯಲ್ಲಿ ನವೋದಯ ಘಟ್ಟವೆಂದು ಗುರುತಿಸಲಾಗುತ್ತದೆ.

**ಭಾಗ್ಯೋದಯ:**

೧೯೮೪ ರಲ್ಲಿ ೩೫ ರ ಯುವಕ ಶ್ರೀ ಪ್ರಭಾಕರ ಕೋರೆ ಸಂಸ್ಥೆಯ ಕಾರ್ಯಾಧ್ಯಕ್ಷರಾಗಿ ನೇಮಕಗೊಂಡರು. ಅವರು ಸಂಸ್ಥೆಯ ನಕ್ಷೆಯನ್ನು ಬದಲಿಸಿದರು. ಆಡಳಿತ ಮಂಡಳಿಯ ಸದಸ್ಯರನ್ನು ತಮ್ಮ ವಿಶ್ವಾಸದ ತೆಕ್ಕೆಯಲ್ಲಿ ತೆಗೆದುಕೊಂಡು ದಿಟ್ಟ ಹೆಜ್ಜೆಗಳನ್ನು ಹಾಕತೊಡಗಿದರು. ಆಡಳಿತ ಮಂಡಳಿ ಹೊಸ ಚೈತನ್ಯದೊಂದಿಗೆ ಕಾರ್ಯನಿರ್ವಹಿಸತೊಡಗಿದರು. ಹೊಸಹೊಸ ಯೋಜನೆಗಳನ್ನು ರೂಪಿಸಿತು. ಮತ್ತೆ ಹೊಸದಾಗಿ ಶಾಲೆ ಕಾಲೇಜುಗಳು ಪ್ರಾರಂಭವಾದವು. ಬೇರೆ ಆಡಳಿತ ಮಂಡಳಿಯ ಶಿಕ್ಷಣ ಸಂಸ್ಥೆಗಳು ಕೆ.ಎಲ್.ಇ ಸಂಸ್ಥೆಗೆ ಸೇರ್ಪಡೆಯಾದವು. ಪವಾಡಸದೃಶ್ಯವೆನಿಸುವ ರೀತಿಯಲ್ಲಿ ಬದಲಾವಣೆ ಗೋಚರಿಸತೊಡಗಿತು. ೧೯೮೪ ರಲ್ಲಿ ಚಿಕ್ಕೋಡಿ, ಹಾವೇರಿ, ಹುಬ್ಬಳ್ಳಿಗಳಲ್ಲಿ ಪಾಲಿಟೆಕ್ನಿಕ್ ಕಾಲೇಜು ಪ್ರಾರಂಭವಾದವು. ೧೯೮೫ ರಲ್ಲಿ ಹುಬ್ಬಳ್ಳಿಯ ಫಾರ್ಮಸಿ ಕಾಲೇಜು, ಗದಗಿನಲ್ಲಿ ಮಹಿಳಾ ಕಾಲೇಜು, ಬೆಳಗಾವಿಯಲ್ಲಿ ಡೆಂಟಲ್ ಕಾಲೇಜಗಳು ಸ್ಥಾಪನೆಗೊಂಡವು. ೧೯೮೬ ರಲ್ಲಿ ಕೆ.ಎಲ್.ಇ ಆಸ್ಪತ್ರೆ ಹಾಗೂ ವೈದ್ಯಕೀಯ ಸಂಶೋಧನಾ ಕೇಂದ್ರ ಹಾಗೂ ಹುಬ್ಬಳ್ಳಿಯಲ್ಲಿ ಬಿ.ಎಡ್. (ಶಿಕ್ಷಣ ಮಹಾವಿದ್ಯಾಲಯ) ಕಾಲೇಜುಗಳು ಪ್ರಾರಂಭಗೊಂಡರೆ, ೧೯೮೭ ರಲ್ಲಿ ಬೆಳಗಾವಿಯಲ್ಲಿ ನರ್ಸಿಂಗ ಕಾಲೇಜು, ನಿಪ್ಪಾಣಿಯಲ್ಲಿ ಆಂಗ್ಲ ಮಾಧ್ಯಮಿಕ ಹಾಗೂ ಪ್ರೌಢಶಾಲೆ ಪ್ರಾರಂಭವಾಗಿ ಗಡಿ ಭಾಗದ ಜನತೆಯ ಬಹುದಿನಗಳ ಬೇಡಿಕೆ ಈಡೇರಿಸಲ್ಪಟ್ಟಿತು. ಬೆಂಗಳೂರಿನಲ್ಲಿ ಹೊಟೇಲ ಮ್ಯಾನೇಜಮೆಂಟ ಆ್ಯಂಡ ಕೇಟರಿಂಗ ಸಂಸ್ಥೆ ಪ್ರಾರಂಭಗೊಂಡಿತು. ೧೯೯೧ ರಲ್ಲಿ ಬೆಳಗಾವಿಯಲ್ಲಿ ಕರ್ನಾಟಕ ಆಯುರ್ವೇದ ವಿದ್ಯಾಪೀಠದ ಬಿ.ಎಮ್. ಕಂಕಣವಾಡಿ ಆಯುರ್ವೇದ ಕಾಲೇಜು, ಆಯುರ್ವೇದ ಆಸ್ಪತ್ರೆ, ಆಯುರ್ವೇದ ಫಾರ್ಮಸಿ ಸಂಸ್ಥೆಗಳು ಈ ಸಂಸ್ಥೆಯಲ್ಲಿ ವಿಲೀನಗೊಂಡವು.

೧೯೯೬ ರಲ್ಲಿ ಕೆ.ಎಲ್.ಇ ಸಂಸ್ಥೆ ಮುಕುಟದಲ್ಲಿ ಮತ್ತೊಂದು ರತ್ನ ವಿಜೃಂಭಿಸತೊಡಗಿತು. ಸಮಗ್ರ ಉತ್ತರ ಕರ್ನಾಟಕದಲ್ಲಿಯೇ ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತವಾದ ಕೆ.ಎಲ್.ಇ ಆಸ್ಪತ್ರೆ ಆರಂಭವಾಯಿತು. ದಕ್ಷಿಣ ಮಹಾರಾಷ್ಟ್ರ, ಉತ್ತರ ಕರ್ನಾಟಕ ಹಾಗೂ ಗೋವಾ ರಾಜ್ಯಗಳ

ಮಧ್ಯವರ್ತಿ ಕೇಂದ್ರವಾಗಿರುವ ಬೆಳಗಾವಿಯಲ್ಲಿ ಈ ಆಸ್ಪತ್ರೆ ತಲೆಯೆತ್ತಿದ್ದು, ಈ ಕಾಲದ ಅಗತ್ಯವನ್ನು ಪೂರೈಸಿತು. ಸಾವಿರ ಹಾಸಿಗೆಗಳ ಅತ್ಯಾಧುನಿಕ ಆಸ್ಪತ್ರೆ ೧೦೦ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಯತು. ಇದು ಆರೋಗ್ಯ ಕ್ಷೇತ್ರಕ್ಕೆ ಬಹುದೊಡ್ಡ ಕೊಡುಗೆ ಎನಿಸಿದೆ. ಬೆಳಗಾವಿ ಮಹಾನಗರಕ್ಕೆ ಭೂಷಣ ಪ್ರಾಯವಾಗಿರುವ ಈ ಆಸ್ಪತ್ರೆ ಮುಂದಿನ ೧೦೦ ವರ್ಷಗಳ ಅಗತ್ಯಗಳನ್ನು ಪೂರೈಸುವಂತೆ ನಿರ್ಮಾಣವಾಗಿದೆ.

ಕರ್ನಾಟಕ ರಾಜ್ಯಾದ್ಯಂತ, ಮಹಾರಾಷ್ಟ್ರದ ಕೆಲವು ಪ್ರದೇಶ ಮತ್ತು ರಾಷ್ಟ್ರ ರಾಜಧಾನಿ ದೆಹಲಿಯನ್ನೊಳಗೊಂಡು, ಒಟ್ಟು ೨೧೧ ಸಂಸ್ಥೆಗಳನ್ನು ಹುಟ್ಟು ಹಾಕಿದ ಕೆ.ಎಲ್.ಇ ದೇಶದಲ್ಲಿಯೇ, ಅದರಲ್ಲೂ ದಕ್ಷಿಣ ಭಾರತದಲ್ಲಿ ತನ್ನದೇಯಾದ ಉನ್ನತ ಸ್ಥಾನವನ್ನು ಗಳಿಸಿದೆ. ಶೈಕ್ಷಣಿಕ ಪ್ರಗತಿಗಾಗಿ ಒಟ್ಟು ೮೦೪೬ ಪುರುಷ ಮತ್ತು ಮಹಿಳಾ ಸಿಬ್ಬಂದಿಯನ್ನು ನೇಮಿಸಿಕೊಂಡು, ೬೫,೫೧೮ ವಿದ್ಯಾರ್ಥಿಗಳ ಪ್ರವೇಶ ದಾಖಲಿಸಿದ ಕೆ.ಎಲ್.ಇ ಸಂಸ್ಥೆ ರೂ. ೫೦ ಬಿಲಿಯನ್ ಮೌಲ್ಯದ ಆಸ್ತಿಯನ್ನು ಹೊಂದಿದೆ. ಈ ಸಂಸ್ಥೆಯು ಇದೀಗ ಬೃಹತ್ ಶಿಕ್ಷಣ ಸಂಸ್ಥೆಯಾಗಿ ಪ್ರಾಥಮಿಕ ಹಂತದಿಂದ ಪ್ರಾರಂಭಗೊಂಡು ಉನ್ನತ ಶಿಕ್ಷಣದ ಎಲ್ಲಾ ವೈವಿಧ್ಯಮಯ ಕೋರ್ಸ್‌ಗಳನ್ನು ನೀಡುತ್ತದೆ. ಈ ಸಂಸ್ಥೆಯು ನಡೆಸುತ್ತಿರುವ ಪೂರ್ವ-ಪ್ರಾಥಮಿಕ ಶಾಲೆಗಳಿಂದ ಸ್ನಾತಕೋತ್ತರ, ವೃತ್ತಿಪರ ಕೋರ್ಸಗಳಿಗೆ ಪ್ರವೇಶಾತಿ ಬಯಸಿ ಬರುವ ವಿದ್ಯಾರ್ಥಿಗಳ ನೂಕು-ನುಗ್ಗಲನ್ನು ಕಂಡರೆ ಈ ಸಂಸ್ಥೆಯ ಶಿಕ್ಷಣ ಕ್ಷೇತ್ರದಲ್ಲಿ ತನ್ನ ಬೇರುಗಳನ್ನು ಎಷ್ಟೊಂದು ಆಳಕ್ಕಿಳಿಸಿದೆ ಎನ್ನುವದು ಗಮನಕ್ಕೆ ಬಾರದಿರದು. ಈ ಕೆಳಗಿನ ಕೋಷ್ಠಕದಲ್ಲಿ ಕೆ.ಎಲ್.ಇ ಶಿಕ್ಷಣ ಸಂಸ್ಥೆಯು ಒಟ್ಟು ಹಾಗೂ ಬೆಳಗಾವಿ ಜಿಲ್ಲೆಯಲ್ಲಿ ನಡೆಸುತ್ತಿರುವ ಸಂಸ್ಥೆಗಳ ವಿವರಗಳನ್ನು ನೀಡಲಾಗಿದೆ.

*ಕೋಷ್ಟಕ – ೪.೨.೧ : ಕೆ.ಎಲ್.ಇ ಶಿಕ್ಷಣ ಸಂಸ್ಥೆಯ ಅಂಗಸಂಸ್ಥೆಗಳ ವಿವರ :*

| ಅ.ನಂ | ಅಂಗಸಂಸ್ಥೆಗಳು | ಒಟ್ಟು ಸಂಸ್ಥೆಗಳು | ಬೆಳಗಾವಿ ಜಿಲ್ಲೆಯಲ್ಲಿನ ಒಟ್ಟು ಸಂಸ್ಥೆಗಳು |
|---|---|---|---|
| ೧ | ಪೂರ್ವ ಪ್ರಾಥಮಿಕದಿಂದ ಪ್ರೌಢ ಶಿಕ್ಷಣದ ವರೆಗೆ | ೫೧ | ೧೯ |
| ೨ | ಪದವಿ ಪೂರ್ವ ಮಹಾವಿದ್ಯಾಲಯಗಳಯ | ೨೮ | ೧೨ |
| ೩ | ಸಾಮಾನ್ಯ ಪದವಿ ಮಹಾವಿದ್ಯಾಲಯಗಳು | | |
| | ಅ) ಕಲಾ ವಾಣಿಜ್ಯ ಮತ್ತು ವಿಜ್ಞಾನ | ೧೭ | ೦೬ |
| | ಬ) ಶಿಕ್ಷಣ ಮಹಾವಿದ್ಯಾಲಯ | ೨೧ | ೦೮ |
| | ಕ) ಕೃಷಿ ಮಹಾವಿದ್ಯಾಲಯ | ೦೧ | ೦೧ |
| | ಡ) ಬಿ.ಸಿ.ಎ ಮತ್ತು ಎಂ.ಸಿ.ಎ | ೧೨ | ೦೬ |
| | ಇ) ಸಂಗೀತ | ೦೧ | ೦೧ |
| | ಫ) ಕಾನೂನು | ೦೫ | ೦೭ |
| ೪ | ವೃತ್ತಿಪರ ಸ್ನಾತಕ ಮತ್ತು ಸ್ನಾತಕ್ಕೋತ್ತರ ಮಹಾವಿದ್ಯಾಲಯಗಳು | | |
| | ಅ) ಎಂಜಿನೀಯರಿಂಗ್ (ಪಾಲಿಟೆಕ್ನಿಕ, ಐಟಿಐ, ಜೆ.ಓ.ಸಿ, ಬಿ.ಇ) | ೧೬ | ೦೮ |
| | ಬ) ಮೆಡಿಕಲ್ (ನರ್ಸಿಂಗ್, ಡಿ.ಫಾರ್ಮಾ, ಬಿ.ಫಾರ್ಮಾ, ಎಂ.ಬಿ.ಬಿ.ಎಸ್, ಆಯುರ್ವೇದ) | ೨೦ | ೧೦ |
| | ಕ) ವ್ಯವಸ್ಥಾಪನೆ | ೧೪ | ೦೫ |
| ೫ | ಆಸ್ಪತ್ರೆಗಳು | ೧೩ | ೦೮ |
| ೬ | ಇತರ ಸಂಸ್ಥೆಗಳು | ೧೨ | ೦೭ |
| | ಒಟ್ಟು | ೨೧೧ | ೯೩ |

ಮೇಲಿನ ಕೋಷ್ಠಕವನ್ನು ಗಮನಿಸಿದಾಗ ಕೆ.ಎಲ್.ಇ ಸಂಸ್ಥೆಯ ಒಟ್ಟು ಅಂಗ ಸಂಸ್ಥೆಗಳಲ್ಲಿ ಸುಮಾರು ಅರ್ಧದಷ್ಟು ಸಂಸ್ಥೆಗಳು ಬೆಳಗಾವಿ ಜಿಲ್ಲೆಯಲ್ಲಿವೆಯೆಂಬ ವಿಷಯ ತಿಳಿಯುವುದು.

ಕೆ.ಎಲ್.ಇ ಸಂಸ್ಥೆ ಪ್ರಜಾಸತ್ತಾತ್ಮಕ ತತ್ವಗಳ ಅಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತದೆ. ಸಂಸ್ಥೆಯ ಸಂವಿಧಾನದ ನಿಯಮಗಳನ್ವಯ ಸದಸ್ಯರಿಂದ ಚುನಾಯಿತರಾದ ೧೫ ಜನ ನಿರ್ದೇಶಕ ಮಂಡಳಿಯಲ್ಲಿ, ಅಧ್ಯಕ್ಷರು ಅತ್ಯಂತ ಪರಿಣಾಮಕಾರಿಯಾಗಿ, ದಕ್ಷರೀತಿಯಲ್ಲಿ ಸಂಪೂರ್ಣ ಸಾಮರ್ಥ್ಯದೊಂದಿಗೆ ಸಮರ್ಥವಾಗಿ ಆಡಳಿತ ನಿರ್ವಹಣೆ ಮಾಡುವ ಅಧಿಕಾರ ಹೊಂದಿದ್ದಾರೆ. ಪ್ರತಿ ಅಂಗ ಸಂಸ್ಥೆಯಲ್ಲಿಯೂ ಸ್ಥಾನಿಕ ಆಡಳಿತ ಮಂಡಳಿಯಿದ್ದು, ಅದು ದೈನಂದಿನ ಆಡಳಿತ ನಿರ್ವಹಿಸುತ್ತದೆ. ಇದು ಆಡಳಿತ ವಿಕೇಂದ್ರಿಕರಣದ ಒಂದು ಮಾದರಿ. ಆಜೀವ ಸದಸ್ಯರು ಶೈಕ್ಷಣಿಕ ಮಾರ್ಗಸೂಚಿಗಳನ್ನು ರೂಪಿಸುತ್ತಾರೆ. ಹಣಕಾಸಿನ ಲೆಕ್ಕ ಪತ್ರಗಳನ್ನು ಲೆಕ್ಕ ಪರಿಶೋಧಕರಿಂದ

ತಪಾಸಣೆಗೊಳಿಸಿ, ತಃಖ್ತೆಗಳನ್ನು ಪ್ರಕಟಗೊಳಿಸುವದರ ಮೂಲಕ ಪಾರದರ್ಶಕತೆಯನ್ನು ಪ್ರದರ್ಶಿಸುತ್ತಾರೆ.

ಉನ್ನತ ಗುಣಮಟ್ಟದ ಶಿಕ್ಷಣ ಮತ್ತು ಆರೋಗ್ಯ ಕಾಳಜಿಯ ಸಂಸ್ಥೆಗಳನ್ನು ಸ್ಥಾಪಿಸುವದರೊಂದಿಗೆ, ಸಂಸ್ಥೆಯು ಸಮುದಾಯ ಸೇವೆಯ ಕಾರ್ಯಯೋಜನೆಗಳನ್ನು ಕೈಕೊಂಡಿದೆ. ಈ ಸೇವೆಗಳಿಂದ ಸಂಸ್ಥೆಯ ಖ್ಯಾತಿ ಗಡಿಯಾಚೆಯ ದೇಶಗಳಿಗೆ ಹಬ್ಬಿದೆ. ಯು.ಎಸ್.ಎ, ಯು.ಕೆ, ಮಲೇಶಿಯಾ, ದೇಶಗಳ ವಿಶ್ವ ವಿದ್ಯಾಲಯಗಳೊಂದಿಗೆ ಸಹಭಾಗಿತ್ವ ಹೊಂದಿದ ಸಂಸ್ಥೆಯು ಅಂತರಾಷ್ಟ್ರೀಯ ಖ್ಯಾತಿ ಗಳಿಸಲು ಸಾಧ್ಯವಾಗಿದೆ.

ಕೆ.ಎಲ್.ಇ ಸಂಸ್ಥೆಯು ದಕ್ಷಿಣ ಭಾರತದಲ್ಲಿ ಸಲ್ಲಿಸುತ್ತಿರುವ ಅಪ್ರತಿಮ ಸೇವೆಯನ್ನು ಮನ್ನಿಸಿ, ಸಾಧನೆಯನ್ನು ಅನುಲಕ್ಷಿಸಿ ಭಾರತ ಸರ್ಕಾರದ ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು, ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ಶಿಫಾರಸಿನನ್ವಯ ಈ ಸಂಸ್ಥೆಯ ವೈದ್ಯಕೀಯ ಮಹಾವಿದ್ಯಾಲಯಕ್ಕೆ ೨೦೦೬, ಎಪ್ರಿಲ್ ೧೩ ರಂದು ಡೀಮ್ಡ್ ಯುನಿವ್ಹರ್ಸಿಟಿಯ ಮಾನ್ಯತೆ ನೀಡಿದೆ. ಸಂಸ್ಥೆಯು ಬೆಳಗಾವಿ ಜಿಲ್ಲೆಯಾದ್ಯಂತ ತನ್ನದೇ ಆದ ಶಿಕ್ಷಣ ಸಂಸ್ಥೆಗಳನ್ನು ಹೊಂದಿರುವದರಿಂದ ಮತ್ತು ಈ ಮೂಲಕ ಬಡ ವಿದ್ಯಾರ್ಥಿಗಳಿಗೆ ಆಶಾಕಿರಣವಾಗಿ ಪರಿಣಮಿಸಿರುವುದರಿಂದ ಇದನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

### ೪.೩ ಭಾವಸಂಗಮ ಗೋಕಾಕ : ಕಲೆ ಮತ್ತು ಸಾಹಿತ್ಯ ಕ್ಷೇತ್ರ

ಭಾವ ಸಮರತೆಯನ್ನು ಬಿಂಬಿಸಿ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿ ಕ್ಷೇತ್ರಗಳಲ್ಲಿ ತನ್ನದೇ ಆದ ಛಾಪು ಮೂಡಿಸಿದ್ದು ಗೋಕಾಕದ 'ಭಾವಸಂಗಮ' ಸಂಸ್ಥೆ. ನಮ್ಮ ನಾಡಿನ ಸಂಸ್ಕೃತಿಯು ಇಂದು ವಿಭಿನ್ನರೀತಿಯಲ್ಲಿ ಸಾಗುತ್ತಿರುವುದನ್ನು ಮನಗಂಡ ಹಿರಿಯ ಚೇತನ, ಶಿಕ್ಷಣತಜ್ಞ, ಮಕ್ಕಳ ಸಾಹಿತ್ಯ ವೇದಿಕೆಯ ರಾಜ್ಯಾಧ್ಯಕ್ಷರಾದ ಶ್ರೀ ನರೇಂದ್ರ ಪುರಂದರೆಯವರು ಇದನ್ನು ಆರಂಬಿಸಿದರು. 'ಭಾವಸಂಗಮ' ನಾಮಾಂತಿಕ ಒಂದು ಸಂಘಟನೆಯನ್ನು ಕಟ್ಟಿ ಬೆಳೆಸಿ ಸುಂದರ ಸಾಂಸ್ಕೃತಿಕ ವೇದಿಕೆಯನ್ನು ಸಜ್ಜುಗೊಳಿಸಿದ್ದಾರೆ. ಸಾಹಿತಿಗಳು, ವ್ಯಾಪಾರಸ್ಥರು, ಗುತ್ತಿಗೆದಾರರು, ನ್ಯಾಯವಾದಿಗಳು, ಲೆಕ್ಕಪತ್ರ ಪರಿಶೋಧಕರು, ವೈದ್ಯರು, ರಾಜಕೀಯ ಧುರೀಣರು, ಪ್ರಾಥಮಿಕ ಶಾಲೆಯ ಶಿಕ್ಷಕರನ್ನು ಮೊದಲು ಮಾಡಿಕೊಂಡು ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನು ಒಳಗೊಂಡು ಸಂಘಟಣೆಯು ರೂಪುಗೊಂಡಿದೆ.

'ಭಾವಸಂಗಮ'ವೆಂಬ ಸಂಘಟನೆಯು ಮನೆ-ಮನಗಳನ್ನು ತಣಿಸುವ, ಮಠ-ಮಂದಿರಗಳನ್ನು ಜಾಗೃತಗೊಳಿಸುವ, ಮಕ್ಕಳನ್ನು ಯುವಕರನ್ನು ಹುರಿದುಂಬಿಸುವ, ವಯೋವೃದ್ಧರ

ಮುದುಡಿದ ಭಾವವನ್ನು ಅರಳಿಸಿ, ಬದುಕುವ ಕಲೆಯನ್ನು ಕಲಿಸುವ ಸುಂದರ ಸಂಸ್ಥೆ ಈ 'ಭಾವಸಂಗಮ'. ಇಲ್ಲಿ ಯಾವುದೇ ಆರ್ಥಿಕ ವ್ಯವಹಾರವಿಲ್ಲ. ಮತ–ಭೇದ, ಜಾತಿ–ಬೇಧವಂತೂ ಇಲ್ಲವೇ ಇಲ್ಲ. ಇಲ್ಲಿರುವುದು ಕೇವಲ ಭಾರತೀಯ ಸಂಸ್ಕೃತಿ, ಸಂಗೀತ , ಸಾಹಿತ್ಯ, ಕಲೆ.

**ಭಾವಸಂಗಮದ ಧ್ಯೇಯೋದ್ದೇಶಗಳು :**

೧. ನಾಡಿನಾದ್ಯಂತ ಸಾಂಸ್ಕೃತಿಕ ವಾತಾವರಣ ನಿರ್ಮಿಸುವುದು.

೨. ಹೊಸ ಹೊಸ ಪ್ರತಿಭೆಗಳಿಗೆ ವೇದಿಕೆ ಒದಗಿಸುವುದು.

೩. ಜಾತ್ಯಾತೀತವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸುವುದು.

೪. ಸಿನಿಮಾ ಹಾಗೂ ದೂರದರ್ಶನ ಹೊರತು ಪಡಿಸಿ ಶುದ್ಧ ಕಲೆ, ಸಾಹಿತ್ಯ, ಸಂಗೀತವನ್ನು ಪ್ರಚುರ ಪಡಿಸುವುದು.

೫. ಹಿರಿಯರನ್ನು ಗೌರವಿಸುವುದನ್ನು ಮಕ್ಕಳಿಗೆ ಕಲಿಸುವುದು.

೬. ಭಾಷೆಯ ಬಂಧನವಿಲ್ಲದೇ ಎಲ್ಲ ಭಾಷಿಕರೊಂದಿಗೆ ಕೂಡಿ ಕಾರ್ಯಕ್ರಮ ನಡೆಸುವುದು.

೭. ಕಲೆ, ಸಾಹಿತ್ಯ, ಸಂಗೀತ ಹಾಗೂ ಸಂಸ್ಕೃತಿಯನ್ನು ಮನೆ ಮನೆಗೂ ನೀಡುವುದು.

೮. ಸಂಗೀತ, ಸಾಹಿತ್ಯ, ಕಲೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುವುದರೊಂದಿಗೆ ಭಾವ ಸಾಮರಸ್ಯ ಬೆಳೆಸುವುದು.

**ಕಾರ್ಯಕ್ರಮಗಳ ನೋಟ**

೧ ನೇ ನವೆಂಬರ, ೨೦೦೧ ನೇ ಇಸ್ವಿಯಿಂದ ಪ್ರಾರಂಭಿಸಿ ಪ್ರತಿ ತಿಂಗಳೂ ಸಾಹಿತ್ಯಾಸಕ್ತರಿಗೆ ಸಾಹಿತ್ಯ, ಸಂಗೀತದ ರಸದೌತಣ ನೀಡುತ್ತಿರುವ ಭಾವ ಸಂಗಮ ಸದ್ಯ ನೂರು ಯಶಸ್ವಿ ಕಾರ್ಯಕ್ರಮಗಳನ್ನು ಪೂರ್ಣಗೊಳಿಸಿದೆ. ಭಾವ ಸಂಗಮವು ಗೋಕಾಕದ ಮನೆ–ಮನೆಯಿಂದ ಆರಂಭಿಸಿ ಬಾಗಲಕೋಟದ ತೇರದಾಳ, ಜಮಖಂಡಿ, ಧಾರವಾಡ, ನಿಪ್ಪಾಣಿ, ಚಿಕ್ಕೋಡಿ ತಾಲೂಕ, ನೆರೆಯ ಮಹಾರಾಷ್ಟ್ರದ ಗಡಹಿಂಗ್ಲಜ್ ಮುಂತಾದ ಸ್ಥಳಗಳಲ್ಲಿ ಕಾರ್ಯಕ್ರಮಗಳನ್ನು ಆಯೋಜಿಸಿ ಜನರ ಹೃನ್ಮನಗಳನ್ನು ಗೆದ್ದಿದೆ.

ಭಾವ ಸಂಗಮದ ವಿಶೇಷತೆ ಎಂದರೆ ಪ್ರತಿ ತಿಂಗಳು ಕಾರ್ಯಕ್ರಮಗಳ ಆಯೋಜನೆ. ಭಾವಸಂಗಮದ ಕಾರ್ಯಕ್ರಮವು ಪ್ರತಿ ತಿಂಗಳು ತಪ್ಪದೆ ಇರುತ್ತದೆ. ಪ್ರತಿ ತಿಂಗಳು ಬೇರೆ ಬೇರೆ ವಿಚಾರ ಧಾರೆ, ಚಿಂತನ ಗೋಷ್ಠಿ, ಸಾಹಿತ್ಯ, ಸಂಗೀತ, ನೃತ್ಯ ಕಾರ್ಯಕ್ರಮ, ಉಪನ್ಯಾಸ, ಕಥಾ ನಿರೂಪಣೆ, ಮುಂತಾದ ವಿಷಯಗಳ ಮೇಲೆ ಕಾರ್ಯಕ್ರಮಗಳನ್ನು ಭಾವ ಸಂಗಮವು ನಡೆಸಿಕೊಂಡು ಬರುತ್ತಿದೆ.

ಕಲೆ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಮೀಸಲಾದ ಈ ಸರ್ಕಾರೇತರ ಸಂಸ್ಥೆಯು ನೋಂದಣಿ ರಹಿತವಾಗಿದೆಯೆನ್ನುವುದು ವಿಶೇಷ. ಈ ಸರ್ಕಾರೇತರ ಸಂಸ್ಥೆಯು ಜನರ ಮನದಲ್ಲಿ ಉಳಿದಿರುವ ಬಗೆಯನ್ನು ಪರಿಶೀಲಿಸಬೇಕಾಗಿದ್ದಲ್ಲಿ, ಜನರ ಭಾವನೆಗಳನ್ನು ಅರಿತು ಕೊಳ್ಳುವುದು ಅತ್ಯವಶ್ಯಕ. ಅದೇ ರೀತಿ ಕಾರ್ಯಕ್ರಮಗಳ ವೀಕ್ಷಣೆಗೆ ಸಾರ್ವಜನಿಕರು ಮುಗಿಬೀಳುವದನ್ನು ನೋಡಿಯೇ ಭಾವ ಸಂಗಮವು ನಡೆಸುವ ಕಾರ್ಯಕ್ರಮಗಳ ಉತ್ಕೃಷ್ಟತೆಯು ಅರ್ಥವಾಗುತ್ತದೆ. ಕಲೆ ಮತ್ತು ಸಾಹಿತ್ಯ ಕಾರ್ಯಕ್ರಮಗಳ ಜೊತೆಗೆ ನೈತಿಕತೆಗೆ ಪ್ರೋತ್ಸಾಹ ನೀಡುವದನ್ನು ಸಹ ಭಾವಸಂಗಮವು ನಡೆಸಿಕೊಂಡು ಬರುತ್ತಿದೆ. ಈ ಸಂಸ್ಥೆಯು ತನ್ನ ಉದ್ದೇಶಿತ ಸಾಧನೆಗೆ ಹಲವು ಕಾರ್ಯಗಳನ್ನು ಆಯೋಜಿಸಿ ಯಶಸ್ಸು ಸಾಧಿಸಿದೆ.

ಭಾವ ಸಂಗಮವು ಇದುವರೆಗೆ ೧೧೯ ಸಾಹಿತ್ಯ ಕೂಟಗಳನ್ನು ಏರ್ಪಡಿಸಿದೆ. ಗೋಕಾಕ ಪರಿಸರದಲ್ಲಿ ಸದಭಿರುಚಿಯ ವಾತಾವರಣ ನಿರ್ಮಿಸಿ, ಸಾಂಸ್ಕೃತಿಕ ಮನಸ್ಸುಗಳ ಗಮನ ಸೆಳೆದಿದೆ. ಅಭಿವೃದ್ಧಿಯಲ್ಲಿ ಮಾನವ ಸದಭಿರುಚಿಯನ್ನು ತೋರಿಸುವುದು ಅನಿವಾರ್ಯ. ಈ ದೃಷ್ಟಿಯಿಂದ ಈ ಸರಕಾರೇತರ ಸಂಸ್ಥೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**೪.೪ ಮಹಿಳಾ ಸಮಾಖ್ಯಾ ಕರ್ನಾಟಕ –ಮಹಿಳಾ ಸಬಲೀಕರಣ ಕ್ಷೇತ್ರ :**

ಸ್ವಾತಂತ್ರದ ನಂತರದಲ್ಲಿ ಸರ್ಕಾರವು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಪ್ರಾಧಾನ್ಯತೆ ಹೆಚ್ಚಿಸಲು ಹಲವಾರು ಕ್ರಮಗಳನ್ನು ಕೈಗೊಂಡಿದೆ. ಇದರಿಂದ ಹಲವಾರು ಉತ್ತಮ ಪರಿಣಾಮಗಳು ಬಂದಿವೆ. ಶಿಕ್ಷಣ ಹೆಚ್ಚುತ್ತಿರುವುದರಿಂದ ಮಹಿಳೆಯರು ಎಲ್ಲ ರಂಗಗಳಲ್ಲಿಯೂ ಪ್ರಗತಿ ಸಾಧಿಸುತ್ತಿದ್ದಾರೆ. ಸಾರ್ವಜನಿಕ ಆಡಳಿತ, ರಾಜಕೀಯ, ಸಾಮಾಜಿಕ ಸೇವೆ, ಮಾಧ್ಯಮ, ಕಲೆ, ಸಾಹಿತ್ಯ ಮತ್ತು ಕಾರ್ಪೋರೇಟ್ ವಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಭಾರತ ಸಂವಿಧಾನದ ಪರಿಚ್ಛೇದ ೧೬ರನ್ವಯ ಮಹಿಳೆಯರಿಗೆ ಉದ್ಯೋಗ ನೀಡುವಲ್ಲಿ ಹಾಗೂ ಇತರ ಕ್ಷೇತ್ರಗಳಲ್ಲಿಯೂ ಪ್ರಾಧಾನ್ಯತೆ ನೀಡಿದೆ. ಇದರಿಂದ ಮಹಿಳೆಯರಿಗೆ ಸಾಂಪ್ರದಾಯಿಕ ಬಂಧನಗಳಿಂದ ಹೊರಬರಲು ಸಾಧ್ಯವಾಗುತ್ತಿದೆ.

ಜಾಗತಿಕ ಜನಸಂಖ್ಯೆಯಲ್ಲಿ ಮಹಿಳೆಯರ ಪಾಲು ಅರ್ಧದಷ್ಟು, ೨/೩ರಷ್ಟು ದುಡಿತದ ಸಹಭಾಗಿತ್ವ, ಜಗತ್ತಿನ ಆದಾಯದಲ್ಲಿ ೧/೧೦ ಭಾಗ ಮಾತ್ರ ಪಾಲುದಾರಿಕೆ, ಜಾಗತಿಕ ಆಸ್ತಿಯಲ್ಲಿ ಅವರದು ಕೇವಲ ೧/೧೦೦ ಭಾಗ ಮಾತ್ರ.

ನಾಗರಿಕತೆ ಬೆಳೆದು ಬಂದಾಗಿನಿಂದ ಸಾಮಾಜಿಕ ಬಂಧನಗಳಲ್ಲಿ ಬಂಧಿಯಾಗಿರುವ ಮಹಿಳೆಯರ ಜೀವನವನ್ನು ಸುಧಾರಿಸಲು ಅವ್ಯಾಹತ ಪ್ರಯತ್ನಗಳು ನಡೆದುಕೊಂಡು ಬಂದಿವೆ.

೧೯೭೫ರಲ್ಲಿ ಪ್ರಥಮ ಬಾರಿ ಅಂತರರಾಷ್ಟ್ರೀಯ ಮಹಿಳಾ ವರ್ಷವೆಂದು ಘೋಷಿಸಲಾಯಿತು. ೧೯೭೫–೮೫ರ ದಶಕವನ್ನು ಮಹಿಳೆಯರ ದಶಕವೆಂದು ಘೋಷಿಸಲಾಯಿತು. ಅಂದಿನಿಂದ ಅಂತರರಾಷ್ಟ್ರೀಯ ಮಟ್ಟದಲ್ಲಿ, ಮಹಿಳಾಪರ ಕಾಳಜಿ, ಚಿಂತನೆಗಳ ಕ್ಷೇತ್ರಕ್ಕೆ ಸರ್ಕಾರದ ನೇರ ಪ್ರವೇಶ ಪ್ರಾರಂಭವಾಯಿತು.

ಈಗಾಗಲೇ ದಾಖಲಿಸಿರುವಂತೆ, ಭಾರತ ಸರ್ಕಾರವೂ ಕೂಡ ತನ್ನ ಹಲವಾರು ಕಾರ್ಯಕ್ರಮ ನೀತಿ ಧೋರಣೆಗಳ ಮೂಲಕ ಗುಣಾತ್ಮಕ ಫಲಿತಾಂಶ ಸಾಧಿಸಿದೆ.

ಪಂಚವಾರ್ಷಿಕ ಯೋಜನೆಗಳು ಮಹಿಳಾ ಸಬಲೀಕರಣದ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಮಹತ್ವದ ಪಾತ್ರ ನಿರ್ವಹಿಸಿವೆ. ಪ್ರಥಮ ಪಂಚವಾರ್ಷಿಕ ಯೋಜನೆಯಿಂದ ೬ನೇ ಪಂಚವಾರ್ಷಿಕ ಯೋಜನೆವರೆಗೆ ಮಹಿಳಾ ಕಲ್ಯಾಣವು ಒಂದು ಪ್ರಮುಖ ಅಂಶವಾಗಿತ್ತು. ಆರನೇ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾ ಕಲ್ಯಾಣ ಪರಿಕಲ್ಪನೆಯಿಂದ ಮಹಿಳಾ ಅಭಿವೃದ್ಧಿಯತ್ತ ಸಬಲೀಕರಣದ ಚಿಂತನೆ ಹರಿಯಿತು. ಇದರೊಂದಿಗೆ ರಾಷ್ಟ್ರೀಯ ಮಹಿಳಾ ಆಯೋಗದ ರಚನೆಯು ಗುಣಾತ್ಮಕ ಬದಲಾವಣೆ ತಂದಿದೆಯಲ್ಲದೆ, ಮಹಿಳೆಯರ ಕಲ್ಯಾಣಕ್ಕೆ ಶ್ರಮಿಸುತ್ತಿದೆ. ಅಂತಿಮವಾಗಿ, ೨೦೦೧ನ್ನು ಮಹಿಳಾ ಸಬಲೀಕರಣ ವರ್ಷವೆಂದು ಘೋಷಿಸಿದ್ದು, ಮಹಿಳಾ ಕಲ್ಯಾಣದಲ್ಲಿ ಮೈಲುಗಲ್ಲಾಯಿತು. ೨೦೦೧ ರಲ್ಲಿ ಮಹಿಳೆಯರ ರಾಷ್ಟ್ರೀಯ ನೀತಿಯನ್ನು ಭಾರತ ಸರ್ಕಾರ ಘೋಷಿಸಿತು.

**ಈ ನೀತಿಯ ಕೆಲವು ಮಹತ್ವದ ಅಂಶಗಳು ಇಂತಿವೆ.**

೧. ಮಹಿಳೆಯರು ತಮ್ಮ ಸಾಮರ್ಥ್ಯದ ಮೇಲೆ ಎದ್ದು ನಿಲ್ಲಲು ಸೂಕ್ತವಾಗುವಂತೆ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ನೀತಿಗಳನ್ನು ರೂಪಿಸುವುದು.

೨. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ಕಾನೂನಿನ ಸ್ತರಗಳಲ್ಲಿ ಮಹಿಳೆಯರು ಪುರುಷರಿಗೆ ಸಮಾನವಾಗಿ ಮಾನವ ಹಕ್ಕುಗಳನ್ನು ಅನುಭವಿಸುವಂತೆ ಮಾಡುವುದು.

೩. ದೇಶದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಜೀವನವನ್ನು ನಿರ್ಧರಿಸುವಾಗ ಸಮಾನ ಅವಕಾಶ ನೀಡುವುದು.

೪. ಉದ್ಯೋಗದಲ್ಲಿ ಸಮಾನ ಸಂಭಾವನೆ, ಔದ್ಯೋಗಿಕ ಆರೋಗ್ಯ, ಮತ್ತು ಸುರಕ್ಷತೆ, ಸಾಮಾಜಿಕ ಭದ್ರತೆ ಮತ್ತು ಸಾರ್ವಜನಿಕ ಆಡಳಿತದಲ್ಲಿ ಸಮಾನ ಭಾಗವಹಿಸುವಿಕೆ.

೫. ಮಹಿಳೆಯರ ವಿರುದ್ಧದ ಯಾವುದೇ ಅಸಮಾನತೆಗಳನ್ನು ಸರಿಪಡಿಸುವಲ್ಲಿ ಕಾನೂನನ್ನು ಸಬಲಗೊಳಿಸುವುದು.

೬. ಸಾಮಾಜಿಕ ಮನೋಭಾವದಲ್ಲಿ ಸಮಾನತೆ ತರುವುದು ಮಹಿಳೆ ಮತ್ತು ಪುರುಷ ಭೇದವನ್ನು ಕೊನೆಗಾಣಿಸುವುದು.

೭. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಲಿಂಗ ಸಮಾನತೆ ವಿಷಯವನ್ನು ಮುಖ್ಯವಾಗಿಸುವುದು.

೮. ಮಹಿಳೆ ಹಾಗೂ ಮಕ್ಕಳ ಮೇಲಿನ ದೌರ್ಜನ್ಯಗಳನ್ನು ಮತ್ತು ಅಸಮಾನತೆಯನ್ನು ತೊಲಗಿಸುವುದು.

೯. ನಾಗರಿಕ ಸಮಿತಿಗಳೊಂದಿಗೆ ಸಹಕಾರ ಹಾಗೂ ಗಟ್ಟಿ ಬಾಂಧವ್ಯವನ್ನು ಗಟ್ಟಿಗೊಳಿಸುವುದು.

ಲಿಂಗ ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಸರ್ಕಾರ ಹಲವಾರು ಕ್ರಮಗಳನ್ನು ಕೈಗೊಂಡಿದ್ದರೂ ಸಾಕಾಗುತ್ತಿಲ್ಲ. ಮಹಿಳಾ ಸಮಸ್ಯೆಗಳು ಇನ್ನೂ ಜೀವಂತವಾಗಿವೆ. ವರದಕ್ಷಿಣೆ ಸಾವು, ದಬ್ಬಾಳಿಕೆ, ಅನೈತಿಕ ದೌರ್ಜನ್ಯ, ಕೊಲೆಗಳು ತೀವ್ರವಾಗಿ ಕಾಡುತ್ತಿವೆ.

ಮಹಿಳಾ ಸಬಲೀಕರಣ ಯೋಜನೆ ಸಂಪೂರ್ಣ ಯಶಸ್ವಿ ಆಗಬೇಕಾದರೆ ಮಹಿಳೆಯರ ಮೇಲಿನ ದೌರ್ಜನ್ಯಗಳು ಕೊನೆಗೊಳ್ಳಬೇಕು. ಮಹಿಳಾ ಸಬಲೀಕರಣದ ಅಧ್ಯಯನದ ಅಂಗವಾಗಿ 'ಮಹಿಳಾ ಸಮಾಖ್ಯಾ ಕರ್ನಾಟಕ' ಬೆಳಗಾವಿ ಎಂಬ ಸರ್ಕಾರೇತರ ಸಂಸ್ಥೆಯನ್ನು ಆಯ್ಕೆಯನ್ನು ಮಾಡಿಕೊಳ್ಳಲಾಗಿದೆ. ಈ ಮೂಲಕ ಮಹಿಳಾ ಸಬಲೀಕರಣದ ಕ್ಷೇತ್ರದಲ್ಲಿ ಸರಕಾರೇತರ ಸಂಸ್ಥೆಗಳ ಪಾತ್ರವನ್ನು ಅರಿಯಲು ಪ್ರಯತ್ನಿಸಲಾಗಿದೆ.

**ಮಹಿಳಾ ಸಮಾಖ್ಯಾ ಕರ್ನಾಟಕ:**

ಶಿಕ್ಷಣ ಇಲಾಖೆಯಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಆದೇಶದಂತೆ ೧೯೮೯ರಲ್ಲಿ ಮಹಿಳಾ ಸಮಾಖ್ಯಾ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ೧೯೮೬ರ ನೂತನ ಶಿಕ್ಷಣ ನೀತಿಯ ಪ್ರಕಾರ ಜನ್ಮ ಪಡೆದ ಈ ಯೋಜನೆ, ಲಿಂಗ ಸಮಾನತೆಗೆ ಮಹಿಳಾ ಶಿಕ್ಷಣವೊಂದೇ ಪರಿಹಾರ ಎಂದು ಕಂಡುಕೊಂಡಿದೆ. ಮಹಿಳಾ ಸಮಾಖ್ಯಾ ಯೋಜನೆ ಎಂದರೆ, ಕಡುಬಡವ ಗ್ರಾಮೀಣ ಮಹಿಳೆಯರನ್ನು ಸಬಲಿಕರಣಗೊಳಿಸುವುದು. ಪ್ರಸ್ತುತ ಈ ಯೋಜನೆಯು ಕರ್ನಾಟಕ, ಗುಜರಾತ, ಆಂಧ್ರಪ್ರದೇಶ, ಕೇರಳ, ಆಸ್ಸಾಂ ರಾಜ್ಯಗಳಲ್ಲಿ ಜಾರಿಯಲ್ಲಿದೆ. ಇದು ಸರ್ಕಾರದ ಕಾರ್ಯಕ್ರಮವಾಗಿದ್ದರೂ ಇದನ್ನು ಸಂಪೂರ್ಣ ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ಆಯಾ ರಾಜ್ಯಗಳ ಆಯ್ದ ಸರ್ಕಾರೇತರ ಸಂಸ್ಥೆಗಳು ವಹಿಸಿಕೊಂಡಿವೆ.

ಕರ್ನಾಟಕದಲ್ಲಿ ೧೯೮೯ ರಲ್ಲಿ ಶ್ರೀಮತಿ ಶ್ರೀಲತಾ ಬಾಟ್ಲಿವಾಲಾ ಅವರ ನೇತೃತ್ವದಲ್ಲಿ ಈ ಯೋಜನೆ ಪ್ರಾರಂಭಗೊಂಡಿದ್ದು, ಬೆಳಗಾವಿ ಜಿಲ್ಲೆಯಲ್ಲಿ ೨೦೦೬ ರಲ್ಲಿ ಮಹಿಳಾ ಸಮಾಖ್ಯಾ ಸ್ಥಾಪನೆಗೊಂಡು ಶ್ರೀಮತಿ ಸುನೀತಾ ಪೋತದಾರ ಪ್ರಥಮ ಜಿಲ್ಲಾ ಕಾರ್ಯಕ್ರಮ ಸಂಯೋಜಕರಾಗಿ ಚಾಲನೆ ನೀಡಿದರು. ಸಧ್ಯ ಶ್ರೀಮತಿ ಆರತಿ ಸೊಬರದ ಅವರು ಜಿಲ್ಲಾ ಕಾರ್ಯಕ್ರಮ ಸಂಯೋಜಕರಾಗಿ ಸಂಸ್ಥೆಯನ್ನು ಮುನ್ನಡೆಸಿಕೊಂಡು ಹೋಗುತ್ತಿದ್ದಾರೆ.

**ಕಾರ್ಯಯೋಜನೆ : ಶಿಕ್ಷಣ ಮೂಲಕ ಮಹಿಳಾ ಸಬಲೀಕರಣ :**

ಮಹಿಳಾ ಸಮಾಖ್ಯಾ ಯೋಜನೆಯು ಶಿಕ್ಷಣವನ್ನು ಮಹಿಳಾ ಸಬಲೀಕರಣದ ಪ್ರಮುಖ ಉಪಕರಣವೆಂದು ಪರಿಗಣಿಸಿದೆ. 'ಶಿಕ್ಷಣ' ಎಂಬುದು, ಮಹಿಳಾ ಸಬಲೀಕರಣಕ್ಕೆ ಕೇವಲ ಉಪಾಯವಾಗಿರದೇ ಮಹಿಳೆಯರಲ್ಲಿ ನೈಪುಣ್ಯತೆಯನ್ನು ಹೆಚ್ಚಿಸಿ ಅವರ ಜೀವನದಲ್ಲಿ ಹಾಗೂ ಸಮಾಜದಲ್ಲಿ ಬದಲಾವಣೆ ತರುವುದಾಗಿದೆ. ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರವನ್ನು ಗ್ರಹಿಸುವ ವ್ಯವಸ್ಥೆಯಲ್ಲಿಯೇ ಬದಲಾವಣೆ ತರುವ ದೃಷ್ಟಿಕೋನವನ್ನು ಹೊಂದಿದೆ.

ಇದರಿಂದ ಮಹಿಳೆಯರಲ್ಲಿ ಅದರಲ್ಲೂ ವಿಶೇಷವಾಗಿ ಆರ್ಥಿಕವಾಗಿ ಹಿಂದುಳಿದ ಮತ್ತು ಅಲ್ಪಸಂಖ್ಯಾತರಲ್ಲಿ ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ಳುವ ಸಾಮರ್ಥ್ಯ ಬೆಳೆದು, ಏಕಾಂಗಿತನ ನೀಗಿ, ಆತ್ಮಸ್ಥೈರ್ಯ ಮೂಡಿ ಸಾಮಾಜಿಕ ರೂಢಿಗಳನ್ನು ಪ್ರತಿರೋಧಿಸುವ ಹೋರಾಟದ ಗುಣಗಳು ಬಲಗೊಳ್ಳುತ್ತವೆ. ಈ ಪ್ರಕ್ರಿಯೆಯ ಮೂಲಕವೇ ಮಹಿಳಾ ಸಬಲೀಕರಣ ಸಾಧ್ಯವಾಗುತ್ತದೆ.

ಈ ಕಾರ್ಯಕ್ರಮವು ವಿಭಿನ್ನವಾಗಿದ್ದು ಸಾಮಾನ್ಯ ಶಿಕ್ಷಣ ವ್ಯವಸ್ಥೆಯಿಂದ ದೂರ ಉಳಿದವರ ನೆರವಿಗೆ ಬರುತ್ತದೆ. ಸಮಸ್ಯೆಗಳನ್ನು ವಿಶ್ಲೇಷಿಸುವ ಹಾಗೂ ಪರಿಹರಿಸುವ ವಿಧಾನವನ್ನು ಮಹಿಳೆಯರಿಗೆ ಕಲಿಸುತ್ತದೆ. ಕಳೆದ ೧೫ ವರ್ಷಗಳ ಅನುಭವದ ಪ್ರಕಾರ, ಸಮಾಖ್ಯಾ ಯೋಜನೆಯು, ಮಹಿಳೆಯರನ್ನು ಪ್ರೇರೇಪಿಸುವ ಹಾಗೂ ಸಂಘಟಿಸುವ ಸರಿಯಾದ ವ್ಯವಸ್ಥೆಯಾಗಿದೆ.

ಇದು ೧೨ ಜಿಲ್ಲೆಗಳಲ್ಲಿ ಅಂದರೆ, ಬಾಗಲಕೋಟ, ಬೆಳಗಾವಿ, ಬಳ್ಳಾರಿ, ಬೀದರ, ಬಿಜಾಪೂರ, ಚಾಮರಾಜನಗರ, ಚಿಕ್ಕಬಳ್ಳಾಪೂರ, ಗದಗ, ಗುಲಬರ್ಗಾ, ಕೊಪ್ಪಳ, ಮೈಸೂರು ಮತ್ತು ರಾಯಚೂರಗಳಲ್ಲಿ ಕಾರ್ಯನಿರ್ವಹಿಸುತ್ತಿದೆ. ೨೪೦೦ ಗ್ರಾಮಗಳಲ್ಲಿ ಅಸ್ಥಿತ್ವ ಹೊಂದಿದ್ದು ೬೦,೦೦೦ ಮಹಿಳೆಯರನ್ನು ಒಳಗೊಂಡಂತೆ ಒಟ್ಟು ೩೫೦೦ ಸಂಘಗಳನ್ನು ರಚಿಸಿದೆ. ಈ ಸಂಘಗಳು ಬ್ಲಾಕ್‌ಮಟ್ಟದಲ್ಲಿ ಒಕ್ಕೂಟಗಳನ್ನು ರಚಿಸಿಕೊಂಡಿದ್ದು, ಒಟ್ಟು ೩೬ ತಾಲೂಕುಗಳಲ್ಲಿ ಪಸರಿಸಿವೆ.

**ಯೋಜನೆಯ ಉದ್ದೇಶಗಳು:**

ಈ ಯೋಜನೆಯ ಮುಖ್ಯ ಉದ್ದೇಶವೇನೆಂದರೆ, ಮಹಿಳೆಯರನ್ನು ಒಂದುಗೂಡಿಸಿ, ಒಕ್ಕಟ್ಟಿನಿಂದ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವಂತೆ ಪ್ರೇರೇಪಿಸುವುದು ಹಾಗೂ ವಿಭಿನ್ನ ಸಮಸ್ಯೆಗಳಿಗೆ ತಾವೇ ಪರಿಹರಿಸುವ ವಿಧಾನವನ್ನು ಕಂಡುಕೊಳ್ಳುವಂತೆ ಮಾಡುವುದು.

ಈ ಯೋಜನೆಯ ನಿರ್ದಿಷ್ಠತೆಗಳೇನೆಂದರೆ, ಸುರಕ್ಷಿತ ಹಾಗೂ ಪೂರಕ ವಾತಾವರಣ ಸೃಷ್ಟಿಸುವುದು, ಅಲ್ಲಿ ಮಹಿಳೆಗೆ ಅಗತ್ಯವಾದ ಮಾಹಿತಿ, ಜ್ಞಾನ, ನೀಡುವುದು, ಇದರೊಂದಿಗೆ ಮಹಿಳೆಯರು ಹಾಗೂ ಯುವತಿಯರು ಸಮೂಹದಲ್ಲಿ ಸೇರಿಕೊಳ್ಳುವಂತೆ ನೋಡುವುದು. ಶೈಕ್ಷಣಿಕ ಚಟುವಟಿಕೆಗಳನ್ನು ಕ್ರೀಯಾಶೀಲತೆಯಿಂದ ನಡೆಸುವುದು ಹಾಗೂ ನಿರ್ವಹಿಸುವುದು. ಅವರಲ್ಲಿ ಮಹಿಳಾ ಸಮಾನತೆ ಹಾಗೂ ಸ್ವಮೌಲ್ಯದ ಪ್ರಜ್ಞೆಯನ್ನು ಬೆಳೆಸುವುದು.

**ಮಹಿಳಾ ಸಾಮಾಖ್ಯಾ ಕರ್ನಾಟಕ, ಬೆಳಗಾವಿ ಜಿಲ್ಲೆಯ ಚಿತ್ರಣ**

| | | |
|---|---|---|
| ಒಟ್ಟು ತಾಲೂಕುಗಳು (ವ್ಯಾಪ್ತಿ) | : | ೦೪ |
| ಒಟ್ಟು ಘಟಕಗಳು | : | ೧೬ |
| ಒಟ್ಟು ಹಳ್ಳಿ | : | ೧೮೮ |
| ಒಟ್ಟು ಸಂಘ | : | ೧೮೬ |
| ಒಟ್ಟು ಮಹಿಳೆಯರ ಸಂಖ್ಯೆ | : | ೬೭೮೧ |
| ಒಟ್ಟು ಊರಿಗೊಂದು ಸಂಘ | : | ೧೦೦ |
| ಒಟ್ಟು ಉಳಿತಾಯ ಮಾಡುವ ಮಹಿಳೆಯರು | : | ೧೭೩ |
| ಚುನಾಯಿತ ಮಹಿಳಾ ಪ್ರತಿನಿಧಿಗಳು | : | ೨೭೫೨ |
| ಅಧ್ಯಕ್ಷರು | : | ೫೧ |
| ಉಪಾಧ್ಯಾಕ್ಷರು | : | ೦೫ |
| ಸದಸ್ಯರು | : | ೦೩ |
| ಎಸ್.ಡಿ.ಎಮ್.ಸಿ, ಸದಸ್ಯರು | : | ೪೩ |
| ಕಿಶೋರಿಯರ ಗುಂಪು | : | ೪೧ |
| ಒಟ್ಟು ಕಿಶೋರಿಯರು | : | ೧೧೦ |
| ಕಿಶೋರರ ಗುಂಪು | : | ೨೯೩೬ |
| ಒಟ್ಟು ಕಿಶೋರರು | : | ೭೦ |

| | | |
|---|---|---|
| ಸಾಕ್ಷರ ಸಾಮಾಖ್ಯಾ ಕಾರ್ಯಕ್ರಮ | : | ೧೭೨೪ |
| ಒಟ್ಟು ನಿರಂತರವಾಗಿ ಕೇಂದ್ರ ನಡೆಯುತ್ತಿರುವ ಗ್ರಾಮ | : | ೩೨ |
| ಒಟ್ಟು ನಿರಂತರವಾಗಿ ನಡೆಯುತ್ತಿರುವ ಕೇಂದ್ರ | : | ೩೭ |
| ಒಟ್ಟು ನಿರಂತರವಾಗಿ ಕಲಿಯುತ್ತಿರುವ ಮಹಿಳೆಯರು | : | ೬೦೪ |

ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಿಂದ ಮಹಿಳಾ ಸಮಾಖ್ಯಾವು ಕಾರ್ಯನಿರ್ವಹಿಸುತ್ತಿದೆ. ಊರಿಗೊಂದು ಸಂಘದ ರಚನೆ ಮತ್ತು ಮಹಿಳೆಯರ ಸಾಮರ್ಥ್ಯ ಬಲವರ್ಧನೆಯ ನಿಟ್ಟಿನಲ್ಲಿ ಮಹಿಳಾ ಮಾಹಿತಿ ಮೇಳ, ಕಿಶೋರಿ ಮೇಳ, ಸಮಿತಿ ತರಬೇತಿಗಳ ಮುಖಾಂತರ ಮಾಹಿತಿಗಳನ್ನು ನೀಡುತ್ತಿರುವುದು ಹಾಗೂ ಅದರ ಅನುಸರಣೆಯನ್ನು ಗ್ರಾಮ ಮಟ್ಟದಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳಿಸುವಂತೆ ಮಹಿಳೆಯರಲ್ಲಿ ಅರಿವು ಮೂಡಿಸುತ್ತಿದೆ.

ಸ್ಥಳೀಯವಾಗಿ ಸಮುದಾಯ, ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳೊಂದಿಗೆ ಉತ್ತಮ ಬಾಂಧವ್ಯ ಹಾಗೂ ಸಂಪರ್ಕ ಬೆಸೆಯುವ ದಿಶೆಯಲ್ಲಿ ಘಟಕ ಮಟ್ಟದಲ್ಲಿ ಸಂಪರ್ಕ ಸಭೆಗಳನ್ನು ಏರ್ಪಡಿಸುವುದು. ಆ ಮೂಲಕ ಸಂಘ ಮತ್ತು ಇಲಾಖೆಗಳೊಂದಿಗೆ ಸಂಪರ್ಕಜಾಲವನ್ನು ಗಟ್ಟಿಗೊಳಿಸುತ್ತಿದೆ. ಸಮುದಾಯದ ಸಮಸ್ಯೆಗಳಿಗೂ ಮಹಿಳೆಯರು ಸ್ಪಂದಿಸಿ, ಮಾರ್ಗದರ್ಶನ ಮಾಡುತ್ತಿದ್ದು, ಸಮುದಾಯದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿರುವುದು ಸಂತಸದ ವಿಷಯವಾಗಿದೆ. ಅಷ್ಟೇ ಅಲ್ಲದೆ ಸಮುದಾಯದ ಮತ್ತು ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ ಮಹಿಳೆಯರು ಸಕ್ರೀಯವಾಗಿ ಪಾಲ್ಗೊಂಡು, ವ್ಯವಸ್ಥೆಗಳು ಸರಳವಾಗಿ ಸಾಗುವುದಕ್ಕೆ ಸ್ಫೂರ್ತಿ ನೀಡಿದ್ದಾರೆ. ಈ ಹಿನ್ನಲೆಯಲ್ಲಿ ಮಹಿಳಾ ಸಮಾಖ್ಯಾ ಗುಂಪುಗಳು ಸ್ವಾವಲಂಬನೆ ದಾರಿಯಲ್ಲಿ ಹೆಜ್ಜೆ ಹಾಕುವುದರೊಂದಿಗೆ ಎಲ್ಲರ ಗಮನ ಸೆಳೆಯುತ್ತಿವೆ. ಈ ಬಗ್ಗೆ ಮಹಿಳಾ ಸಮಖ್ಯಾ ಬೆಳಗಾವಿಯು ಕೈಗೊಂಡಿರುವ ಕಾರ್ಯಕ್ರಮಗಳ ವಿವರವನ್ನು ಈ ಕೆಳಗೆ ನೀಡಲಾಗಿದೆ.

**ಮಹಿಳಾ ಸಮಾಖ್ಯಾ ಕಾರ್ಯ ಸ್ವರೂಪ :**

ಗ್ರಾಮದ ಮನೆ ಮನೆಗೆ ಭೇಟಿ ನೀಡಿ ಸಂಸ್ಥೆಯ ಉದ್ದೇಶ ತಿಳಿಸುವುದು. ಸ್ಥಳೀಯ ಅಧಿಕಾರಿಗಳು ಮತ್ತು ಗ್ರಾಮದ ಮುಖ್ಯಸ್ಥರಿಗೆ ಕಾರ್ಯಕ್ರಮದ ರೂಪ ರೇಷೆಗಳನ್ನು ಪರಿಚಯಿಸುವುದು. ತನ್ಮೂಲಕ ಕಾರ್ಯಕ್ರಮದ ಅನುಷ್ಠಾನಕ್ಕೆ ಸಹಾಯ ಪಡೆಯುವುದು. ಅವಶ್ಯವಿರುವ ಕೆಲವು ಗ್ರಾಮಗಳಲ್ಲಿ ಪುರುಷರಿಗೂ ಲಿಂಗ ಸಮಾನತೆಯ ಅರಿವು ಮೂಡಿಸಿ, ಮಹಿಳೆಯರಿಗೆ ಸಮಯಾವಕಾಶ ಒದಗಿಸಿ ಕೊಡುವುದಕ್ಕೆ ಮನವೊಲಿಸುವ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು.

ಮಹಿಳಾ ಸಮಾಖ್ಯಾ ಕಾರ್ಯಚಟುವಟಿಕೆಗಳನ್ನು ಹಂತ ಹಂತವಾಗಿ ಅನುಷ್ಠಾನಗೊಳಿಸುವುದರೊಂದಿಗೆ ಮಹಿಳೆಯರ ಪಾಲ್ಗೊಳ್ಳುವಿಕೆಯ ಕಡೆಗೆ ಹೆಚ್ಚಿನ ಗಮನ ಹರಿಸುತ್ತಿದೆ. ಅದರಿಂದಾಗಿ ಮಹಿಳೆಯರು ಕಾರ್ಯಕ್ರಮಗಳಲ್ಲಿ ಆಸಕ್ತಿಯಿಂದ ಮತ್ತು ಕ್ರಿಯಾಶೀಲರಾಗಿ ಭಾಗವಹಿಸುತ್ತಿದ್ದು, ತಮ್ಮ ಪಾತ್ರ ಮತ್ತು ಜವಾಬ್ದಾರಿಯನ್ನು ಅರಿತು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇದರಿಂದಾಗಿ ಗ್ರಾಮ ಮಟ್ಟದಲ್ಲಿ ಸಂಘವು ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುತ್ತಿದೆ.

ಇದಕ್ಕೆ ಪೂರಕವಾಗಿ ಕಿಶೋರಿಯರಿಗೆ ಕಿಶೋರಿ ಮಾಹಿತಿ ಮೇಳ ಮತ್ತು ಕಿಶೋರರಿಗೆ ಲಿಂಗ ಸಮಾನತೆಯ ಅರಿವು ಮೂಡಿಸುವ ತರಬೇತಿ ಶಿಬಿರಗಳನ್ನು ಏರ್ಪಡಿಸುವ ಮೂಲಕ ತನ್ನ ಉದ್ದೇಶ ಸಾಧಿಸುತ್ತಿದೆ. ಕಿಶೋರಿ,ಕಿಶೋರರು ಕಿಶೋರಾವಸ್ಥೆಯ ಹಂತದಲ್ಲಿ ಅವಶ್ಯಕ ಮಾಹಿತಿಯನ್ನು ಪಡೆದುಕೊಂಡು, ಮಹಿಳೆಯರ ಚಟುವಟಿಕೆಯಲ್ಲೂ ಆಸಕ್ತಿಯಿಂದ ಭಾಗವಹಿಸುತ್ತಿರುವುದು ಪ್ರಶಂಸನೀಯವಾಗಿದೆ.

*ಕೋಷ್ಟಕ – ೪.೩.೧ : ಉಳಿತಾಯ ಗುಂಪಿನ ವಿವರ*

| ಕ್ರಸಂ | ತಾಲೂಕ | ೨೦೦೮-೦೯ | | | | ೨೦೦೯-೧೦ | | | |
|---|---|---|---|---|---|---|---|---|---|
| | | ಘಟಕ | ಗ್ರಾ.ಸಂ | ಉ.ಗುಂ.ಸಂ | ಮ.ಸಂ | ಘಟಕ | ಗ್ರಾ.ಸಂ | ಉ.ಗುಂ.ಸಂ | ಮ.ಸಂ |
| ೧ | ರಾಮದುರ್ಗ | ೪ | ೬೩ | ೬೮ | ೧೩೬೪ | ೪ | ೫೬ | ೫೪ | ೧೧೬೩ |
| ೨ | ಸವದತ್ತಿ | ೫ | ೪೬ | ೭೯ | ೧೩೫೮ | ೫ | ೫೨ | ೯೮ | ೧೭೩೨ |
| ೩ | ಗೋಕಾಕ | ೫ | ೨೫ | ೨೭ | ೫೨೯ | ೫ | ೫೦ | ೩೩ | ೫೦೭ |
| ೪ | ರಾಯಬಾಗ | – | – | – | – | ೩ | ೩೦ | ೦೧ | ೧೩ |
| | ಒಟ್ಟು | ೧೪ | ೧೩೪ | ೧೭೪ | ೩೨೫೧ | ೧೭ | ೧೮೮ | ೧೮೬ | ೩೪೧೫ |

*ಮೂಲ: ಮಹಿಳಾ ಸಮಾಖ್ಯಾ ಕರ್ನಾಟಕ,ಬೆಳಗಾವಿ ಜಿಲ್ಲೆ ವಾರ್ಷಿಕ ವರದಿ ೨೦೦೯-೧೦*

**ಕಾರ್ಯಕ್ರಮದ ವಿಸ್ತರಣೆಯ ಕಾರ್ಯತಂತ್ರಗಳು:**

- ಸ್ಥಳೀಯ ಅಧಿಕಾರಿಗಳು ಮತ್ತು ಗ್ರಾಮದ ಮುಖ್ಯಸ್ಥರನ್ನು ಭೇಟಿ ಮಾಡಿ ಕಾರ್ಯಕ್ರಮದ ಉದ್ದೇಶ ಪರಿಚಯಿಸುವುದು
- ಮನೆ-ಮನೆಗೆ ಭೇಟಿ ನೀಡುವುದರ ಮೂಲಕ, ಮಹಿಳೆಯರ ಮನವೊಲಿಸುವುದು.
- ಊರಿಗೊಂದು ಸಂಘ ರಚನೆ.
- ಘಟಕ ಮಟ್ಟದಲ್ಲಿ ಸಂಪರ್ಕ ಸಭೆಗಳನ್ನು ಮಾಡುವುದು.
- ಪುರುಷರಿಗೆ ಕಿಶೋರರಿಗೆ ಲಿಂಗ ಸಮಾನತೆ ಪರಿಕಲ್ಪನೆಯ ತರಬೇತಿಗಳನ್ನು ನಡೆಸುವುದು.
- ಕಿಶೋರಿ ಕಿಶೋರರಿಗೆ ಗ್ರಾಮ ತಾಲೂಕು ಮಟ್ಟದಲ್ಲಿ ಶಿಬಿರಗಳನ್ನು ಏರ್ಪಡಿಸುವುದು.

*ಕೋಷ್ಟಕ – ೪.೩.೨ : ಕಾರ್ಯ ಕ್ಷೇತ್ರದ ಸಂಘಟನೆಯ ವಿವರ*

| ಕ್ರ ಸಂ | ತಾಲೂಕ | ಗ್ರಾಮ | ಉ.ಗುಂ | ಊ. ಸಂಘ | ಮ.ಸಂ | ಅಕ್ಷರಸ್ಥರು | ಅನಕ್ಷರಸ್ಥರು | | | ಜಾತಿ ವಿವರ | | |
|---|---|---|---|---|---|---|---|---|---|---|---|---|
| | | | | | | | ೧೮–೩೫ | ೩೫–೪೫ | ೪೫ ಮೇಲ್ಪಟ್ಟು | ಪ.ಜಾ | ಪ.ಪಂ | ಇತರ |
| ೧ | ರಾಮದುರ್ಗ | ೫೬ | ೫೪ | ೩೭ | ೨೮೫೩ | ೮೫೮ | ೮೭೮ | ೫೮೯ | ೫೨೮ | ೨೬೬ | ೫೫೬ | ೨೦೩೧ |
| ೨ | ಸವದತ್ತಿ | ೫೨ | ೯೮ | ೩೦ | ೨೧೩೪ | ೩೬೯ | ೬೯೨ | ೬೯೮ | ೩೭೫ | ೨೯೬ | ೫೪೩ | ೧೨೯೫ |
| ೩ | ಗೋಕಾಕ | ೫೦ | ೩೩ | ೩೩ | ೧೭೯೪ | ೩೯೯ | ೪೪೫ | ೫೮೨ | ೩೬೮ | ೩೧೫ | ೬೨೯ | ೮೫೦ |
| ೪ | ರಾಯಬಾಗ | ೩೦ | – | – | – | – | – | – | – | – | – | – |
| ಒಟ್ಟು | | ೧೮೮ | ೧೮೬ | ೧೦೦ | ೬೭೮೧ | ೧೬೨೬ | ೨೦೧೫ | ೧೮೬೯ | ೧೨೭೧ | ೮೭೭ | ೧೭೨೮ | ೪೧೭೬ |

## ಗ್ರಾಮ / ಘಟಕ ಮಟ್ಟದ ಕಾರ್ಯಕ್ರಮಗಳು:

- ಘಟಕ ಮಟ್ಟದ ಮಾಹಿತಿ ಮೇಳ
- ಪುರುಷರಿಗೆ ಲಿಂಗ ಸಮಾನತೆಯ ಅರಿವು ಮೂಡಿಸುವ ಶಿಬಿರ
- ಕಿಶೋರಿ ಅನುಸರಣಾ ಸಭೆ
- ಸಂಪರ್ಕ ಸಭೆ.
- ಬಾಲ್ಯ ವಿವಾಹ ನಿಷೇದ ಶಿಬಿರ
- ಸಹಭಾಗಿತ್ವದ ಗ್ರಾಮೀಣ ಸಮೀಕ್ಷೆ

## ಘಟಕ ಮಟ್ಟದ ಮಾಹಿತಿ ಮೇಳ:

ಕಳೆದ ವರ್ಷವಷ್ಟೇ ಗೋಕಾಕ ಮತ್ತು ಸವದತ್ತಿ ತಾಲೂಕಿನ ಹೊಸ ಘಟಕಗಳಿಗೆ ಇದು ತನ್ನ ಕಾರ್ಯಕ್ರಮಗಳನ್ನು ವಿಸ್ತರಿಸಿದೆ.

*ಕೋಷ್ಟಕ – ೪.೩.೩ : ಮಾಹಿತಿ ಮೇಳದಲ್ಲಿ ಭಾಗವಹಿಸಿದ ಮಹಿಳೆಯರ ವಿವರ:*

| ಕ್ರ.ಸಂ. | ತಾಲೂಕ | ಘಟಕ | ಗ್ರಾಮ ಸಂಖ್ಯೆ | ಭಾಗವಹಿಸಿದ ಮ.ಸಂ. |
|---|---|---|---|---|
| ೧ | ಗೋಕಾಕ | ಅಂಕಲಗಿ | ೭ | ೬೧ |
| ೨ | ಸವದತ್ತಿ | ಮುನವಳ್ಳಿ | ೧೫ | ೨೪೯ |
| ೩ | ಸವದತ್ತಿ | ಮುರಗೋಡು | ೧೦ | ೧೧೦ |
| | | ಒಟ್ಟು | ೩೨ | ೪೨೦ |

**ಪುರುಷರಿಗೆ ಲಿಂಗ ಸಮಾನತೆ ತರಬೇತಿ ಶಿಬಿರ:**

ಕೆಲವು ಗ್ರಾಮಗಳಲ್ಲಿ ಸಭೆ ಮತ್ತು ತರಬೇತಿಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯು ಕಡಿಮೆ ಪ್ರಮಾಣದಲ್ಲಿತ್ತು. ಇದಕ್ಕೆ ಮುಖ್ಯವಾಗಿ ಪುರುಷರು ಮಹಿಳೆಯರಿಗೆ ಸಹಕರಿಸದಿರುವುದು ಮತ್ತು ಲಿಂಗ ಅಸಮಾನತೆಯು ಪ್ರಮುಖ ಕಾರಣವಾಗಿತ್ತು. ಹಾಗಾಗಿ ಇಂತಹ ಗ್ರಾಮಗಳ ಆಯ್ಕೆಯ ಆಧಾರದ ಮೇಲೆ ಮಹಿಳೆಯರಿಗೆ ಸಭೆ ಮತ್ತು ತರಬೇತಿಯಲ್ಲಿ ಭಾಗವಹಿಸಲು ಪೂರಕ ವಾತಾವರಣ ಕಲ್ಪಿಸುವ ದೃಷ್ಟಿಯಿಂದ ಆಯ್ದ ಕೆಲವು ಗ್ರಾಮಗಳಲ್ಲಿ ಲಿಂಗ ಸಮಾನತೆ ಅರಿವು ಮೂಡಿಸುವ ಶಿಬಿರಗಳನ್ನು ಪುರುಷರಿಗಾಗಿ ಹಮ್ಮಿಕೊಂಡಿತು. ಈ ತರಬೇತಿ ಶಿಬಿರಗಳಲ್ಲಿ ಕುಟುಂಬದ ಜವಾಬ್ದಾರಿ ಹಂಚಿಕೆ ಮತ್ತು ಸ್ತ್ರೀ – ಪುರುಷರ ಸಮಾನತೆ ವಿಷಯವನ್ನು ತಿಳಿಸಲಾಯಿತು. ಇದಕ್ಕಾಗಿ ನೌತಿಕ, ಕಥೆ, ಹಾಡು, ಸಂಭಾಷಣೆ ಮೊದಲಾದ ವಿಧಾನಗಳನ್ನು ಸಂಸ್ಥೆ ಬಳಸಿಕೊಂಡು, ಯಶಸ್ಸು ಸಾಧಿಸಿತು.

***ಕೋಷ್ಟಕ – ೪.೩.೪ : ಸ್ತ್ರೀ – ಪುರುಷ ಸಹಭಾಗಿತ್ವದ ತರಬೇತಿ ವಿವರ:***

| ಕ್ರ.ಸಂ. | ಘಟಕ/ಗ್ರಾಮ | ಭಾಗಾರ್ಥಿಗಳು | | ಒಟ್ಟು |
|---|---|---|---|---|
| ತಾಲೂಕಾ : ಗೋಕಾಕ | | ಪುರುಷರು | ಮಹಿಳೆಯರು | |
| ೧ | ಉಪ್ಪಾರಹಟ್ಟಿ | ೧ | ೧೮ | ೧೯ |
| ೨ | ಕೈತನಾಳ | ೨ | ೩೮ | ೪೦ |
| ೩ | ಹೊಸಯರಗುದ್ರಿ | ೧೪ | ೨೨ | ೩೬ |
| ೪ | ಪಾಮಲದಿನ್ನಿ | ೯ | ೨೦ | ೨೯ |
| ೫ | ಮಾಲದಿನ್ನಿ | ೧೧ | ೯ | ೨೦ |
| ೬ | ಅಡಿಬಟ್ಟಿ | ೧೪ | ೬ | ೨೦ |
| ೭ | ಕಪ್ಪರಟ್ಟಿ | ೧೮ | ೧೮ | ೩೬ |
| ತಾಲೂಕಾ : ಸವದತ್ತಿ | | | | |
| ೧ | ಶಿರಸಂಗಿ | ೫ | ೨೧ | ೨೬ |
| ೨ | ಕೊಟೂರು | ೨೨ | ೧೦ | ೩೨ |
| ೩ | ಹಿರೂರು | ೩೫ | ೨೧ | ೫೬ |
| ೪ | ಗೋವಿನಕೊಪ್ಪ | ೩೫ | ೨೧ | ೫೬ |
| ೫ | ಬಸಿಡೋಣಿ | ೩೦ | ೧೬ | ೪೬ |
| ತಾಲೂಕಾ : ರಾಮದುರ್ಗ | | | | |
| ೧ | ಗುದಗೊಪ್ಪ | ೨೧ | ೩೦ | ೫೧ |
| ೨ | ಚಿಕ್ಕಮುಲಂಗಿ | ೮ | ೮ | ೧೬ |
| ೩ | ಇಡಗಲ್ಲ್ | ೨೦ | ೧೨ | ೩೨ |
| ೪ | ಸಿದ್ನಾಳ | ೨೦ | ೧೦ | ೩೦ |
| ೫ | ತಿಮ್ಮಾಪೂರ | ೨೦ | ೧೬ | ೩೬ |
| ಒಟ್ಟು | ೧೭ ಗ್ರಾಮ | ೨೮೫ | ೨೯೬ | ೫೮೧ |

ಒಟ್ಟು ೧೭ ಗ್ರಾಮಗಳಲ್ಲಿ ಪುರುಷರಿಗೆ ಲಿಂಗ ಸಮಾನತೆಯ ತರಬೇತಿ ಶಿಬಿರ ಆಯೋಜಿಸಲಾಗಿತ್ತು. ಇದರಲ್ಲಿ ೨೮೫ ಪುರುಷರು ಮತ್ತು ೨೯೬ ಮಹಿಳೆಯರು ಒಟ್ಟು ೫೮೧ ಜನ ಈ ತರಬೇತಿಯಲ್ಲಿ ಭಾಗವಹಿಸಿದ್ದರು.

***ಕೋಷ್ಟಕ – ೪.೩.೫ : ಕಿಶೋರ ಮತ್ತು ಕಿಶೋರಿಯರಿಗೆ ಲಿಂಗ ಸಮಾನತೆಯ ಅರಿವು ಮೂಡಿಸುವ ಶಿಬಿರ ವಿವರ***

| ಕ್ರಸಂ. | ಘಟಕ / ಗ್ರಾಮ | ಭಾಗಾರ್ಥಿಗಳು | | ಒಟ್ಟು |
|---|---|---|---|---|
| | | ಕಿಶೋರ | ಕಿಶೋರಿ | |
| ೧ | ಎಮ್. ತಿಮ್ಮಾಪುರ | ೨೩ | – | ೨೩ |
| ೨ | ಗೋವಿನಕೊಪ್ಪ | ೨೨ | ೨೨ | ೪೪ |
| ೩ | ಹಣಮಾಪುರ | – | ೩೪ | ೩೪ |
| ೪ | ಮುಗಳಿಹಾಳ | – | ೩೪ | ೩೪ |
| ೫ | ಗೋಣಗನೂರ | ೨೦ | ೧೫ | ೩೫ |
| ೬ | ಲ.ಕೊಪ್ಪ | ೦೭ | ೩೦ | ೩೭ |
| ೭ | ಕೊಳಚಿ | ೧೫ | ೧೦ | ೨೫ |
| ೮ | ಮುಳ್ಳೂರು | ೨೨ | ೧೦ | ೩೨ |
| ೯ | ಹಿರೇ ತಡಸಿ | ೧೫ | ೨೧ | ೩೬ |
| ೧೦ | ಓಬಳಾಪುರ | ೨೦ | – | ೨೦ |
| | **ಒಟ್ಟು** | **೧೪೪** | **೧೭೬** | **೩೨೦** |

ಇದರಲ್ಲಿ ಮುಖ್ಯವಾಗಿ ಲಿಂಗ ಸಮಾನತೆಯ ಅರಿವು ಮತ್ತು ಕುಟುಂಬದಲ್ಲಿ ಜವಾಬ್ದಾರಿಯ ಹಂಚಿಕೆಯೊಂದಿಗೆ ಶಿಕ್ಷಣದಲ್ಲಿ ಸಮನಾಗಿ ಭಾಗವಹಿಸುವ ಕುರಿತು ಮನವರಿಕೆ ಮಾಡಲಾಯಿತು. ಕುಟುಂಬದ ಮತ್ತು ಶಾಲೆಯಲ್ಲಿ ಮಾಡುವ ಲಿಂಗ ತಾರತಮ್ಯದ ಅರ್ಥಗಳನ್ನು ತಿಳಿಸಿ, ಸಮಾನ ಭಾಗವಹಿಸುವಿಕೆಯಿಂದಾಗಿ ಬೇಧ ಭಾವ ತೊಡೆದು ಹಾಕಲು ಪ್ರೇರೆಪಿಸಿದರು.

**ಕಿಶೋರಿ ಅನುಸರಣಾ ಸಭೆ.**

ಈ ಸಂಸ್ಥೆಯು ಘಟಕಮಟ್ಟದಲ್ಲಿ ಕಿಶೋರಿ ಅನುಸರಣಾ ಸಭೆಗಳನ್ನು ಏರ್ಪಡಿಸಿ, ಹದಿಹರೆಯದ ವಯಸ್ಸಿನಲ್ಲಾಗುವ ದೈಹಿಕ ಬದಲಾವಣೆಗಳನ್ನು ತಿಳಿಸಿಕೊಡುತ್ತದೆ. ಜೊತೆಗೆ ವೈಯಕ್ತಿಕ ಸ್ವಚ್ಛತೆಯ ತಿಳುವಳಿಕೆ ನೀಡುತ್ತದೆ.

*ಕೋಷ್ಟಕ – ೪.೩.೬ : ಕಿಶೋರಿ ಅನುಸರಣಾ ಸಭೆಯಲ್ಲಿ ಭಾಗವಹಿಸಿದವರ ವಿವರ.*

| ಕ್ರ.ಸಂ. | ತಾಲೂಕ | ಘಟಕ | ಗ್ರಾಮ ಸಂಖ್ಯೆ | ಭಾಗಾರ್ಥಿ ಸಂಖ್ಯೆ |
|---|---|---|---|---|
| ೧ | ರಾಮದುರ್ಗ | ದೊಡ್ಡಮಂಗಡಿ | ೧೭ | ೧೦೪ |
| ೨ | ರಾಮದುರ್ಗ | ಕಟಕೋಳ | ೧೦ | ೫೪ |
| ೩ | ರಾಮದುರ್ಗ | ಬಟಕುರ್ಕಿ | ೧೭ | ೯೫ |
| ೪ | ರಾಮದುರ್ಗ | ಹಲಗತ್ತಿ | ೧೩ | ೮೩ |
| ೧ | ಸವದತ್ತಿ | ಶಿರಸಂಗಿ | ೧೧ | ೯೮ |
| ೨ | ಸವದತ್ತಿ | ಮುನವಳ್ಳಿ | ೫ | ೪೪ |
| ೩ | ಸವದತ್ತಿ | ಸತ್ತೀಗೇರಿ | ೧೦ | ೮೨ |
| ೪ | ಸವದತ್ತಿ | ಯರಗಟ್ಟಿ | ೪ | ೫೬ |
| ೧ | ಗೋಕಾಕ | ಕುಲಗೋಡ | ೩ | ೩೫ |
| | | ಒಟ್ಟು | ೯೦ | ೬೫೧ |

**ಕಿಶೋರಿ / ಕಿಶೋರರ ಗುಂಪು:**

ಹದಿಹರೆಯದ ವಯಸ್ಸಿನಲ್ಲಾಗುವ ಮಾನಸಿಕ ಹಾಗೂ ದೈಹಿಕ ಬದಲಾವಣೆಗಳಿಗೆ ಅನುಗುಣವಾಗಿ ಕಿಶೋರಾವಸ್ಥೆಯಲ್ಲಿಯೇ ತಿಳುವಳಿಕೆ ನೀಡಿದರೆ, ಬದಲಾವಣೆಯ ಸಮಯದಲ್ಲಿ ಯಾವ ಗೊಂದಲಕ್ಕೂ ಒಳಗಾಗದೇ, ಸರಿಯಾದ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯ ಹೊಂದುತ್ತಾರೆನ್ನುವುದು ಸಮಾಖ್ಯಾದ ನಿಲುವು. ಇದಕ್ಕೆ ಹಲವು ಅಧ್ಯಯನಗಳು ಆಧಾರವಾಗಿವೆ. ಈ ದಿಸೆಯಲ್ಲಿ ಕಿಶೋರಾವಸ್ಥೆಯಲ್ಲಿಯ ಬಾಲಕಿಯರಿಗೂ ಗುಂಪು ರಚಿಸಿ, ತನ್ಮೂಲಕ ಮಾಹಿತಿ ನೀಡುವ ಕಾರ್ಯತಂತ್ರವನ್ನು ಅನುಸರಿಸಿ, ಲಿಂಗ ಸಮಾನತೆಯನ್ನು ಸಾಧಿಸುವುದಕ್ಕೆ ಮಹಿಳಾ ಸಮಾಖ್ಯಾ ಪ್ರಯತ್ನಿಸುತ್ತಿದೆ.

*ಕೋಷ್ಟಕ – ೪.೩.೭ : ಕಿಶೋರಿ ಗುಂಪಿನ ವಿವರ:*

| ಅ.ನಂ | ತಾಲೂಕು | ಮಾರ್ಚ ೨೦೦೯ ಕ್ಕೆ ಇದ್ದಂತೆ | | | ಮಾರ್ಚ ೨೦೧೦ ರ ಕೊನೆಗೆ | | |
|---|---|---|---|---|---|---|---|
| | | ಹಳ್ಳಿ | ಗುಂಪು | ಕಿ.ಸಂಖ್ಯೆ | ಹಳ್ಳಿ | ಗುಂಪು | ಕಿ.ಸಂಖ್ಯೆ |
| ೧ | ರಾಮದುರ್ಗ | ೨೯ | ೨೯ | ೫೬೯ | ೪೧ | ೪೧ | ೧೨೨೬ |
| ೨ | ಸವದತ್ತಿ | ೧೬ | ೧೬ | ೪೦೨ | ೩೯ | ೩೯ | ೮೫೨ |
| ೩ | ಗೋಕಾಕ | ೦೨ | ೦೨ | ೪೦ | ೩೬ | ೩೬ | ೮೫೮ |
| | ಒಟ್ಟು | ೪೭ | ೪೭ | ೧೦೧೧ | ೧೧೬ | ೧೧೬ | ೨೯೩೬ |

***ಕೋಷ್ಟಕ – ೪.೩.೮ : ಕಿಶೋರರ ಗುಂಪಿನ ವಿವರ:***

| ಅ.ನಂ | ತಾಲೂಕು | ಮಾರ್ಚ ೨೦೦೯ ಕ್ಕೆ ಇದ್ದಂತೆ | | | ಮಾರ್ಚ ೨೦೧೦ ರ ಕೊನೆಗೆ | | |
|---|---|---|---|---|---|---|---|
| | | ಹಳ್ಳಿ | ಗುಂಪು | ಕಿ.ಸಂಖ್ಯೆ | ಹಳ್ಳಿ | ಗುಂಪು | ಕಿ.ಸಂಖ್ಯೆ |
| ೧ | ರಾಮದುರ್ಗ | ೧೨ | ೧೨ | ೪೧೩ | ೨೨ | ೨೨ | ೭೧೪ |
| ೨ | ಸವದತ್ತಿ | ೦೮ | ೦೮ | ೧೭೦ | ೨೨ | ೨೨ | ೪೬೦ |
| ೩ | ಗೋಕಾಕ | ೦೨ | ೦೨ | ೩೬ | ೨೬ | ೨೬ | ೫೫೦ |
| | **ಒಟ್ಟು** | **೨೨** | **೨೨** | **೬೧೯** | **೭೦** | **೭೦** | **೧೭೨೪** |

***ಕೋಷ್ಟಕ – ೪.೩.೯ : ಸಂಪರ್ಕ ಸಭೆಯ ವಿವರ:***

| ಕ್ರಸಂ. | ತಾಲೂಕು | ಘಟಕ | ಭಾಗವಹಿಸಿದ ವಿವರ | |
|---|---|---|---|---|
| | | | ಗ್ರಾಮಗಳ ಸಂಖ್ಯೆ | ಮಹಿಳೆಯರ ಸಂಖ್ಯೆ |
| ೧ | ರಾಮದುರ್ಗ | ದೊಡ್ಡಮಂಗಡಿ | ೨೬ | ೧೫೪ |
| ೨ | | ಕಟಕೋಳ | ೧೫ | ೧೦೯ |
| ೩ | | ಬಟಕುರ್ಕಿ | ೧೫ | ೧೦೧ |
| ೪ | | ಹಲಗತ್ತಿ | ೮ | ೪೭ |
| ೧ | ಸವದತ್ತಿ | ಶಿರಸಂಗಿ | ೧೭ | ೧೨೩ |
| ೨ | | ಯರಗಟ್ಟಿ | ೨೧ | ೭೯ |
| ೩ | | ಸತ್ತಿಗೇರಿ | ೨೪ | ೭೩ |
| ೪ | | ಮುನವಳ್ಳಿ | ೧೭ | ೮೨ |
| ೫ | | ಮುರಗೋಡ | ೬ | ೩೮ |
| ೧ | ಗೋಕಾಕ | ಅಡಿಬಟ್ಟಿ | ೧೨ | ೯೯ |
| ೨ | | ಅರಭಾವಿ | ೧೪ | ೯೭ |
| ೩ | | ಅಂಕಲಗಿ | ೫ | ೩೯ |
| ೪ | | ಕುಲಗೋಡ | ೩ | ೩೨ |
| | | **ಒಟ್ಟು** | **೧೮೩** | **೧೦೨೩** |

ಸಂಪರ್ಕ ಸಭೆಗಳಲ್ಲಿ ಶಾಲಾ ಶಿಕ್ಷಕರು, ಪೋಲಿಸ ಪೇದೆಗಳು, ಬ್ಯಾಂಕ್ ಅಧಿಕಾರಿಗಳು, ಸ್ಥಳೀಯ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳು ಭಾಗವಹಿಸಿ, ಸಮಾಖ್ಯಾ ಮಹಿಳೆಯರಿಗೆ ತಂತಮ್ಮ ಕ್ಷೇತ್ರಗಳಿಂದ ಸಿಗಬಹುದಾದ ಯೋಜನೆ, ಸವಲತ್ತುಗಳ ಕುರಿತು ಮಾಹಿತಿ ನೀಡುತ್ತಾರೆ. ಇದರಿಂದ ಸಂಪರ್ಕಜಾಲ ವಿಸ್ತರಿಸುತ್ತದೆ. ಮಹಿಳೆಯರಿಗೆ ವಿವಿಧ ಇಲಾಖೆಗಳ ಪರಿಚಯವಾಗುತ್ತದೆ. ಸರ್ಕಾರ ಹಾಗೂ ಸರಕಾರೇತರ ಸಂಘ – ಸಂಸ್ಥೆಗಳ ಕಾರ್ಯ, ಯೋಜನೆ, ಪ್ರಯೋಜನೆಗಳ ಕುರಿತು ತಿಳುವಳಿಕೆ ಮೂಡುತ್ತದೆ.

### ಬಾಲ್ಯ ವಿವಾಹ ನಿಷೇಧ ಶಿಬಿರ :

ಬಾಲ್ಯ ವಿವಾಹಗಳು ಹೆಚ್ಚು ನಡೆಯುತ್ತಿರುವ ಗ್ರಾಮಗಳಲ್ಲಿ ಬಾಲ್ಯ ವಿವಾಹ ನಿಷೇಧ ಶಿಬಿರಗಳನ್ನು ಏರ್ಪಡಿಸಿದೆ. ಬಾಲ್ಯ ವಿವಾಹ ದುಷ್ಪರಿಣಾಮಗಳು ಮತ್ತು ಮಕ್ಕಳ ಹಕ್ಕುಗಳ ಉಲ್ಲಂಘನೆಯಾಗುತ್ತಿರುವುದರ ಕುರಿತು ಸಮುದಾಯಕ್ಕೆ ಮಾಹಿತಿಯನ್ನು ನೀಡುವುದು ಈ ಶಿಬಿರದ ಉದ್ದೇಶ. ಈ ಶಿಬಿರದಲ್ಲಿ ಕಿಶೋರ ಕಿಶೋರಿಯರ ಮದುವೆಯ ಕುರಿತು ಅನಿಸಿಕೆ ಮತ್ತು ಪೋಷಕರ ಅನಿಸಿಕೆಯನ್ನು ಹಂಚಿಕೊಳ್ಳಲು ಅವಕಾಶವಿರುತ್ತದೆ. ಶಿಬಿರದ ಕೊನೆಯಲ್ಲಿ ಪೋಷಕರು ತಮ್ಮ ಮಕ್ಕಳಿಗೆ ೧೮ ವರ್ಷಕ್ಕಿಂತ ಮುಂಚೆ ಮದುವೆಯನ್ನು ಮಾಡುವುದಿಲ್ಲವೆಂದು ತೀರ್ಮಾನವನ್ನು ಕೈಗೊಂಡ ಉದಾಹರಣೆಗಳನ್ನು ಸಂಸ್ಥೆ ಹೇಳಿಕೊಂಡಿದೆ.

*ಕೋಷ್ಟಕ – ೪.೩.೧೦ : ಬಾಲ್ಯ ವಿವಾಹ ನಿಷೇಧ ಶಿಬಿರಗಳ ವಿವರ*

| ಕ್ರ.ಸಂ. | ತಾಲೂಕು | ಗ್ರಾ.ಸಂ. | ಕಿಶೋರಿ | ಕಿಶೋರ | ಮಹಿಳೆಯರು |
|---|---|---|---|---|---|
| ೧ | ರಾಮದುರ್ಗ | ೮ | ೧೯೫ | ೫೭ | ೨೮೬ |
| ೨ | ಸವದತ್ತಿ | ೧೦ | ೧೪೭ | ೧೩೮ | ೨೩೪ |
| ೩ | ಗೋಕಾಕ | ೮ | ೨೨೯ | ೧೭೦ | ೨೦ |
| | ಒಟ್ಟು | ೨೬ | ೫೭೧ | ೩೬೫ | ೫೦೯ |

### ಸಹಭಾಗಿತ್ವದ ಗ್ರಾಮೀಣ ಸಮೀಕ್ಷೆ (ಪಿ.ಆರ್.ಎ)

ಮಹಿಳಾ ಸಮಾಖ್ಯಾ ತನ್ನ ಕಾರ್ಯ ವ್ಯಾಪ್ತಿಯ ಗ್ರಾಮದ ಸಂಪೂರ್ಣ ವಿವರವನ್ನು ಪಡೆದುಕೊಳ್ಳುವುದು, ಗ್ರಾಮೀಣ ಮಹಿಳೆಯರ ಸ್ಥಾನಮಾನ ಗುರುತಿಸಿಕೊಳ್ಳುವುದು ಮತ್ತು ಗ್ರಾಮದಲ್ಲಿರುವ ಮಹಿಳೆಯರ, ಮಕ್ಕಳ ಹಾಗೂ ಗ್ರಾಮದ ಸಮಸ್ಯೆಗಳನ್ನು ಗುರುತಿಸಿಕೊಳ್ಳುವುದಕ್ಕಾಗಿ, ಸಹಭಾಗಿತ್ವದ ಗ್ರಾಮೀಣ ಸಮೀಕ್ಷೆ ಕಾರ್ಯ ಮಾಡುವುದು.

*ಕೋಷ್ಟಕ – ೪.೩.೧೧ : ಸಹಭಾಗಿತ್ವದ ಸಮೀಕ್ಷೆ*

| ಅ.ನಂ | ರಾಮದುರ್ಗ | | ಸವದತ್ತಿ | | ಗೋಕಾಕ | |
|---|---|---|---|---|---|---|
| | ದಿನಾಂಕ | ಗ್ರಾಮ | ದಿನಾಂಕ | ಗ್ರಾಮ | ದಿನಾಂಕ | ಗ್ರಾಮ |
| ೧ | ೧೦.೦೭.೦೯ | ಮುದೇನೂರ | ೧೨.೦೬.೦೯ | ಹಿರೂರ | ೦೬.೦೭.೦೯ | ಕಲಾರಕೊಪ್ಪ |
| ೨ | ೨೩.೦೭.೦೯ | ಸಾಲಾಪೂರ | ೦೮.೦೭.೦೯ | ಆಲಕಟ್ಟಿ | ೦೮.೦೭.೦೯ | ಅಡಿಬಟ್ಟಿ |
| ೩ | ೦೭.೦೭.೦೯ | ಲ.ಕೊಪ್ಪ | ೨೩.೦೭.೦೯ | ದಾಸನಾಳ | ೦೨.೦೯.೦೯ | ತೊಕರಟ್ಟಿ |
| ೪ | ೨೧.೦೭.೦೯ | ಉಜ್ಜಿನಕೊಪ್ಪ | ೨೧.೦೭.೦೯ | ಗೋರಬಾಳ | ೦೨.೧೦.೦೯ | ಉಪ್ಪಾರಹಟ್ಟಿ |
| ೫ | ೨೨.೦೭.೦೯ | ಎಮ್‌.ತಿಮ್ಮಾಪೂರ | ೨೧.೦೮.೦೯ | ನುಗ್ಗಾನಟ್ಟಿ | ೧೧.೦೧.೧೦ | ಕಪ್ಪರಟ್ಟಿ |
| ೬ | ೦೩.೦೮.೦೯ | ನಂದಿಹಾಳ | ೨೪.೦೯.೦೯ | ಮಾಡಮಗೇರಿ | ೧೮.೦೧.೧೦ | ಕೈ ಹೊಸೂರ |
| ೭ | ೨೪.೦೮.೦೯ | ಚುಂಚನೂರ | ೨೬.೦೯.೦೯ | ಶಿವಾಪೂರ | ೦೫.೦೧.೧೦ | ಸಂಗನಕೇರಿ |
| ೮ | ೧೧.೦೮.೦೯ | ಹೊಳಚಿ | ೦೯.೧೦.೦೯ | ಜೀವಾಪೂರ | ೨೦.೦೧.೧೦ | ಬಡಿಗವಾಡ |
| ೯ | ೨೨.೦೮.೦೯ | ಕಡ್ಲಿಗೊಪ್ಪ | ೨೫.೦೯.೦೯ | ಬಸರಗಿ | ೨೩.೦೧.೧೦ | ಬೆಂಚಿನಮರ್ಡಿ |
| ೧೦ | ೦೧.೦೭.೦೯ | ಮುದೇನಕೊಪ್ಪ | ೦೫.೧೧.೦೯ | ಕಿಟದಾಳ | ೨೬.೦೩.೧೦ | ಮಾಲದಿನ್ನಿ |
| ೧೧ | ೦೬.೦೮.೦೯ | ಗೊಣಗನೂರ | ೧೦.೧೧.೦೯ | ದುಂಡನಕೊಪ್ಪ | – | – |
| ೧೨ | ೨೧.೦೮.೦೯ | ಕಿ.ತೊರಗಲ್ಲ್ | ೦೭.೦೧.೧೦ | ಮನಿಕಟ್ಟಿ | – | – |
| ೧೩ | ೦೩.೦೮.೦೯ | ಘಮ್ಮಾಪೂರ ಎಸ್.ಎ | ೨೫.೦೧.೧೦ | ಕಲ್ಲಾಪೂರ | – | – |
| ೧೪ | ೦೩.೦೯.೦೯ | ಕೆ.ಚಂದರಗಿ | ೨೯.೦೧.೧೦ | ಆಚಮಟ್ಟಿ | – | – |
| ೧೫ | ೧೦.೦೬.೦೯ | ಚಿಕ್ಕ ಮೂಲಂಗಿ | ೨೮.೦೧.೧೦ | ಬಸಿಡೋಣಿ | – | – |
| ೧೬ | ೨೬.೦೯.೦೯ | ಸೊಪ್ಪಡ್ಲ | ೧೯.೦೧.೧೦ | ಜಾಲಿಕಟ್ಟಿ | – | – |
| ೧೭ | ೦೭.೦೯.೦೯ | ಇಡಗಲ್ಲ್ | – | – | – | – |
| ೧೮ | ೧೫.೦೧.೧೦ | ಗೊಣ್ಣಾಗರ | – | – | – | – |
| ೧೯ | ೨೩.೦೧.೧೦ | ಮುಳ್ಳೂರು | – | – | – | – |
| ೨೦ | ೨೦.೦೧.೧೦ | ಅವರಾದಿ | – | – | – | – |
| ೨೧ | ೦೫.೦೧.೧೦ | ವೆಂಕಟಾಪೂರ | – | – | – | – |
| ೨೨ | ೧೧.೦೧.೧೦ | ಸಿದ್ನಾಳ | – | – | – | – |
| ೨೩ | ೨೪.೦೨.೧೦ | ನಾಗನೂರ | – | – | – | – |
| ೨೪ | ೨೫.೦೨.೧೦ | ಗೊಡಚಿ | – | – | – | – |
| ೨೫ | ೨೦.೦೩.೧೦ | ಮುರಕಟ್ನಾಳ | – | – | – | – |
| ೨೬ | ೨೩.೦೩.೧೦ | ಚೆನ್ನಾಪೂರ | – | – | – | – |
| | **ಒಟ್ಟು** | **೨೬ ಗ್ರಾಮ** | | **೧೬ ಗ್ರಾಮಗಳು** | | **೧೦ ಗ್ರಾಮಗಳು** |

## ಸ್ವಾವಲಂಬನೆಯತ್ತ ಹೆಜ್ಜೆ

ಮಹಿಳಾ ಸಮಾಖ್ಯಾವು ಮಹಿಳಾ ಮತ್ತು ಕಿಶೋರಿ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರಿಗೆ ಹಾಗೂ ಕಿಶೋರಿಯರಿಗೆ ಮಾಹಿತಿ ನೀಡುವ ಕಾರ್ಯಚಟುವಟಿಕೆಯಲ್ಲಿ ಕಳೆದ ೩ ವರ್ಷಗಳಿಂದಲೂ ತೊಡಗಿದೆ. ವಿಷಯವಾರು ಸಮಿತಿಗಳನ್ನು ರಚಿಸಿ, ಸಮಿತಿ ತರಬೇತಿಗಳನ್ನು ಹಮ್ಮಿಕೊಂಡು, ಅಗತ್ಯ ಮಾಹಿತಿಗಳನ್ನು ಪೂರೈಸುತ್ತಿದೆ. ಹೊಸ ಘಟಕಗಳಲ್ಲಿ ಮಾಹಿತಿ ಮೇಳಗಳನ್ನು ಏರ್ಪಡಿಸಿ, ಮಹಿಳಾ ಸಮಾಖ್ಯಾದ ಪರಿಕಲ್ಪನೆಯ ಜೊತೆಗೆ, ವಿಷಯವಾರು ಸಮಿತಿಗಳ ಕುರಿತಂತೆ ಅವಶ್ಯಕತೆಯನ್ನು ಮನವರಿಕೆ ಮಾಡಿಸುತ್ತಿದೆ. ಅದಕ್ಕೆ ತಕ್ಕಂತೆ, ಸಂಪರ್ಕ ಸಭೆಗಳನ್ನು ಆಯೋಜಿಸಿ, ಇಲಾಖೆ ಮತ್ತು ಮಹಿಳೆಯರೊಟ್ಟಿಗಿನ ಸಂಬಂಧವನ್ನು ಗಟ್ಟಿಗೊಳಿಸುತ್ತಿದೆ.

ಇದುವರೆಗೂ ಸಮಾಖ್ಯಾ ರಚಿಸಿದ ಉಳಿತಾಯ ಗುಂಪುಗಳಿಗೆ ಮಾತ್ರ ಸೀಮಿತಗೊಳಿಸಿದ ಮಾಹಿತಿಯನ್ನು ಗ್ರಾಮದ ಪ್ರತಿಯೊಬ್ಬ ಮಹಿಳೆಗೂ ಲಭ್ಯಗೊಳಿಸುವುದು ಅವಶ್ಯಕವಾಗಿದೆ ಎಂಬುದನ್ನು ಮನಗಂಡು "ಊರಿಗೊಂದು ಸಂಘ" ದ ಪರಿಕಲ್ಪನೆಯಲ್ಲಿ ಕಾರ್ಯಕ್ರಮವನ್ನು ವಿಸ್ತರಿಸುತ್ತಿದೆ. ಗ್ರಾಮದ ಸಂಪೂರ್ಣ ಚಿತ್ರಣವನ್ನು ತಿಳಿದುಕೊಳ್ಳಲು ಸಹಭಾಗಿತ್ವದ ಗ್ರಾಮೀಣ ಸಮೀಕ್ಷೆಯ ಮೂಲಕ ಗ್ರಾಮಸ್ಥರಿಗೂ ಅರಿವು ಮೂಡಿಸಲಾಗುತ್ತಿದೆ.

**ಊರಿಗೊಂದು ಸಂಘ :**

ಗ್ರಾಮದಲ್ಲಿರುವ ಎಲ್ಲ ಗುಂಪುಗಳನ್ನು ಮತ್ತು ಸಂಘನಾರಹಿತ ಮಹಿಳೆಯರನ್ನು ಒಟ್ಟುಗೂಡಿಸಿ, ಸಮಾಖ್ಯಾದ ಗುರಿ-ಉದ್ದೇಶಗಳನ್ನು ತಿಳಿಸಿ, ಊರಿಗೊಂದು ಸಂಘ ಎನ್ನುವ ಪರಿಕಲ್ಪನೆಯನ್ನು ಹುಟ್ಟು ಹಾಕಿದೆ. ಮಹಿಳೆಯರ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವುದು ಇದರ ಮೊದಲ ಉದ್ದೇಶ. ಗ್ರಾಮಸ್ಥರ ಸಹಕಾರದೊಟ್ಟಿಗೆ, ಗ್ರಾಮದ ವ್ಯವಸ್ಥೆಗಳನ್ನು ಸರಿಪಡಿಸಿಕೊಂಡು ಸುಧಾರಣೆಗಳನ್ನು ತರುವುದು ಮತ್ತೊಂದು ಮೂಲ ಉದ್ದೇಶವಾಗಿದೆ.

**ಶಿಕ್ಷಣ ವ್ಯವಸ್ಥೆಯಲ್ಲಿ ಮಹಿಳೆಯರು :**

ಮಹಿಳಾ ಅಭಿವೃದ್ಧಿಯಲ್ಲಿ ಶಿಕ್ಷಣದ ಪಾತ್ರ ಮಹತ್ವದ್ದು. ಮಹಿಳೆಯರು ಶೈಕ್ಷಣಿಕ ವ್ಯವಸ್ಥೆಯಲ್ಲಿ ಸಹಭಾಗಿಗಳಾಗಬೇಕೆಂಬುದು ಸಂಸ್ಥೆಯ ಹಿರಿಯಾಶೆ. ಶಾಲೆಯನ್ನು ಭೇಟಿಮಾಡುವುದು, ಶಾಲೆಯ ಬಿಸಿ ಊಟ ಹಾಗೂ ಶಾಲಾ ವ್ಯವಸ್ಥೆಯ ಮೇಲ್ವಚಾರಣೆಯನ್ನು ಮಾಡುವುದು, ಶಾಲಾ ಮೇಲ್ವಿಚಾರಣಾ ಸಮಿತಿ ಸದಸ್ಯರಾಗುವುದು, ಪಾಲಕರ ಸಭೆಗಳಲ್ಲಿ ಮಕ್ಕಳ ಪ್ರಗತಿ ವಿಷಯವನ್ನು ಮಾತಾಡುವುದರೊಂದಿಗೆ ಶೈಕ್ಷಣಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾಲುದಾರಿಕೆ ಹೆಚ್ಚಬೇಕು. ಇದರ ಜೊತೆಗೆ ಮಕ್ಕಳ ಹಾಜರಾತಿಯ ಕಡೆಗೂ ಗಮನ ಹರಿಸುತ್ತಿರುವುದು ಮಹಿಳೆಯರು ಶಿಕ್ಷಣದ ಕಡೆಗೆ ಹೆಚ್ಚು ಆಕರ್ಷಣೆಯಾಗಿರುವುದು ಸಂತೋಷಕರವಾಗಿದೆ. ಅದಲ್ಲದೆ ತಮ್ಮ ಮಕ್ಕಳನ್ನು ತಪ್ಪದೆ ಶಾಲೆಗೆ ಹೋಗುವಂತೆ ನೋಡಿಕೊಳ್ಳುತ್ತಿದ್ದಾರೆ. ಇದೆಲ್ಲದರ ಜೊತೆಗೆ ಅನಕ್ಷರಸ್ತರು ಗ್ರಾಮ ಅಕ್ಷರ ಕೇಂದ್ರಗಳಲ್ಲಿ ಆಸಕ್ತಿಯಿಂದ ಅಕ್ಷರ ಕಲಿಕೆಯಲ್ಲಿ ತೊಡಗಬೇಕೆಂಬುದು ಸಮಾಖ್ಯಾ ಯೋಚಿಸಿದೆ. ಈ ಎಲ್ಲ ಧ್ಯೇಯಗಳನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸುತ್ತದೆ. ಇದರ ಪರಿಣಾಮವಾಗಿ ಮಹಿಳೆಯರು ಶಾಲಾ ಮೇಲುಸ್ತುವಾರಿ ಸಮಿತಿಯ ಸಭೆಯಲ್ಲಿ ಭಾಗವಹಿಸುತ್ತಿದ್ದಾರೆ. ಅದರಲ್ಲಿ ಸದಸ್ಯರಾಗಿ ಪಾಲ್ಗೋಳ್ಳುತ್ತಿದ್ದಾರೆ. ಅನಕ್ಷರಸ್ತರು ಶಿಕ್ಷಣದ ಮಹತ್ವವನ್ನು ಅರಿತು ಗ್ರಾಮ ಅಕ್ಷರ ಕೇಂದ್ರಗಳಲ್ಲಿ ಅಕ್ಷರ ಕಲಿಕೆಯ ಪ್ರಕ್ರಿಯೆಯಲ್ಲಿ ತೊಡಗಿಕೊಂಡು ಸಾಕ್ಷರರಾಗುವ ನಿಟ್ಟಿನಲ್ಲಿ ಸಾಗುತ್ತಿದ್ದಾರೆ. ತಮ್ಮ ಸಂಘದಿಂದ ಮಕ್ಕಳಿಗಾಗಿ ಊಟ ಮಾಡಲು ತಟ್ಟೆ, ಲೋಟ ಹಾಗೂ ಗೋಡೆ ಗಡಿಯಾರಗಳನ್ನು ಕೊಡುಗೆಯಾಗಿ ನೀಡುತ್ತಿದ್ದಾರೆ.

ಮಹಿಳೆಯರು ಶಾಲೆ ಮತ್ತು ಅಂಗನವಾಡಿಗಳನ್ನು ಸಂದರ್ಶಿಸುತ್ತಿದ್ದಾರೆ. ಮಕ್ಕಳ ಹಾಜರಾತಿಯ ಪ್ರಮಾಣವನ್ನು ಗುರುತಿಸಿ, ಹಾಜರಾತಿ ಹೆಚ್ಚಿಸುವಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ. ಶಾಲಾ ವ್ಯವಸ್ಥೆಯ ಸುಧಾರಣೆ ಕುರಿತು ಚರ್ಚಿಸುತ್ತಿದ್ದು, ಸಂಘದ ಸುತ್ತು ನಿಧಿ ಪಡೆದುಕೊಳ್ಳುವುದರ ಕುರಿತು ಯೋಚನೆ ಮಾಡುತ್ತಿದ್ದಾರೆ.

ಶಾಲಾ ಸುಧಾರಣಾ ಸಮಿತಿ ಸದಸ್ಯರ ವಿವರ : ಸಮಾಖ್ಯಾ ಸದಸ್ಯರಲ್ಲಿ ಶಾಲಾ ಅಭಿವೃದ್ಧಿ ಸಮಿತಿ ಸದಸ್ಯರು ಇದ್ದಾರೆ.

***ಕೋಷ್ಟಕ – ೪.೩.೧೨ : ಎಸ್.ಡಿ.ಎಮ್.ಸಿ ಸದಸ್ಯರ ವಿವರ***

| ಅ.ನಂ | ತಾಲೂಕು | ಗ್ರಾಮ ಸಂಖ್ಯೆ | ಒಟ್ಟು ಸದಸ್ಯರು |
|---|---|---|---|
| ೧ | ರಾಮದುರ್ಗ | ೧೫ | ೧೮ |
| ೨ | ಸವದತ್ತಿ | ೧೫ | ೨೧ |
| ೩ | ಗೋಕಾಕ | ೧ | ೨ |
| | **ಒಟ್ಟು** | **೩೧** | **೪೧** |

ಶಾಲೆಯ ಮುಖ್ಯೋಪಾಧ್ಯಾಯರು ಹಾಗೂ ಇತರೆ ಶಿಕ್ಷಕರನ್ನು ಭೇಟಿ ಮಾಡಿ, ಶಾಲೆ ಬಿಟ್ಟ ಮಕ್ಕಳನ್ನು ಪುನಃ ಶಾಲೆಗೆ ಸೇರಿಸುವುದಕ್ಕಾಗಿ, ಸಂಘದವರು ದಾಖಲಾತಿ ಆಂದೋಲನ ಕೈಗೊಂಡಿದ್ದಾರೆ. ಇದರಿಂದ

೧. ಶಾಲೆ ಬಿಟ್ಟ ಮಕ್ಕಳು ಶಾಲೆಗೆ ಸೇರಿಸುತ್ತಿದ್ದಾರೆ. ಜೊತೆಗೆ ಶಾಲೆಯಲ್ಲಿ ಮಕ್ಕಳ ಹಾಜರಾತಿ ನಿರಂತರವಾಗಿ ಹೆಚ್ಚುತ್ತಿದೆ.

೨. ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವ ಇತ್ಯಾದಿ ಕಾರ್ಯಕ್ರಮಗಳಲ್ಲೂ ಸಂಘದ ಮಹಿಳೆಯರು ಪಾಲ್ಗೊಂಡು ಮಕ್ಕಳ ಉತ್ಸಾಹವನ್ನು ಹೆಚ್ಚಿಸುತ್ತಿದ್ದಾರೆ.

೩. ತಮ್ಮ ಸಂಘಗಳಲ್ಲಿ ಚರ್ಚಿಸಿ, ತಮ್ಮ ಕೈಲಾದಷ್ಟು ಹಣ ಸೇರಿಸಿ, ಸಿಹಿ ತೆಗೆದುಕೊಂಡು ಮಕ್ಕಳಿಗೆ ಹಂಚಿ ಸಂತೋಷಪಡಿಸಿದ್ದಾರೆ. ಒಟ್ಟು ೩ ತಾಲೂಕಿನ ೪೭ ಗ್ರಾಮದ, ೫೩೯ ಮಹಿಳೆಯರು ಶಾಲಾ ದಾಖಲಾತಿ ಆಂದೋಲನ ಕಾರ್ಯಕ್ರಮದಲ್ಲಿ ಭಾಗವಹಿಸಿ, ಗಮನಾರ್ಹ ಅಭಿವೃದ್ಧಿ ಸಾಧಿಸಿದ್ದಾರೆ. ಎಂದು ಸಮಾಖ್ಯಾ ಹೇಳಿಕೊಂಡಿದೆ.

**ಆರೋಗ್ಯದ ಬಗ್ಗೆ ಸಂಘದ ಚಟುವಟಿಕೆಗಳು :**

ಮಹಿಳೆಯ ಆರೋಗ್ಯದ ಬಗ್ಗೆ ಸಂಸ್ಥೆಗೆ ಕಾಳಜಿಯಿದ್ದು, ಈ ದಿಶೆಯಲ್ಲಿ ಅದು ಈ ಕೆಳಗಿನ ಕಾರ್ಯಕ್ರಮಗಳನ್ನು ಕೈಗೊಂಡಿದೆ:

- ಎಚ್. ಬಿ. ಪರೀಕ್ಷೆ
- ಸಖಿ ಸಹಭೋಜನ
- ಸಾಮೂಹಿಕ ಸೀಮಂತ ಕಾರ್ಯಕ್ರಮ
- ಪಿ.ಎಚ್.ಸಿ / ಎ.ಎನ್.ಎಮ್ ಭೇಟಿ
- ಹೆರಿಗೆ ಭತ್ಯೆ ಸೌಲಭ್ಯದ ಮಾಹಿತಿ ಒದಗಿಸುವುದು
- ಆಶಾ ಕಾರ್ಯಕರ್ತೆಯಾಗಿ ಸಂಘದವರು
- ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಭಾಗವಹಿಸುವಿಕೆ
- ಶ್ರಮದಾನ

**ಎಚ್. ಬಿ. ಪರೀಕ್ಷೆ :**

ಮಹಿಳಾ ಸಮಾಖ್ಯಾವು ಮಹಿಳೆಯರ ಆರೋಗ್ಯದ ಬಗ್ಗೆ ವಿಶೇಷವಾದ ಕಾರ್ಯಕ್ರಮವನ್ನು ಪರಿಚಯಿಸಿದೆ. ಮಹಿಳೆಯರಲ್ಲಿ ರಕ್ತಹಿನತೆಯ ಕುರಿತು ಮತ್ತು ತಮ್ಮ ದೇಹದಲ್ಲಿರುವ ರಕ್ತದ ಪ್ರಮಾಣವನ್ನು ತಿಳಿದುಕೊಳ್ಳುವ ಕುರಿತು ಆಸಕ್ತಿಯನ್ನು ಸಮಾಖ್ಯಾವು ಬೆಳೆಸಿದೆ. ರಕ್ತಹಿನತೆಯಿಂದ ತೊಂದರೆಗೊಳಗಾದ ಮಹಿಳೆಯರನ್ನು ವೈದ್ಯಾಧಿಕಾರಿಗಳಿಗೆ ಭೇಟ್ಟಿ ಮಾಡಿಸಿ ಆರೋಗ್ಯವನ್ನು ಮರಳಿ ಪಡೆಯುವಲ್ಲಿ ಅನುಕೂಲವನ್ನು ಒದಗಿಸಿಕೊಟ್ಟಿದೆ. ರಾಮದುರ್ಗ ಮತ್ತು ಸವದತ್ತಿ ತಾಲೂಕಿನ ೧೬ ಗ್ರಾಮಗಳಿಂದ ಒಟ್ಟು ೨೮೦ ಮಹಿಳೆಯರು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಭೇಟ್ಟಿ ನೀಡಿ ರಕ್ತ ತಪಾಸಣೆ ಮಾಡಿಸಿಕೊಂಡಿದ್ದಾರೆ. ರಕ್ತಹೀನತೆಯನ್ನು ಕಡಿಮೆ ಮಾಡುವ ಸಲುವಾಗಿ ಪೌಷ್ಠಿಕ ಆಹಾರ ಸೇವನೆಯ

**ಸಖಿ ಭೋಜನ:**

ಇದು ಮಹಿಳೆಯ ಸಹ ಭೋಜನ ಕಾರ್ಯಕ್ರಮ. ಗರ್ಭವತಿ ಮಹಿಳೆಯರಿಗಾಗಿ ವಿಶೇಷ ಭೋಜನ ಏರ್ಪಡಿಸುವುದು ಸಾಂಪ್ರದಾಯಿಕ ಪದ್ಧತಿ. ಅದನ್ನು ಬಯಕೆ ಊಟವೆಂದಿ ಕರೆಯುವರು. ಇದು ಮಹಿಳೆಯರ ಆರೋಗ್ಯ ವರ್ಧಿಸುವ ಕಾರ್ಯಕ್ರಮ. ಅವರ ಅಪೌಷ್ಠಿಕತೆಯನ್ನು ನಿವಾರಿಸುವ ಯೋಜನೆ. ಮಹಿಳೆಯರಿಗೆ ಪೌಷ್ಠಿಕ ಆಹಾರ ಒದಗಿಸುವುದರೊಂದಿಗೆ ಅವರಲ್ಲಿ ಸಾಮರಸ್ಯ ಬೆಳೆಸುವುದು ಇದರ ಉದ್ದೇಶ.

**ಸಾಮೂಹಿಕ ಸೀಮಂತ ಕಾರ್ಯಕ್ರಮ :**

ಗರ್ಭಿಣಿ ಮಹಿಳೆಯ ನಿರಂತರ ತಪಾಸಣೆ, ಸಮಯಕ್ಕೆ ಸರಿಯಾಗಿ ಚುಚ್ಚುಮದ್ದು ಪಡೆಯುವುದು, ಕಬ್ಬಿಣಾಂಶ ಮಾತ್ರೆಗಳನ್ನು ತೆಗೆದುಕೊಳ್ಳುವುದು, ಪೌಷ್ಠಿಕ ಆಹಾರದ ಮಾಹಿತಿ, ಹೆರಿಗೆ

ಸಮಯದಲ್ಲಿ ವಹಿಸಬೇಕಾದ ಮುನ್ನೆಚ್ಚರಿಕೆಗಳು, ಮಗು ಮತ್ತು ಬಾಣಂತಿತನದ ಅವಸ್ಥೆಯಲ್ಲಿನ ಆರೈಕೆಯ ಕುರಿತಂತೆ ಮಾಹಿತಿಯನ್ನು ಒದಗಿಸುವುದಕ್ಕಾಗಿ ಸಾಮೂಹಿಕ ಸೀಮಂತ ಕಾರ್ಯಕ್ರಮವನ್ನು ಏರ್ಪಡಿಸುತ್ತಿದ್ದಾರೆ. ಈ ಮೂಲಕ ಗ್ರಾಮದ ಗರ್ಭಿಣಿ ಸ್ತ್ರೀಯರನ್ನು ಗುರುತಿಸಿ, ಕಾರ್ಯಕ್ರಮದ ಬಗ್ಗೆ ವಿಷಯ ತಿಳಿಸುತ್ತಿದ್ದಾರೆ. ಕಾರ್ಯಕ್ರಮಕ್ಕೆ ವೈದ್ಯಾಧಿಕಾರಿಗಳು / ಆರೋಗ್ಯ ಇಲಾಖೆಯ ಪ್ರತಿನಿಧಿಗಳ ಮೂಲಕ ಮಾಹಿತಿ ಒದಗಿಸಿದ್ದಾರೆ.

ಈ ಸಮಯದಲ್ಲಿ ಕುಂಕುಮ, ಅರಿಷಿಣ, ಹೂ, ಬಳೆ ಉಡಿಸಿ ಉಡಿ ತುಂಬುತ್ತಾರೆ. ತಲೆಮಾರುಗಳಿಂದಲೂ ಈ ಸಂಪ್ರದಾಯವನ್ನು ಆಚರಿಸಿಕೊಂಡು ಬಂದಿರುವ ಮಹಿಳೆಯರು ಮಹತ್ವದ ಮಾಹಿತಿ ಒದಗಿಸುವುದರೊಂದಿಗೆ ಮಾನಸಿಕ ಸಂತೋಷವನ್ನು ಗರ್ಭಿಣಿಯರಿಗೆ ನೀಡುತ್ತಾರೆ.

***ಕೋಷ್ಟಕ – ೪.೩.೧೩ : ಸಾಮೂಹಿಕ ಸೀಮಂತ ಕಾರ್ಯಕ್ರಮದ ವಿವರ:***

| ಅ.ನಂ | ತಾಲೂಕು | ಗ್ರಾಮ ಸಂಖ್ಯೆ | ಗರ್ಭಿಣಿ ಮಹಿಳೆಯರ ಸಂಖ್ಯೆ | ಭಾಗವಹಿಸಿದ ಮಹಿಳೆಯರ ಸಂಖ್ಯೆ |
|---|---|---|---|---|
| ೧ | ರಾಮದುರ್ಗ | ೨ | ೭ | ೩೫ |
| ೨ | ಸವದತ್ತಿ | ೬ | ೧೬ | ೧೮೩ |
| ೩ | ಗೋಕಾಕ | ೧ | ೨ | ೧೫ |
| | **ಒಟ್ಟು** | **೯** | **೨೫** | **೨೩೩** |

ಒಟ್ಟು ೯ ಗ್ರಾಮಗಳಲ್ಲಿ ಸಾಮೂಹಿಕ ಸೀಮಂತ ಕಾರ್ಯಕ್ರಮ ನಡೆದಿದ್ದು, ೨೫ ಗರ್ಭಿಣಿ ಮಹಿಳೆಯರಿಗೆ ಪ್ರಸವ ಪೂರ್ವ ಆರೈಕೆ ಕುರಿತು ತಿಳಿಸಲಾಗಿದ್ದು, ಈ ಕಾರ್ಯಕ್ರಮದಲ್ಲಿ ಸಂಘದ ೨೩೩ ಮಹಿಳೆಯರು ಭಾಗವಹಿಸಿರುತ್ತಾರೆ.

**ಅಂಗನವಾಡಿ / ಎ.ಎನ್.ಎಮ್ ಮತ್ತು ಉಪ ಆಸ್ಪತ್ರೆಗೆ ಭೇಟಿ:**

ಆರೋಗ್ಯ ಕಮೀಟಿಯ ಮಹಿಳೆಯರು ಅಂಗನವಾಡಿ, ಎ.ಎನ್.ಎಮ್ ಮತ್ತು ಉಪ ಆಸ್ಪತ್ರೆಗೆ ಭೇಟಿಯನ್ನು ಮಾಡುವ ಮೂಲಕ ಸರ್ಕಾರದ ಯೋಜನೆಯ ಮಾಹಿತಿ ಪಡೆದುಕೊಂಡು, ಊರಿಗೊಂದು ಸಂಘದ ಸಭೆಯಲ್ಲಿ ಮಹಿಳೆಯರೊಂದಿಗೆ ಚರ್ಚಿಸುತ್ತಿದ್ದಾರೆ.

ಮುಖ್ಯವಾಗಿ ಗರ್ಭಿಣಿಯರಿಗೆ ಮತ್ತು ಕಿಶೋರಿಯರಿಗೆ ಪೌಷ್ಠಿಕ ಆಹಾರ ಕೊಡಿಸುವುದು, ಹೆರಿಗೆ ಭತ್ಯೆಯ ಸೌಲಭ್ಯ ಒದಗಿಸುವುದು, ರಕ್ತ ಹೀನತೆಯ ಕುರಿತು ಮಾಹಿತಿ ತಿಳಿಸುವುದರ ಮೂಲಕ ಪೌಷ್ಠಿಕ ಆಹಾರದ ಸೇವನೆಯ ಕಾಳಜಿ ಮೂಡಿಸುವುದು.

*ಕೋಷ್ಟಕ – ೪.೩.೧೪ : ಅಂಗನವಾಡಿ / ಎ.ಎನ್.ಎಮ್ ಮತ್ತು ಉಪ ಆಸ್ಪತ್ರೆಗೆ ಭೇಟಿ ವಿವರ.*

| ಅ.ನಂ | ತಾಲೂಕ | ಅಂಗನವಾಡಿ | | ಎ.ಎನ್.ಎಮ್ | | ಉಪ ಆಸ್ಪತ್ರೆಗೆ | |
|---|---|---|---|---|---|---|---|
| | | ಗು.ಸಂ. | ಮ.ಸಂ. | ಗು.ಸಂ. | ಮ.ಸಂ. | ಗು.ಸಂ. | ಮ.ಸಂ. |
| ೧ | ರಾಮದುರ್ಗ | ೫೯ | ೨೬೩ | ೧೩ | ೪೯ | ೫೪ | ೬೫ |
| ೨ | ಸವದತ್ತಿ | ೧೪ | ೨೪ | ೨೫ | ೧೦೫ | ೩೬ | ೧೪೩ |
| ೩ | ಗೋಕಾಕ | ೩ | ೧೨ | – | – | ೬ | ೧೫ |
| | **ಒಟ್ಟು** | **೭೬** | **೨೯೯** | **೩೮** | **೧೫೪** | **೯೬** | **೨೨೩** |

*ಮೂಲ: ಮಹಿಳಾ ಸಮಾಖ್ಯಾ ವಾರ್ಷಿಕ ವರದಿ ೨೦೦೯-೧೦*

**ಹೆರಿಗೆ ಭತ್ಯೆ ಸೌಲಭ್ಯ ಒದಗಿಸುವುದು :**

- ಪ್ರಸೂತಿ ಆರೈಕೆ ಯೋಜನೆಯಡಿಯಲ್ಲಿ ೧೨ ಮಹಿಳೆಯರಿಗೆ ರೂ. ೧೫,೦೦೦ ಪ್ರಸೂತಿ ಆರೈಕೆ ಭತ್ಯೆ ಹಾಗೂ, ರೂ ೨,೨೫೦ ಹೆರಿಗೆ ಭತ್ಯೆ ಸೌಲಭ್ಯವನ್ನು ದೊರಕಿಸಿಕೊಟ್ಟಿದೆ.
- ಗೋಕಾಕ ತಾಲೂಕಿನ ಶಿವಾಪೂರ, ಬೆನಕಟ್ಟಿ, ಹುಲಿಕಟ್ಟಿ ಗ್ರಾಮದ ಮಹಿಳೆಯರಿಗೆ ಹಾಗೂ ಸವದತ್ತಿ ತಾಲೂಕಿನ ಬಡಿಗವಾಡ, ಕಲ್ಲಾಪುರ, ಬಸಿಡೋಣಿ, ಹರಳಕಟ್ಟಿ ಗ್ರಾಮದ ಮಹಿಳೆಯರಿಗೆ ಮಡಿಲು ಕಿಟ್ ಹಾಗೂ ಪ್ರಸೂತಿ ಆರೈಕೆ ಯೋಜನೆಯಿಂದ ತಲಾ ರೂ. ೨,೦೦೦ ಗಳ ಧನ ಸಹಾಯ ದೊರಕಿಸಿ ಕೊಟ್ಟಿದೆ.

**ಆಶಾ ಕಾರ್ಯಕರ್ತರ ಆಯ್ಕೆ:**

ಸಂಘದ ಮಹಿಳೆಯರು ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಮೂಲಕ ಹೆಚ್ಚಿನ ಮಾಹಿತಿ ತಿಳಿದುಕೊಂಡು ಗ್ರಾಮಗಳಲ್ಲಿ ತಮ್ಮನ್ನು ಗುರುತಿಸುವ ಮಟ್ಟಕ್ಕೆ ಬೆಳೆದಿದ್ದಾರೆ. ಅದುದರಿಂದ ಆಸ್ಪತ್ರೆಯೊಂದಿಗೆ ಒಳ್ಳೆಯ ಸಂಬಂಧ ಹೊಂದಿರುವುದರಿಂದ ಗುಂಪಿನ ಮಹಿಳೆಯರು ಆಶಾ ಕಾರ್ಯಕರ್ತರಾಗಿ ಆಯ್ಕೆಗೊಳ್ಳುತ್ತಿದ್ದಾರೆ.

*ಕೋಷ್ಟಕ – ೪.೩.೧೫ : ಆಶಾ ಕಾರ್ಯಕರ್ತರ ಆಯ್ಕೆ*

| ಅ.ನಂ | ತಾಲೂಕು | ಗ್ರಾಮ ಸಂಖ್ಯೆ | ಆಶಾ ಕಾರ್ಯಕರ್ತರ ಸಂಖ್ಯೆ |
|---|---|---|---|
| ೧ | ರಾಮದುರ್ಗ | ೧೦ | ೧೧ |
| ೨ | ಸವದತ್ತಿ | ೧೦ | ೧೧ |
| ೩ | ಗೋಕಾಕ | ೧೩ | ೧೩ |
| | **ಒಟ್ಟು** | **೩೩** | **೩೫** |

**ಶ್ರಮದಾನ:**

ರಾಮದುರ್ಗ ತಾಲೂಕಿನ ದೊಡ್ಡಮಂಗಡಿ, ಅವರಾದಿ, ಮುದೇನಕೊಪ್ಪ, ಕಿಲ್ಲಾತೊರಗಲ್ಲ ಹಾಗೂ ಮುಳ್ಳೂರು ಗ್ರಾಮದಲ್ಲಿ ಸಂಘದ ಮಹಿಳೆಯರು ಮತ್ತು ಗ್ರಾಮಸ್ಥರು ಪಂಚಾಯತಿಯವರ ಸಹಯೋಗದಿಂದ ಒಟ್ಟು ೧೨೩ ಜನ ಶ್ರಮದಾನ ಚಟುವಟಿಕೆಯಲ್ಲಿ ಭಾಗವಹಿಸಿರುತ್ತಾರೆ. ಕುಡಿಯುವ ನೀರಿನ ಟ್ಯಾಂಕ್ ಸ್ವಚ್ಛತೆ ಮತ್ತು ಗ್ರಾಮದ ಓಣಿಯಲ್ಲಿ ಸ್ವಚ್ಛತೆಯನ್ನು ಮಾಡುವ ಮೂಲಕ ಸುತ್ತಲಿನ ಪರಿಸರ ಸ್ವಚ್ಛವಾಗಿಟ್ಟುಕೊಂಡು ಆರೋಗ್ಯದ ಕಡೆಗೆ ಕಾಳಜಿ ವಹಿಸುವಂತೆ ಗ್ರಾಮಸ್ಥರಿಗೆ ತಿಳುವಳಿಕೆ ನೀಡಿದ್ದಾರೆ.

**ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಭಾಗವಹಿಸುವಿಕೆ:**

ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ೨ ದಿನ ಸಿಬ್ಬಂದಿಗಳು ಮತ್ತು ಸಂಘದ ಮಹಿಳೆಯರು ಭಾಗವಹಿಸುತ್ತಾರೆ. ಮಕ್ಕಳಿಗೆ ಪೋಲಿಯೋ ಹನಿಯನ್ನು ಹಾಕುವ ಮೂಲಕ ಆರೋಗ್ಯದ ಕಾರ್ಯಕ್ರಮದಲ್ಲಿ ಕ್ರಿಯಾಶೀಲರಾಗಿ ಸೇವೆ ಸಲ್ಲಿಸುತ್ತಾರೆ.

*ಕೋಷ್ಟಕ – ೪.೩.೧೬ : ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಭಾಗವಹಿಸುವಿಕೆ*

| ಕ್ರ.ಸಂ | ತಾಲೂಕು | ಗ್ರಾಮ.ಸಂ | ಭಾಗವಹಿಸಿದ ಮಹಿಳೆಯರ ಸಂಖ್ಯೆ | ಮಕ್ಕಳ ಸಂಖ್ಯೆ |
|---|---|---|---|---|
| ೧ | ರಾಮದುರ್ಗ | ೧೩ | ೫೯ | ೨೦೯ |
| ೨ | ಸವದತ್ತಿ | ೪ | ೧೪ | ೩೯೦ |
| | ಒಟ್ಟು | ೧೭ | ೭೩ | ೫೯೯ |

*ಮೂಲ: ಮಹಿಳಾ ಸಮಾಖ್ಯಾ ವಾರ್ಷಿಕ ವರದಿ ೨೦೦೯–೧೦*

ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಮಹಿಳೆಯರ ಪಾಲುದಾರಿಕೆಯನ್ನು ಹೆಚ್ಚಿಸಲು 'ಸಮಾಖ್ಯಾ' ಹಲವು ಯೋಜನೆಗಳನ್ನು ರೂಪಿಸಿ, ವಿವಿಧ ಕಾರ್ಯಕ್ರಮಗಳನ್ನು ಸಂಯೋಜಿಸುತ್ತಿದೆ. ಅವುಗಳಲ್ಲಿಯ ಪ್ರಮುಖ ಕಾರ್ಯಕ್ರಮಗಳು ಇಂತಿವೆ :

**ಪಂಚಾಯತ ವ್ಯವಸ್ಥೆಯಲ್ಲಿ ಮಹಿಳೆಯರು :**

ಗ್ರಾಮ ಪಂಚಾಯಿತಿ ವ್ಯವಸ್ಥೆ ಬಗ್ಗೆ ಅರಿತುಕೊಂಡ ಮಹಿಳೆಯರು, ಗ್ರಾಮ ಪಂಚಾಯತಿಗೆ ಭೇಟಿ ನೀಡಿ ಸೌಲಭ್ಯಗಳ ಬಗ್ಗೆ ವಿಚಾರಿಸುತ್ತಿದ್ದಾರೆ. ಸಮುದಾಯದ ಸಮಸ್ಯೆಗಳನ್ನು ಗ್ರಾಮ ಪಂಚಾಯತಿಯವರ ಗಮನಕ್ಕೆ ತರುತ್ತಿದ್ದು, ಪಂಚಾಯತಿಯವರು ಹಮ್ಮಿಕೊಳ್ಳುವ ಗ್ರಾಮಸಭೆ ಮತ್ತು ಇತರ ಕಾರ್ಯಕ್ರಮಗಳಲ್ಲಿ ಸಂಘದ ಮಹಿಳೆಯರು ಸಕ್ರೀಯವಾಗಿ ಭಾಗವಹಿಸುತ್ತಿದ್ದಾರೆ. ಚುನಾಯಿತ ಮಹಿಳಾ ಪ್ರತಿನಿಧಿಗಳು ಸಂಘದ ಸಭೆಯಲ್ಲಿ ವಿಷಯಗಳನ್ನು ಚರ್ಚಿಸಿಕೊಂಡು ಗ್ರಾಮ ಪಂಚಾಯತ ಸಾಮಾನ್ಯ ಸಭೆಯಲ್ಲಿ ಪ್ರಸ್ತಾಪಿಸುತ್ತಾರೆ.

ಅಲ್ಲದೆ ಗ್ರಾಮ ಸಭೆಗಳಲ್ಲಿ ಭಾಗವಹಿಸುವ ಮುಖಾಂತರವಾಗಿ ಅಲ್ಲಿರುವ ಯೋಜನೆಗಳ ಕುರಿತು ಮಾಹಿತಿಯನ್ನು ಪಡೆದುಕೊಂಡು ಗುಂಪಿನ ಸದಸ್ಯರಲ್ಲಿ ಹಂಚಿಕೊಳ್ಳುತ್ತಾರೆ.

ಇದರ ಜೊತೆ ಜೊತೆಗೆ ಕುಡಿಯುವ ನೀರಿನ ವ್ಯವಸ್ಥೆ, ಗ್ರಾಮ ನೈರ್ಮಲ್ಯ ಮತ್ತು ಶಾಲಾ ವ್ಯವಸ್ಥೆ ಕುರಿತು ಗ್ರಾಮ ಸಭೆಯಲ್ಲಿ ಚರ್ಚಿಸುತ್ತಿದ್ದಾರೆ. ಇದರೊಂದಿಗೆ ಗ್ರಾಮ ಪಂಚಾಯತಿಯಲ್ಲಿ ಗ್ರಾಮೀಣ ಉದ್ಯೋಗ ಭರವಸೆ ಯೋಜನೆಯಡಿಯಲ್ಲಿ ಮಾಡಿರುವ ಕೆಲಸಕ್ಕೆ ನಿಗದಿತ ವೇತನ ಪಡೆಯುತ್ತಿದ್ದಾರೆ ಹೀಗೆ ಮಹಿಳೆಯರು ಪಂಚಾಯತಿಯೊಂದಿಗೆ ಉತ್ತಮ ಸಂಪರ್ಕವನ್ನು ಬೆಳೆಸುವಲ್ಲಿ ಸಮಾಖ್ಯಾ ಯಶಸ್ವಿಯಾಗಿದೆ. ಗ್ರಾಮ ಪಂಚಾಯತ ಮತ್ತು ತಾಲೂಕು ಪಂಚಾಯತ ಚುನಾವಣೆಗೆ ಸ್ಪರ್ಧಿಸುವ ಮನೋಭಾವನೆಯನ್ನು ಬೆಳೆಸಿಕೊಂಡು ಸ್ಥಳಿಯ ಸಂಸ್ಥೆಗಳ ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸಲು ಮುಂದಾಗಿರುತ್ತಾರೆ.

***ಕೋಷ್ಠಕ – ೪.೩.೧೭ : ಗ್ರಾಮ / ತಾಲೂಕಾ ಪಂಚಾಯತ್ ಭೇಟಿ ಕುರಿತು:***

| ಅ.ನಂ | ತಾಲೂಕು | ಗ್ರಾಮ ಪಂಚಾಯತಿಗೆ ಭೇಟಿ ನೀಡಿದ | | ತಾಲೂಕು ಪಂಚಾಯತಿಗೆ ಭೇಟಿ ನೀಡಿದ | |
|---|---|---|---|---|---|
| | | ಗ್ರಾಮ ಸಂಖ್ಯೆ | ಮಹಿಳೆ ಸಂಖ್ಯೆ | ಗ್ರಾಮ ಸಂಖ್ಯೆ | ಮಹಿಳೆ ಸಂಖ್ಯೆ |
| ೧ | ರಾಮದುರ್ಗ | ೧೦೩ | ೭೬೦ | ೨೦ | ೨೭ |
| ೨ | ಸವದತ್ತಿ | ೯೪ | ೫೧೬ | ೨೧ | ೪೬ |
| ೩ | ಗೋಕಾಕ | ೪೩ | ೩೪೪ | ೦೧ | ೧೮ |
| | **ಒಟ್ಟು** | **೨೪೦** | **೧೬೨೦** | **೪೨** | **೯೧** |

ಈ ರೀತಿಯಾಗಿ ೨೪೦ ಗ್ರಾಮಗಳ ೨೪೦ ಗುಂಪುಗಳಿಂದ ೧೬೨೦ ಮಹಿಳೆಯರು ಗ್ರಾಮ/ ತಾಲೂಕಾ ಪಂಚಾಯತ ಭೇಟಿಯನ್ನು ಮಾಡುವ ಮುಖಾಂತರ ಸಂಘ ಮತ್ತು ಸಮುದಾಯದೊಂದಿಗೆ ಉತ್ತಮ ಬಾಂಧವ್ಯವನ್ನು ಹೆಚ್ಚಿಸಿದ್ದಾರೆ.

**ನೆರೆಹಾವಳಿ:**

ಸಪ್ಟೆಂಬರ್ ೨೦೦೯ ತಿಂಗಳಲ್ಲಿ ನೆರೆಹಾವಳಿಯಿಂದಾಗಿ ರಾಮದುರ್ಗ, ಸವದತ್ತಿ ಹಾಗೂ ಗೋಕಾಕ ತಾಲೂಕಿನ ೩೭ ಗ್ರಾಮಗಳಲ್ಲಿ ಸುಮಾರು ೪೩೪೬ ಮನೆಗಳು ಬಿದ್ದಿದ್ದು, ಜನರು ತುಂಬಾ ತೊಂದರೆ ಅನುಭವಿಸುವಂತಾಗಿತ್ತು. ಮನೆಗಳಲ್ಲಿ ಸಂಗ್ರಹಿಸಿಟ್ಟಿದ್ದ ಧಾನ್ಯಗಳು ನೀರಿನಿಂದ ನೆನೆದು ಹಾಳಾಗಿದ್ದಲ್ಲದೇ ನೀರಿನ ರಭಸಕ್ಕೆ ಹರಿದು ಹೋಗಿದ್ದವು. ದೇವಸ್ಥಾನ, ಪಂಚಾಯಿತಿ, ಶಾಲೆಗಳಲ್ಲಿ ಜನರು ಆಶ್ರಯ ಪಡೆದುಕೊಂಡಿದ್ದರು.

- ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಹಿಳಾ ಸಮಾಖ್ಯಾ ಸಿಬ್ಬಂದಿ ನೆರೆಹಾವಳಿ ಸಂತ್ರಸ್ತರಿಗೆ ಪರಿಹಾರ ಕಲ್ಪಿಸಲು ಹಲವು ವಿಧಗಳಲ್ಲಿ ನೆರವು ನೀಡಿದ್ದಾರೆ.
- ನೆರೆಹಾವಳಿಯಿಂದ ಗ್ರಾಮದಲ್ಲಿ ಸಾಂಕ್ರಾಮಿಕ ಮಲೇರಿಯಾ, ಚಿಕೂನ್ ಗುನ್ಯಾ, ಡೆಂಗ್ಯೂ ಜ್ವರ, ಕಾಲರಾ ರೋಗಗಳು ಹರಡದಂತೆ ಮುಂಜಾಗ್ರತಾ ಕ್ರಮಗಳ ಕುರಿತು ಮಾಹಿತಿ ನೀಡಿದರು.
- ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಭೇಟಿಯಾಗಿ, ವೈದ್ಯಾಧಿಕಾರಿಗಳು ನಿರಂತರ ಭೇಟಿ ನೀಡಿ ಸಂತ್ರಸ್ತರ ಆರೋಗ್ಯ ವಿಚಾರಿಸುವಂತೆ ನೋಡಿಕೊಂಡಿರುತ್ತಾರೆ.
- ಸಂಘದ ಮಹಿಳೆಯರು ಶ್ರಮದಾನ ಮಾಡಿ, ಸ್ವಚ್ಛತೆಯನ್ನು ಕಾಪಾಡಿಕೊಳ್ಳಲು ನೆರವಾಗಿದ್ದಾರೆ.

ಪುರುಷ ಪ್ರಧಾನವಾದ ವ್ಯವಸ್ಥೆಯಲ್ಲಿ ಮಹಿಳೆ ಮನೆಯೊಳಗೆ ಬಂಧಿಯಾಗುವ ವ್ಯವಸ್ಥೆ ಬೆಳೆಯಿತು. ಕಾನೂನು, ಆಡಳಿತ, ಸರಕಾರಿ ಕಾರ್ಯಾಲಯಗಳಿಂದ ದೂರವೇ ಉಳಿದರು. ಅವರಲ್ಲಿ ಕಾನೂನು ಅರಿವು ಮೂಡಿಸಿ, ಸರಕಾರಿ ಕಾರ್ಯಾಲಯ ಹಾಗೂ ಆಡಳಿತದೊಂದಿಗೆ ಬೆಸೆಯುವ ಗುರಿ ಈ ಸಂಸ್ಥೆ ಹೊಂದಿದ್ದು, ಅದನ್ನು ಬಹುಮಟ್ಟಿಗೆ ಸಾಧಿಸಿದೆ.

**ಮಹಿಳಾ ಸಮಾಖ್ಯಾ :**

ಸವದತ್ತಿ ಮತ್ತು ರಾಮದುರ್ಗ ತಾಲೂಕಿನ ಶಿರಸಂಗಿ ಹಾಗೂ ಗುದಗೊಪ್ಪ ಗ್ರಾಮಗಳ ತಾಲೂಕು ಕಾನೂನು ನೆರವು ಸಮಿತಿಯ ಮುಖಾಂತರ ಕಾನೂನು ಅರಿವು ಶಿಬಿರಗಳನ್ನು ಆಯೋಜಿಸಿತ್ತು. ಇದರಲ್ಲಿ ಮುಖ್ಯವಾಗಿ ತಾಲೂಕಿನಲ್ಲಿ ಕಾನೂನು ಸೇವಾ ಸಮಿತಿವತಿಯಿಂದ ಹಿರಿಯ ನ್ಯಾಯಾಧೀಶರು, ನ್ಯಾಯವಾದಿಗಳು ಮತ್ತು ಚುನಾಯಿತ ಪ್ರತಿನಿಧಿಗಳು ಭಾಗವಹಿಸಿ, ಕಾನೂನು ಕುರಿತು ಅರಿವು ಮೂಡಿಸಿದರು. ಮುಖ್ಯವಾಗಿ ಈ ಶಿಬಿರದಲ್ಲಿ ಮಹಿಳಾ ಆಸ್ತಿ ಹಕ್ಕು, ಕೌಟುಂಬಿಕ ದೌರ್ಜನ್ಯ ತಡೆ ಕಾಯಿದೆ ಮತ್ತು ಮಹಿಳೆಯರ ಹಕ್ಕುಗಳ ಕುರಿತು ಮಾಹಿತಿ ನೀಡಲಾಗಿದೆ.

ಈ ಶಿಬಿರದಲ್ಲಿ ಒಟ್ಟು ೧೪೫ ಮಹಿಳೆಯರು ಮತ್ತು ೨೨೦ ಪುರುಷರು ಹಾಗೂ ಕಿಶೋರ ಮತ್ತು ಕಿಶೋರಿಯರು ಭಾಗವಹಿಸಿ, ಕಾನೂನು ಅರಿವು ಶಿಬಿರದ ಪ್ರಯೋಜನವನ್ನು ಪಡೆದುಕೊಂಡಿರುತ್ತಾರೆ.

ಆರ್ಥಿಕಾಭಿವೃದ್ಧಿಯಲ್ಲಿ ಮಹಿಳೆಯರ ಸಹಭಾಗಿತ್ವ :

*ಕೋಷ್ಠಕ – ೪.೩.೧೮ : ಉಳಿತಾಯ ಗುಂಪುಗಳ ವಿವರ :*

| ಕ್ರ.ಸಂ. | ತಾಲೂಕು | ಗ್ರಾ.ಸಂ. | ಗುಂ.ಸಂ. | ಮ.ಸಂ. | ಉಳಿತಾಯ ಮಾಡಿದ | |
|---|---|---|---|---|---|---|
| | | | | | ಗುಂಪು | ಮ.ಸಂ. |
| ೧ | ರಾಮದುರ್ಗ | ೫೬ | ೫೪ | ೧೧೬೩ | ೪೪ | ೭೯೩ |
| ೨ | ಸವದತ್ತಿ | ೫೨ | ೯೮ | ೧೭೩೨ | ೭೬ | ೧೨೯೯ |
| ೩ | ಗೋಕಾಕ | ೫೦ | ೩೩ | ೫೦೭ | ೧೬ | ೨೭೩ |
| ೪ | ರಾಯಬಾಗ | ೩೦ | ೧ | ೧೩ | – | – |
| | ಒಟ್ಟು | ೧೫೮ | ೧೮೬ | ೩೪೧೫ | ೧೩೬ | ೨೩೬೫ |

ಉಳಿತಾಯವನ್ನು ಆಂತರಿಕ ಸಾಲದ ವ್ಯವಹಾರಕ್ಕೆ ಬಳಸಿಕೊಳ್ಳಲಾಗುತ್ತಿದೆ. ಸಾಲ ಪಡೆದವರು ಅನುಕೂಲಕ್ಕೆ ತಕ್ಕಂತೆ ಕಂತುಗಳ ಪ್ರಕಾರ ಸಾಲ ಮರುಪಾವತಿ ಮಾಡಬಹುದಾಗಿದೆ. ಸಾಲವಾಗಿ ಪಡೆದಂತಹ ಹಣವನ್ನು ಮಕ್ಕಳ ಶಿಕ್ಷಣ, ಮನೆ ಅಡಚಣೆ, ಕುಟುಂಬದ ಸದಸ್ಯರ ಆರೋಗ್ಯಕ್ಕಾಗಿ ಮತ್ತು ಇತರ ಆರ್ಥಿಕ ಚಟುವಟಿಕೆಗಳಿಗಾಗಿ ಬಳಸಿಕೊಳ್ಳಬಹುದು.

ಈ ಅವಧಿಯಲ್ಲಿ ನಡೆದ ಉಳಿತಾಯ ಹಣದ ಬಳಕೆಯ ವಿವರ ಹೀಗಿದೆ.

*ಕೋಷ್ಠಕ – ೪.೩.೧೯ : ಹಣದ ಬಳಕೆಯ ವಿವರ*

| ಅ.ನಂ | ತಾಲೂಕು | ಹಣ ಬಳಕೆ ಮಾಡಿದ ಮಹಿಳೆ ಸಂಖ್ಯೆ | ಬಳಕೆಯಾದ ಉಳಿತಾಯ ಹಣದ ಮೊತ ರೂ್ತ | ಸಾಲ ಮರುಪಾವತಿ | |
|---|---|---|---|---|---|
| | | | | ಅಸಲು ರೂ. | ಬಡ್ಡಿ ರೂ. |
| ೧ | ರಾಮದುರ್ಗ | ೩೯೧ | ೧೧,೦೨,೭೨೩.೦೦ | ೨,೨೦,೫೧೦.೦೦ | ೫೦,೬೪೨.೦೦ |
| ೨ | ಸವದತ್ತಿ | ೧೮೨ | ೫,೯೭,೪೦೦.೦೦ | ೧,೧೧,೪೦೦.೦೦ | ೮೭,೬೯೮.೦೦ |
| ೩ | ಗೋಕಾಕ | ೭೫ | ೧,೧೪,೯೬೦.೦೦ | ೧೬,೦೦೦.೦೦ | ೧೦,೨೧೦.೦೦ |
| | ಒಟ್ಟು | ೬೪೮ | ೧೮,೧೫,೦೮೩.೦೦ | ೩,೪೭,೯೧೦.೦೦ | ೧,೪೮,೫೫೦.೦೦ |

*ಕೋಷ್ಠಕ – ೪.೩.೨೦ : ಉಳಿತಾಯದ ವಿವರ:*

| ಅ. ನಂ | ತಾಲೂಕು | ಗ್ರಾ.ಸಂ. | ಗುಂ.ಸಂ. | ಮ.ಸಂ. | ಮಾರ್ಚ–೦೯ ಕೊನೆಯಲ್ಲಿರುವ ಮೊತ್ತ | ಮಾರ್ಚ–೧೦ ರ ಕೊನೆಯಲ್ಲಿರುವ ಮೊತ್ತ | ಒಟ್ಟು |
|---|---|---|---|---|---|---|---|
| ೧ | ರಾಮದುರ್ಗ | ೪೪ | ೫೪ | ೭೯೩ | ೪,೨೧,೫೫೦.೦೦ | ೯,೯೧,೬೨೦.೦೦ | ೧೪,೧೩,೧೭೦.೦೦ |
| ೨ | ಸವದತ್ತಿ | ೪೯ | ೮೬ | ೧೪೮೪ | ೪,೬೩,೮೫೦.೦೦ | ೧೧,೭೫,೬೮೦.೦೦ | ೧೬,೩೯,೫೩೦.೦೦ |
| ೩ | ಗೋಕಾಕ | ೨೨ | ೩೩ | ೭೨೦ | ೧,೩೦,೪೨೦.೦೦ | ೨,೫೬,೬೧೫.೦೦ | ೩,೮೭,೦೩೫.೦೦ |
| | ಒಟ್ಟು | ೧೧೫ | ೧೭೩ | ೨೭೫೨ | ೧೦,೧೫,೮೨೦.೦೦ | ೨೪,೨೩,೯೧೫.೦೦ | ೩೪,೩೯,೭೩೫.೦೦ |

**ಬ್ಯಾಂಕ್, ಇಲಾಖೆ ಮತ್ತು ಸಂಸ್ಥೆಯಿಂದ ಪಡೆದ ಪ್ರಯೋಜನ :**

ನಿರಂತರವಾಗಿ ಉಳಿತಾಯದ ಚಟುವಟಿಕೆಯನ್ನು ನಡೆಸಿಕೊಂಡು ಹೊರಟ ಗುಂಪುಗಳು, ಉತ್ತಮವಾಗಿ ದಾಖಲಾತಿಯನ್ನು ನಿರ್ವಹಣೆ ಮಾಡುತ್ತಿವೆ. ಅಲ್ಲದೇ ಸ್ಥಳೀಯ ಸಂಸ್ಥೆಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಿವೆ. ಬ್ಯಾಂಕುಗಳಿಂದ ಸಾಲ ಪಡೆಯುತ್ತಿದೆ. ಜೊತೆಗೆ ಸರ್ಕಾರದ ಸಹಾಯ ಧನ ಪಡೆದು ಸದಸ್ಯರ ಆರ್ಥಿಕಾಭಿವೃದ್ಧಿಗೆ ಸಹಕಾರಿಯಾಗಿವೆ.

***ಕೋಷ್ಟಕ – ೪.೩.೨೧ : ಬ್ಯಾಂಕ್, ಇಲಾಖೆ ಮತ್ತು ಸಂಸ್ಥೆಯಿಂದ ಪಡೆದ ಸಾಲದ ವಿವರ :***

| ಅ. ಸಂ | ತಾಲೂಕು | ಗ್ರಾಮ. | ಉ.ಗುಂ.ಸಂ. | ಮ.ಸಂ | ಮಾಚ–೦೯ ಕೊನೆಯಲ್ಲಿರುವ ಮೊತ್ತ ರೂ. | ಮಾರ್ಚ–೧೦ ರ ಕೊನೆಯಲ್ಲಿರುವ ಮೊತ್ತ ರೂ. |
|---|---|---|---|---|---|---|
| ೧ | ಸವದತ್ತಿ | ಹಳ್ಳೂರ | ರೇಣುಕಾದೇವಿ ಮಹಿಳಾ ಸಮಾಖ್ಯಾ ಸಂಘ | ೨೦ | ೧೦,೦೦೦.೦೦ | ೧೫,೦೦೦.೦೦ |
| ೨ | ,, | ,, | ಮಹಾಲಕ್ಷ್ಮೀ ಮಹಿಳಾ ಸಮಾಖ್ಯಾ ಸಂಘ | ೨೦ | ೧೦,೦೦೦.೦೦ | ೧೫,೦೦೦.೦೦ |
| ೩ | ,, | ಕಾರ್ಲಕಟ್ಟಿ | ಭಾಗ್ಯಲಕ್ಷ್ಮೀ ಮಹಿಳಾ ಸಮಾಖ್ಯಾ ಸಂಘ | ೨೦ | ೧೦,೦೦೦.೦೦ | – |
| ೪ | ,, | ,, | ಕಾವೇರಿ ಮಹಿಳಾ ಸಮಾಖ್ಯಾ ಸಂಘ | ೨೦ | ೧೦,೦೦೦.೦೦ | – |
| ೫ | ,, | ಮಾಡಮಗೇರಿ ಕ್ರಾಸ್ | ಲಕ್ಷ್ಮಿದೇವಿ ಸಂಘ | ೧೪ | ೧೦,೦೦೦.೦೦ | ೨೦,೦೦೦.೦೦ |
| ೬ | ,, | ಮಾಡಮಗೇರಿ | ದುರ್ಗಾದೇವಿ ಸಂಘ | ೧೮ | ೧೦,೦೦೦.೦೦ | ೨೦,೦೦೦.೦೦ |
| | ಒಟ್ಟು | ೪ ಗ್ರಾಮ | ೬ ಗುಂಪು | ೧೧೨ | ೬೦,೦೦೦.೦೦ | ೭೦,೦೦೦.೦೦ |

**ಗಿಡಮೂಲಿಕೆ ಔಷಧಿ ತಯಾರಿಕೆ ತರಬೇತಿ:**

ಸವದತ್ತಿ ಮತ್ತು ರಾಮದುರ್ಗ ತಾಲೂಕುಗಳಲ್ಲಿ ಸಂಘದ ಮಹಿಳೆಯರಿಗೆ ತಾಲೂಕು ಮಟ್ಟದಲ್ಲಿ ಗಿಡಮೂಲಿಕೆ ಔಷಧಿ ತಯಾರಿಕೆ ತರಬೇತಿಯನ್ನು ನೀಡಲಾಗುತ್ತಿದೆ.

ಈ ತರಬೇತಿಯಲ್ಲಿ ಸ್ಥಳೀಯವಾಗಿ ಲಭ್ಯವಿರುವ ಗಿಡಮೂಲಿಕೆ ಔಷಧೀಯ ಸಸ್ಯಗಳ ಕುರಿತು ಪರಿಚಯವನ್ನು ಮಾಡಿಕೊಡುವುದರೊಂದಿಗೆ ಔಷಧಿಯನ್ನು (ಮನೆಮದ್ದು) ತಯಾರಿಸುವ ಬಗ್ಗೆ ಮತ್ತು ಅದರ ಬಳಕೆಯನ್ನು ಮಾಡುವ ಬಗ್ಗೆ ತಿಳಿಸುವ ಪ್ರಯತ್ನ ಸಾಗುತ್ತಿದೆ.

***ಕೋಷ್ಟಕ – ೪.೩.೨೨ : ತರಬೇತಿಯಲ್ಲಿ ಭಾಗವಹಿಸಿದವರ ವಿವರ:***

| ಕ್ರಸಂ | ತಾಲೂಕ | ದಿನಾಂಕ | ಸ್ಥಳ | ಭಾಗಾರ್ಥಿ ವಿವರ | | |
|---|---|---|---|---|---|---|
| | | | | ಗ್ರಾಮ | ಗುಂಪು | ಮ.ಸಂ |
| ೧ | ರಾಮದುರ್ಗ | ೨೩/೧೧/೦೯ ರಿಂದ ೨೫/೧೧/೦೯ | ಮನಿಹಾಳ | ೧೧ | ೧೧ | ೧೭ |
| ೨ | ಸವದತ್ತಿ | ೨೬/೧೧/೦೯ ರಿಂದ ೨೭/೧೧/೦೯ | ಮುನವಳ್ಳಿ | ೧೨ | ೧೫ | ೨೪ |
| | | | ಒಟ್ಟು | ೨೩ | ೨೬ | ೪೧ |

ಈ ಎಲ್ಲ ಕಾರ್ಯಕ್ರಮಗಳೊಂದಿಗೆ ಪೂರಕವಾಗಿ ಕಲೆ, ಸಾಹಿತ್ಯ, ಸಂಸ್ಕೃತಿ ಸಂವರ್ಧನೆಯ ಚಟುವಟಿಕೆಗಳನ್ನು ನಿರಂತರವಾಗಿ ಪೋಷಿಸುತ್ತಿದೆ.

ಸಂಪನ್ಮೂಲ ತಂಡವನ್ನು ರಚಿಸಿ, ಸಮಾಖ್ಯಾ ಧ್ಯೇಯೋದ್ದೇಶಗಳನ್ನು ಹೇಗೆ ಪ್ರಚಾರ ಮಾಡಬೇಕೆಂಬುದನ್ನು ಸದಸ್ಯರಿಗೆ, ಸಿಬ್ಬಂದಿಗೆ ತಿಳಿಸಿಕೊಡುತ್ತದೆ. ಅದಕ್ಕೆ ಪೂರಕವಾಗಿ ಕಲೆ, ಸಾಹಿತ್ಯ, ಪರಂಪರೆಯ ಮಾಧ್ಯಮಗಳ ನೆರವು ಪಡೆಯುವುದು.

**ಸಿಬ್ಬಂದಿಗಳ ಸಾಮರ್ಥ್ಯ ಬೆಳವಣಿಗೆ ತರಬೇತಿಗಳು:**

ಸಮಾಖ್ಯಾ ಸಿಬ್ಬಂದಿಗಳ ಸೇವಾ ಸಾಮರ್ಥ್ಯ ಹೆಚ್ಚಿಸಲು ಅವರಿಗೆ ವಿವಿಧ ತರಬೇತಿ ಶಿಬಿರಗಳನ್ನು ರೂಪಿಸಿದೆ.

- ಎಸ್.ಎಸ್.ಕೆ ತರಬೇತಿ
- ದಾಖಲಾತಿ ತರಬೇತಿ
- ಪಿ.ಆರ್.ಎ ತರಬೇತಿ
- ವಿಷಯವಾರು ಸಮಿತಿ ರಚನೆ ತರಬೇತಿ
- ಕಿಶೋರಿ ಮೇಳ ಸಂಘಟನಾ ತರಬೇತಿ
- ಪ್ಯಾರಾಲಿಗಲ್ ತರಬೇತಿ
- ಗುಣಗ್ರಹ್ಯ ವಿಚಾರಣೆ ತರಬೇತಿ

ಮಹಿಳಾ ಸಮಾಖ್ಯಾ ಜಿಲ್ಲಾ ಕಛೇರಿಯಲ್ಲಿ ಕಾರ್ಯಚಟುವಟಿಕೆಗಳಿಗೆ ಈ ತರಬೇತಿಗಳನ್ನು ನೀಡಲಾಗುತ್ತದೆ. ಜಿಲ್ಲೆಯ ಹಿರಿಯ ಮತ್ತು ಕಿರಿಯ ಸಂಪನ್ಮೂಲ ವ್ಯಕ್ತಿಗಳು ಮತ್ತು ಆಂತರಿಕ ಜಿಲ್ಲಾ ಸಂಪನ್ಮೂಲ ವ್ಯಕ್ತಿಗಳು ಸಿಬ್ಬಂದಿಗೆ ತರಬೇತುಗೊಳಿಸುವರು.

ಗುಣಗ್ರಹ್ಯ ವಿಚಾರಣೆ ತರಬೇತಿಯು ಡಣಾಪುರ ಮೈರಾಡಾ ಸಂಸ್ಥೆಯಲ್ಲಿ ಪಡೆಯಲಾಗಿದ್ದು, ಈ ತರಬೇತಿಯಲ್ಲಿ ೧ ವರ್ಷ ಸೇವಾ ಅವಧಿ ಪೂರ್ಣಗೊಳಿಸಿದ ೧೧ ಸಿಬ್ಬಂದಿಗಳು ಭಾಗವಹಿಸಿದ್ದರು.

**ಸಾಕ್ಷರ ಸಮಾಖ್ಯಾ ಕಾರ್ಯಕ್ರಮ :**

ಈ ವರ್ಷದ ಪ್ರಾರಂಭದಲ್ಲಿ ೬೫೦ ಜನ ಮಹಿಳೆಯರನ್ನು ಸಮಾಖ್ಯಾ ಸಾಕ್ಷರರನ್ನಾಗಿಸಿದೆ. ಆಯ್ಕೆ ಮಾಡಿಕೊಂಡ ಗ್ರಾಮಗಳಲ್ಲಿ ೧೮ ದಿನಗಳ ಸಾಕ್ಷರತಾ ಶಿಬಿರ ಏರ್ಪಡಿಸಿದೆ. ಶಿಬಿರ ನಡೆದ ಸ್ಥಳದಲ್ಲೇ ಕಲಿಕಾ ಕೇಂದ್ರಗಳನ್ನು ಮುಂದುವರೆಸಿದೆ.

*ಕೋಷ್ಟಕ – ೪.೩.೨೩ : ಸಾಕ್ಷರ ಸಮಾಖ್ಯಾ ಕಾರ್ಯಕ್ರಮದ ವಿವರ.*

| ಅ.ನಂ. | ತಾಲೂಕ | ಘಟಕಗಳ ಸಂಖ್ಯೆ | ಗ್ರಾಮಗಳ ಸಂಖ್ಯೆ | ಕೇಂದ್ರಗಳ ಸಂಖ್ಯೆ | ಅ.ಸಂಗಾತಿ ಸಂಖ್ಯೆ | ಕಲಿಕಾರ್ಥಿಗಳ ಸಂಖ್ಯೆ |
|---|---|---|---|---|---|---|
| ೧ | ಸವದತ್ತಿ | ೦೪ | ೧೩೨ | ೧೮ | ೧೮ | ೨೫೨ |
| ೨ | ರಾಮದುರ್ಗ | ೦೪ | ೧೨ | ೧೪ | ೧೧ | ೧೯೨ |
| ೩ | ಗೋಕಾಕ | ೦೩ | ೧೦ | ೧೫ | ೧೦ | ೧೬೦ |
| ಒಟ್ಟು | | ೧೧ | ೩೪ | ೪೨ | ೩೯ | ೬೦೪ |

ತರಬೇತಿ ಪಡೆದ ಅಕ್ಷರ ಸಂಗಾತಿಗಳು, ಮಹಿಳೆಯರಿಗೆ ಕಲಿಕಾ ಕೇಂದ್ರಕ್ಕೆ ಬರುವಂತೆ ಪ್ರೇರೇಪಿಸಿ, ಹಲವಾರು ಚಟುವಟಿಕೆಗಳನ್ನು ನಡೆಸುವ ಮೂಲಕ ಕಲಿಕೆಯನ್ನು ಹೇಳಿಕೊಡುತ್ತಿದ್ದಾರೆ.

ಹೀಗೆ ಮಹಿಳಾ ಸಮಾಖ್ಯಾ ಕರ್ನಾಟಕವು ಬೆಳಗಾವಿ ಜಿಲ್ಲೆಯಲ್ಲಿ ವಿವಿಧ ವಿನೂತನ ಕಾರ್ಯಕ್ರಮಗಳನ್ನು ಹಾಕಿ ಕೊಳ್ಳುವುದರ ಮೂಲಕ ಮಹಿಳೆಯರ ಸಬಲೀಕರಣಕ್ಕೆ ಒಂದು ವೇದಿಕೆಯನ್ನು ರೂಪಿಸಿದೆ ಎಂದು ಹೇಳಬಹುದು.

## ೪.೫ ಬರ್ಡ್ಸ್ ಸಂಸ್ಥೆ – ಗ್ರಾಮೀಣ ಅಭಿವೃದ್ಧಿ ಕ್ಷೇತ್ರ :

ಬರ್ಡ್ಸ್ ಎಂದರೆ ಬೆಲಗಾಮ್ ಇಂಟಿಗ್ರೇಟೆಡ್ ರೂರಲ್ ಡೆವ್ವಲೆಪಮೆಂಟ್ ಸೋಸಾಯಿಟಿ ಅಂದರೆ ಬೆಳಗಾವಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಸಂಸ್ಥೆ. ಇದು ಆರಂಭಗೊಂಡದ್ದು ೧೯೮೦ ರಲ್ಲಿ.

ಇದು ಬೆಳಗಾವಿ ಜಿಲ್ಲೆಯ ಒಂದು ಮಹತ್ವದ ಸರ್ಕಾರೇತರ ಸಂಸ್ಥೆ. ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, ೧೯೬೦ರ ಅಡಿಯಲ್ಲಿ ನೋಂದಣಿಯಾಗಿದ್ದು, ತನ್ನ ಪ್ರಧಾನ ಕಛೇರಿಯನ್ನು ಗೋಕಾಕ ತಾಲೂಕಿನ ನಾಗನೂರ ಗ್ರಾಮದಲ್ಲಿ ಮತ್ತು ಕಾರ್ಯಯೋಜನೆಗಳ ಕೇಂದ್ರವನ್ನು ತುಕ್ಕಾನಟ್ಟಿ ಗ್ರಾಮದಲ್ಲಿ ಹೊಂದಿದೆ. ಇವೆರಡೂ ಗ್ರಾಮಗಳು ತಾಲೂಕು ಕೇಂದ್ರ ಗೋಕಾಕದಿಂದ ೨೦ ಕಿ.ಮೀ. ಅಂತರದಲ್ಲಿವೆ.

'ಬರ್ಡ್ಸ್' ಸಂಸ್ಥೆಯು ಅಭಿವೃದ್ಧಿಯ ಕಳಕಳಿ ಹೊಂದಿದ ಸಮಾನ ಮನಸ್ಕರ ಸಂಘಟನೆಯಾಗಿದ್ದು, ಈ ಸಂಸ್ಥೆಯ ಮುಂದಾಳು ಶ್ರೀ ಆರ್.ಎಮ್.ಪಾಟೀಲರು. ಅವರೇ ಪ್ರಾರಂಭದಿಂದಲೂ ಅದರ ಕಾರ್ಯಕಾರಿ ನಿರ್ದೇಶಕರಾಗಿದ್ದಾರೆ. ಸಹಾಯವನ್ನು ಅಪೇಕ್ಷಿಸುತ್ತಿರುವ ಜನರ ಸರ್ವಾಂಗೀಣ ಅಭಿವೃದ್ಧಿಯನ್ನೇ ಮುಖ್ಯ ಗುರಿಯಾಗಿಸಿಕೊಂಡು ಈ ಸಂಸ್ಥೆಯು ಕಾರ್ಯಗೈಯ್ಯುತ್ತಿದೆ.

**ಉದ್ದೇಶಗಳು :**

- ✓ ತನ್ನ ವ್ಯಾಪ್ತಿಯ ಕ್ಷೇತ್ರದಲ್ಲಿರುವ ದಲಿತ ಜನತೆಯ ಸಾಮಾಜಿಕ-ಆರ್ಥಿಕ ಅಭಿವೃದ್ಧಿಗಾಗಿ ಕಾರ್ಯಗೈಯ್ಯುವುದು.
- ✓ ಅರ್ಹ ಮತ್ತು ಅಪೇಕ್ಷೆಯುಳ್ಳ ಜನರಿಗೆ ಶೈಕ್ಷಣಿಕ ಮತ್ತು ಇತರ ಸಾಂಸ್ಥಿಕ ಸೇವೆಗಳನ್ನು ನೀಡುವುದು.
- ✓ ಸಮುದಾಯದ ವಿವಿಧ ತರಹದ ಗುಂಪುಗಳಿಗೆ ಹಲವಾರು ಕೌಶಲ್ಯ ತರಬೇತಿಗಳನ್ನು ನೀಡುವದು. ಅದರಿಂದ ಅವರನ್ನು ಸ್ವಾವಲಂಬಿಗೊಳಿಸುವುದು.
- ✓ ಸ್ಥಳೀಯವಾಗಿ ಲಭ್ಯವಿರುವ ಮೂಲಭೂತ ಸೌಕರ್ಯಗಳ ಮೂಲಕ ಜನರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಯನ್ನು ಹೆಚ್ಚಿಸಿ ಅವರ ಸಹಭಾಗಿತ್ವವನ್ನು ಹೆಚ್ಚಿಸುವದು.
- ✓ ಸಮುದಾಯದ ದುರ್ಬಲ ಜನರ ಸರ್ವಾಂಗೀಣ ಅಭಿವೃದ್ಧಿಗಾಗಿ ಯತ್ನಿಸುವುದು.

ಈ ಉದ್ದೇಶಗಳ ಸಾಧನೆಗೆ 'ಬರ್ಡ್ಸ್' ಸಂಸ್ಥೆಯು ವಿವಿಧ ಯೋಜನೆಗಳನ್ನು ಸಿದ್ಧಪಡಿಸಿದೆ. ಅವುಗಳ ಮೂಲಕ ತನ್ನ ಉದ್ದೇಶಿತ ಗುರಿಯನ್ನು ಸಾಧಿಸಲು ಪ್ರಯತ್ನಿಸುತ್ತಿದೆ.

***ಕೋಷ್ಟಕ – ೪.೫.೧ : 'ಬರ್ಡ್ಸ್'ನ ಪ್ರಮುಖ ಯೋಜನೆಗಳು***

| ಕ್ರಸಂ | ಯೋಜನೆಗಳು | ಉದ್ದೇಶಗಳು |
|---|---|---|
| ೧ | ನವಪ್ರಭಾ ಗ್ರಾಮೀಣ ವಸತಿ ಶಾಲೆ, ತುಕ್ಕಾನಟ್ಟಿ | ೧ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಔಪಚಾರಿಕ ಶಿಕ್ಷಣ ನೀಡುವದು. |
| ೨ | ಸಮಾಜ ಕಾರ್ಯ ಪದವಿ ಕಾಲೇಜು, ತುಕ್ಕಾನಟ್ಟಿ | ಸಮಾಜ ಕಾರ್ಯದಲ್ಲಿ ಶಿಕ್ಷಣ ನೀಡುವದು. |
| ೩ | ಸಮಾಜ ಕಾರ್ಯದಲ್ಲಿ ಸ್ನಾತಕೋತ್ತರ ಪದವಿ | ೨೦ ವಿದ್ಯಾರ್ಥಿಗಳ ಪ್ರವೇಶಾತಿಯ ಕೋರ್ಸ್. |
| ೪ | ಕೃಷಿ ವಿಜ್ಞಾನ ಕೇಂದ್ರ (ಕೃಷಿ ಸಚಿವಾಲಯ ಕೇಂದ್ರ ಸರ್ಕಾರ, ನವದೆಹಲಿ) | ರೈತರಿಗೆ ಅನೌಪಚಾರಿಕ ಶಿಕ್ಷಣ |
| ೫ | ಔಷಧಿ ಸಸ್ಯಗಳ ಸಂರಕ್ಷಣಾ ಯೋಜನೆ | ಅಳಿವಿನಂಚಿನಲ್ಲಿರುವ ಔಷಧಿ ಸಸ್ಯಗಳ ರಕ್ಷಣೆ ಮತ್ತು ಸಂವರ್ಧನೆ. |
| ೬ | ವಿಕಲಚೇತನರ ಸಮಗ್ರ ಶಿಕ್ಷಣ ಯೋಜನೆ | ಅಂಗವಿಕಲ ಮಕ್ಕಳಿಗೆ ಸಮಾನ ಅವಕಾಶಗಳನ್ನು ಪೂರೈಸುವದು. |
| ೭ | ಕಿವುಡು ಮಕ್ಕಳ ವಿಶೇಷ ಶಾಲೆ, ಗೋಕಾಕ | ಕಿವುಡು ಮಕ್ಕಳಿಗೆ ಉಚಿತ ಶಿಕ್ಷಣ ನೀಡುವುದು |

| | | |
|---|---|---|
| ೮ | ಎಚ್.ಐ.ವ್ಹಿ ಓ ಎಸ್, ನೆದರ್‌ಲ್ಯಾಂಡ್, ಎಫ್.ಡಿ.ಎನ್.ಎಫ್ ಆ್ಯಂಡ್ ಗವರ್ನಮೆಂಟ್ ಆಫ್ ಕರ್ನಾಟಕ ಯೋಜನೆ | ಎಚ್.ಐ.ವ್ಹಿ/ಏಡ್ಸ್ ಕುರಿತು ಲೈಂಗಿಕ ಕಾರ್ಯ ಕರ್ತೆಯರಿಗೆ ಮಾಹಿತಿ ನೀಡುವುದು. |
| ೯ | ಬಿಲ್ ಆ್ಯಂಡ್ ಮೆಲಿಂಡಾಗೇಟ್ ಫೌಂಡೇಶನ್ ಸಹಯೋಗ ಯೋಜನೆ | ಎಂಎಸ್‌ಎಂ ಮುಂತಾದ ಹೆಚ್ಚಿನ ಅಪಾಯದ ಗುಂಪಿನ ಜನರೊಂದಿಗೆ ಹಸ್ತಕ್ಷೇಪ ಮಾಡಿ ಎಚ್.ಐ.ವ್ಹಿ/ಏಡ್ಸ್ ಹಾಗೂ ಜಾಗೃತಿ ಮೂಡಿಸುವುದು. |
| ೧೦ | ಐ.ಸಿ.ಎಚ್.ಎಪಿ ಇಂಡಿಯಾ ಸಹಯೋಗದ ಯೋಜನೆ | ಬದಾಮಿ ಮತ್ತು ಮುಧೋಳ ತಾಲೂಕಿನ ೨೩೬ ಗ್ರಾಮಗಳಲ್ಲಿ ಎಚ್.ಐ.ವ್ಹಿ/ಏಡ್ಸ್ ಕುರಿತು ಜಾಗೃತಿ ಮೂಡಿಸುವುದು. |
| ೧೧ | ಕೆ.ಎಸ್.ಎ.ಪಿ.ಎಸ್ ಆ್ಯಂಡ್ ನ್ಯಾಕೋ ಅನುದಾನದ ಯೋಜನೆ | ಜಿಲ್ಲಾ ಆಸ್ಪತ್ರೆ ಮತ್ತು ವೈದ್ಯಕೀಯ ಕಾಲೇಜುಗಳಲ್ಲಿ ಸ್ವಯಂ ಸಲಹಾ ಮತ್ತು ಪರೀಕ್ಷಾ ಕೇಂದ್ರ ಸ್ಥಾಪಿಸುವದು ಮತ್ತು ತಾಯಿಯಿಂದ ಮಕ್ಕಳಿಗೆ ವರ್ಗಾವಣೆ ತಡೆಯುವ ಕೇಂದ್ರ ಸ್ಥಾಪನೆ. |
| ೧೨ | ಕೆ.ಎಸ್.ಎ.ಪಿ.ಎಸ್ ಯೋಜನೆ | ರಾಷ್ಟ್ರೀಯ ಹೆದ್ದಾರಿ ೭ರ ಉದ್ದಕ್ಕೂ ೭೩ಕಿ.ಮೀ ಪ್ರದೇಶದಲ್ಲಿ ಪ್ರಯಾಣಿಸುವ ಲಾರಿ ಚಾಲಕರೊಂದಿಗೆ ಸಂವಾದಿಸಿ ಎಚ್.ಐ.ವ್ಹಿ/ ಏಡ್ಸ್ ಕುರಿತು ಜ್ಞಾನ ನೀಡುವದು. |
| ೧೩ | ಬಿಜಾಪೂರ ಜಿಲ್ಲೆಯಲ್ಲಿ ಸಾವಯವ ಕೃಷಿ ಅಭಿವೃದ್ಧಿ ಯೋಜನೆ | ಸಾವಯವ ಕೃಷಿ ಚಟುವಟಿಕೆಗಳ ಸಂವರ್ಧನೆ. |
| ೧೪ | ಗ್ರಾಮ ಪಂಚಾಯತ ಸದಸ್ಯರಿಗೆ ತರಬೇತುಗೊಳಿಸುವ ಯೋಜನೆ | ಅಭಿವೃದ್ಧಿ ತರಬೇತಿ. |
| ೧೫ | ಡಿಪಾರ್ಟಮೆಂಟ್ ಆಫ್ ಸೈಯನ್ಸ್ ಆ್ಯಂಡ್ ಟೆಕ್ನಾಲಾಜಿ, ಭಾರತ ಸರ್ಕಾರದ ಸಹಯೋಗದ ಯೋಜನೆ | ಔಷಧೀಯ ಸಸ್ಯಗಳನ್ನು ಬೆಳೆಸುವದು. |
| ೧೬ | ಕಮ್ಯುನಿಟಿ ಲರ್ನಿಂಗ್ ಸೆಂಟರ್ ಪ್ರೊಜೆಕ್ಟ್, (ಎಸ್.ಎಫ್.ಯು) ಜಪಾನ ಯೋಜನೆ | ಸಾಕ್ಷರತೆ ಹೆಚ್ಚಿಸುವದು. |
| ೧೭ | ಇತರೆ ಯೋಜನೆಗಳು | ಸಂಪೂರ್ಣ ಸ್ವಚ್ಛತೆ ಕಾರ್ಯಾಕ್ರಮಗಳಲ್ಲಿ ಭಾಗವಹಿಸುವುದು, ಸಮುದಾಯ ಆಧಾರಿತ ಸಂಘಟನೆ ಮತ್ತು ಉನ್ನತ ಮಂಡಳಿಗಳನ್ನು ಸ್ಥಾಪಿಸುವದು. |

*ಕೋಷ್ಟಕ – ೪.೫.೨ : ಬರ್ಡ್ಸ್‌ನ ಕ್ಷೇತ್ರಾಧಾರಿತ ಯೋಜನೆಗಳು :*

| ಕ್ರ.ಸಂ | ಯೋಜನೆ | ಉದ್ದೇಶ |
|---|---|---|
| ೧ | ಎಚ್.ಐ.ವ್ಹಿ – ಓಎಸ್,ಎಫ್‌ಡಿಎನ್‌ಎಮ್ ಕರ್ನಾಟಕ ಸರ್ಕಾರ ಸಹಯೋಗ ಯೋಜನೆ | ಲೈಂಗಿಕ ಕಾರ್ಯದ ಮಹಿಳೆಯೊಂದಿಗೆ ಎಚ್.ಐ.ವಿ/ಏಡ್ಸ್ ಕುರಿತು ಹಸ್ತಕ್ಷೇಪ ಮಾಡಿ ಚರ್ಚಿಸುವ ರಾಜ್ಯಮಟ್ಟದ ವ್ಯಾಪ್ತಿ. |
| ೨ | ಕೆ.ಎಸ್.ಎ.ಐ.ಎಸ್ ಸಹಯೋಗ ಯೋಜನೆ | ಪುಣೆ–ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ೪ರ ಉದ್ದಕ್ಕೂ ಉದ್ದೇಶಿತ ಲಾರಿ ಚಾಲಕರೊಂದಿಗೆ ಹಸ್ತಕ್ಷೇಪ ಮಾಡುವದು. |
| ೩ | ಐ.ಸಿ.ಎಚ್.ಎ.ಪಿ ಸಹಯೋಗ ಯೋಜನೆ | ಬಾಗಲಕೋಟ ಜಿಲ್ಲೆಯ ಮುಧೋಳ ತಾಲ್ಲೂಕಿನ ೮೧ ಗ್ರಾಮಗಳ ಜನತೆಯಲ್ಲಿ ಎಚ್.ಐ.ವ್ಹಿ/ಏಡ್ಸ್ ಜಾಗೃತಿ ಶಿಕ್ಷಣ ನೀಡುವದು. |
| ೪ | ನ್ಯೂ ಕಮ್ಯುನಿಟಿ ಡೆವ್ಹಲೆಪಮೆಂಟ್ ಪ್ರೊಜೆಕ್ಟ ನ್ಯಾಶನಲ್ ಫೆಡರೇಶನ್–ಯುನೆಸ್ಕೋ ಅಸೋಶಿಯೇಶನ್ಸ್ ಜಪಾನ ಯೋಜನೆ | ಸಮುದಾಯ ಕಲಿಕಾ ಕೇಂದ್ರಗಳನ್ನು ಗೋಕಾಕದ ೪೫ ಗ್ರಾಮಗಳಲ್ಲಿ ನಡೆಸುವದು. |
| ೫ | ಸಿ.ಎಸ್.ಡಬ್ಲ್ಯು.ಬಿ ಸಹಯೋಗ ಯೋಜನೆ | ಕಾರ್ಯನಿರತ ಮಹಿಳೆಯರ ಮಕ್ಕಳಿಗೆ ತೊಟ್ಟಿಲು ಮನೆ ನಡೆಸುವದು. |
| ೬ | ಸ್ವಸಹಾಯ ಗುಂಪು ಯೋಜನೆ | ಮಹಿಳೆಯರ ಮತ್ತು ಪುರುಷರ ಸಮ್ಮಿಶ್ರ ಸ್ವ–ಸಹಾಯ ಗುಂಪುಗಳನ್ನು ಹುಟ್ಟುಹಾಕುವದು. |
| ೭ | ಕೆ.ಎಸ್.ಎ.ಎಸ್ ಸಹಯೋಗದ ಯೋಜನೆ | ರಾಜ್ಯ ಮಟ್ಟದ ಸಮಾಲೋಚನಾ ಸೇವೆಗಳನ್ನು ೨೩ ವಿಸಿಟಿಜಿ/೪೯ ಪಿಪಿಟಿಸಿಟಿ ಯೊಂದಿಗೆ ಜಿಲ್ಲಾ ಆಸ್ಪತ್ರೆ ಮತ್ತು ವೈದ್ಯಕೀಯ ಕಾಲೇಜುಗಳಲ್ಲಿ ನೀಡುವದು. |
| ೮ | ಐಸಿಎಚ್‌ಎಪಿ ಸಹಯೋಗದ ಯೋಜನೆ | ಮುಧೋಳ ಮತ್ತು ಜಮಖಂಡಿ ತಾಲೂಕಿನ ಆಸ್ಪತ್ರೆಗಳಲ್ಲಿ ಹೆಚ್.ಆಯ್.ವ್ಹಿ ಪೂರ್ವ ಮತ್ತು ನಂತರದ ಪರೀಕ್ಷೆ ಸಮಾಲೋಚನ ಸೇವೆ ನೀಡುವ ಯೋಜನೆ. |
| ೯ | ಎಸಿಎಆರ್‌ಸಿಎಚ್ ಹಂಗರ್ ಪ್ರೊಜೆಕ್ಟ್ ಆ್ಯಂಡ್ ಎಸ್.ಐ.ಆರ್.ಡಿ ಯೋಜನೆ | ಚಿಕ್ಕೋಡಿ ಮತ್ತು ಗೋಕಾಕ ತಾಲೂಕಿನ ಗ್ರಾಮ ಪಂಚಾಯ್ತಿ ಸದಸ್ಯರಿಗೆ ತರಬೇತಿ ನೀಡುವದು. |
| ೧೦ | ತರಬೇತಿ ಯೋಜನೆ | ಸ್ವಸಹಾಯ ಗುಂಪಿನ ಸದಸ್ಯರಿಗೆ ಮತ್ತು ಹರೆಯದ ಹೆಣ್ಣುಮಕ್ಕಳಿಗೆ ಸಾಕ್ಷರತೆ ಮತ್ತು ಕೌಶಲ್ಯ ತರಬೇತಿ ನೀಡುವದು. |
| ೧೧ | ಅಲ್ಪಾವಧಿ ಸಾಲ ಯೋಜನೆ | ಸ್ವ–ಸಹಾಯ ಗುಂಪುಗಳು ಸ್ವಾವಲಂಬಿಗಳಾಗಲು ಅಲ್ಪಾವಧಿ ಸಾಲದ ವ್ಯವಸ್ಥೆ ಮಾಡುವದು. |

ಈ ಎಲ್ಲ ಯೋಜನೆಗಳನ್ನು ಇದು ಈಗಾಗಲೇ ಪೂರ್ತಿಗೊಳಿಸಿದೆ.

**ಬರ್ಡ್ಸ್‌ನ ಶಾಸನೀಯ ಸ್ಥಾನ–ಮಾನ :**

ಬರ್ಡ್ಸ್ ಸಂಸ್ಥೆಯು ೧೯೮೮ರಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ೧೯೬೦ರ ಅಡಿಯಲ್ಲಿ ನೋಂದಣಿಯಾಗಿದೆ. ಜೊತೆಗೆ ೧೯೯೪ರಲ್ಲಿ ವಿದೇಶಿ ವಂತಿಗೆ ನಿಯಂತ್ರಣಾ ಕಾಯ್ದೆ ೧೯೭೬ರ ಅಡಿಯಲ್ಲಿಯೂ ಸಹ ನೋಂದಣಿಹೊಂದಿದೆ. ೧೯೬೧ರ ಆದಾಯ ಕರ ವಿನಾಯ್ತಿಯ ಕಾಯ್ದೆಯ ಲಾಭವನ್ನು ಹೊಂದಿದೆ.

**ಬರ್ಡ್ಸ್ ಸಹಭಾಗಿತ್ವದ ಯೋಜನೆಗಳು :**

**೧. ಜನತೆಯ ಸಂಘಟನೆಗಳ ವೇದಿಕೆ :**

ಇದೊಂದು 'ಬರ್ಡ್ಸ್'ನ ಉನ್ನತ ಮಟ್ಟದ ಸಂಸ್ಥೆಯಾಗಿದ್ದು, 'ಬರ್ಡ್ಸ್' ಹುಟ್ಟು ಹಾಕಿದ ಎಲ್ಲ ಸಂಸ್ಥೆಗಳು ಇದರ ಸದಸ್ಯರಾಗಿರುತ್ತಾರೆ. ಇದು ಬರ್ಡ್ಸ್ ಸಂಸ್ಥೆಗಳ ಮಹಾಮಂಡಳವಿದ್ದಂತೆ. ಇದು ಸ್ಥಳೀಯ ಸಮುದಾಯ ಮಟ್ಟದ ಸಂಸ್ಥೆಗಳಿಗೆ ತಾಂತ್ರಿಕ ಹಾಗೂ ಹಣಕಾಸು ನಿರ್ವಹಣೆಯ ಸೇವೆಗಳನ್ನು ನೀಡುತ್ತದೆ.

**೨. ಲೈಂಗಿಕ ಕಾರ್ಯಕರ್ತೆಯರ ಸಮಷ್ಠಿಯ ಸಹಭಾಗಿನಿ ಮಹಾಮಂಡಳ :**

'ಬರ್ಡ್ಸ್' ಸಂಸ್ಥೆಯು ಎಚ್.ಐ.ವಿ ಏಡ್ಸ್ ತಡೆಗಟ್ಟುವ ಯೋಜನೆಗಳ ಅಡಿಯಲ್ಲಿ ಲೈಂಗಿಕ ಕಾರ್ಯಕರ್ತೆಯ ಮಹಿಳೆಲರೊಂದಿಗೆ ನೇರ ಸಂಪರ್ಕ ಸಾಧಿಸಿದೆ. ಜಾಗೃತಿ ಕಾರ್ಯಗಳನ್ನು ಹಮ್ಮಿಕೊಳ್ಳುವದರ ಮೂಲಕ ಜಿಲ್ಲಾ ಮಟ್ಟದಲ್ಲಿ ಅವರೆಲ್ಲರ ಸಂಘಟನೆಗೆ ಶ್ರಮಿಸುತ್ತಿದೆ. ಇವೆಲ್ಲಾ ಅದರ ವಿವಿಧ ಸಮುದಾಯಗಳನ್ನು ಸೇರಿಸಿ ಮಹಾಮಂಡಳವನ್ನು ರಚಿಸಿ 'ಸಹಭಾಗಿನಿ'ಯೆಂದು ನಾಮಕರಣಗೊಳಿಸಿದೆ.

**೩. ಸ್ವ–ಸಹಾಯ ಗುಂಪುಗಳ ಮಹಾಮಂಡಳ :**

'ಬರ್ಡ್ಸ್'ನ ಯೋಜನೆಗಳು ಸ್ವ–ಸಹಾಯ ಗುಂಪುಗಳನ್ನು ಹುಟ್ಟು ಹಾಕುವ ಗುರಿಯನ್ನು ಹೊಂದಿದ್ದು, ಇದುವರೆಗೆ ಒಟ್ಟು ೨೩೦ ಸ್ವ–ಸಹಾಯ ಗುಂಪುಗಳನ್ನು ಸ್ಥಾಪಿಸಿದೆ. ಇವುಗಳಲ್ಲಿ ಕೆಲವು ಗುಂಪುಗಳು ಐದು ವರ್ಷಗಳ ಹಿಂದೆಯೇ ಸ್ಥಾಪನೆಗೊಂಡಿವೆ. ೧೯೯೫ರಿಂದಲೇ ಕಾರ್ಯಗೈಯ್ಯುತ್ತಿವೆ. ಈ ಎಲ್ಲ ಗುಂಪುಗಳನ್ನು ಸೇರಿಸಿ ಮಹಾಮಂಡಳ ರಚಿಸಿದೆ. ಅದು ಎಲ್ಲ ಸ್ವ–ಸಹಾಯ ಗುಂಪುಗಳ ಸಂಯೋಜನೆಯಾಗಿ ಕಾರ್ಯಮಾಡುತ್ತವೆ.

**೪. ಕರ್ನಾಟಕ ಎಚ್.ಐ.ವಿ/ಏಡ್ಸ್ ಸಮಾಲೋಚಕರ ಸಂಸ್ಥೆ :**

'ಬರ್ಡ್ಸ್' ಸಂಸ್ಥೆಯು ಜಿಲ್ಲಾ ಆಸ್ಪತ್ರೆಗಳಲ್ಲಿ ಏಡ್ಸ್ ಪೂರ್ವ ಮತ್ತು ನಂತರ ಪರೀಕ್ಷಾ ಸಮಾಲೋಚನಾ ಸೇವೆಯನ್ನು ನೀಡುವದಕ್ಕಾಗಿ ಸಮಾಲೋಚಕರನ್ನು ನೇಮಿಸಿದೆ. ಈ

ಸಮಾಲೋಚಕರು ಹಲವು ಜಿಲ್ಲಾ ಆಸ್ಪತ್ರೆಗಳಲ್ಲಿ ೧೯೯೮ರಿಂದ ಕಾರ್ಯಗೈಯ್ಯುತ್ತಿದ್ದಾರೆ. ಸಧ್ಯ ವಿಸಿಟಿಸಿ, ಪಿಪಿಟಿಸಿಟಿ ಯೋಜನೆಗಳಡಿಯಲ್ಲಿ ಒಟ್ಟು ೮೬ ಸಮಾಲೋಚಕರು ಕಾರ್ಯ ಮಾಡುತ್ತಿದ್ದಾರೆ. ಅವರೆಲ್ಲ ಸೇರಿ ಮಹಾಮಂಡಳ ರಚಿಸಿರುವರು, ಅದರ ಮುಖ್ಯ ಕಚೇರಿಯನ್ನು ಗೋಕಾಕದಲ್ಲಿದೆ.

೫. **ಟ್ರಾಪ್ ಫೌಂಡೇಶನ್ :**

ಗ್ರಾಮಗಳಲ್ಲಿಯ ರೈತರು, ಯುವಕರು, ಮಹಿಳೆಯರಲ್ಲಿ ಜಾಗೃತಿ ಮೂಡಿಸುವ ದೃಷ್ಟಿಯಿಂದ 'ಬರ್ಡ್ಸ್‌ನ' ಅಂಗ ಸಂಸ್ಥೆಯಾಗಿ ಟ್ರಾಪ್ ಫೌಂಡೇಶನ್ ಸ್ಥಾಪನೆಗೊಂಡಿದೆ. ಸಾವಯವ ಕೃಷಿ, ಮಳೆನೀರು ಕೊಯ್ಲು, ಯುವ ಜನತೆಯ ಸವಾಲುಗಳು, ಮುಂತಾದ ವಿಷಯಗಳ ಕುರಿತು ಕಾರ್ಯಕ್ರಮ ಹಮ್ಮಿಕೊಂಡಿದೆ. ಈ ಸಂಸ್ಥೆಯು ಸಭೆ, ಕಾರ್ಯಗಾರ, ತರಬೇತಿ ಶಿಬಿರ ಮತ್ತು ಇತರ ಕಾರ್ಯಕ್ರಮಗಳನ್ನು ನಡೆಯಿಸಿ, ತನ್ನ ಉದ್ದೇಶ ಸಾಧಿಸುತ್ತಿದೆ.

೬. **ಯುನೆಸ್ಕೋ ಕ್ಲಬ್, ನಾಗನೂರ :**

'ಬರ್ಡ್ಸ್' ಸ್ಥಾಪನೆಗಿಂತ ಮುಂಚೆಯೇ ಇದು ಪ್ರಾರಂಭವಾಗಿತ್ತು. ಈಗ ಅದರ ಅಂಗ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ. ಶಿಕ್ಷಣ, ಸಾಕ್ಷರತೆ, ಆರೋಗ್ಯ ಮತ್ತು ಇತರ ಕ್ಷೇತ್ರಗಳಿಗೆ ವಿಸ್ತರಿಸಿಕೊಂಡಿದೆ. ಅಂತರ್‌ರಾಷ್ಟ್ರೀಯ ಸಂಘಟನೆಗಳ ಸಹಯೋಗದೊಂದಿಗೆ ವಿವಿಧ ಶೈಕ್ಷಣಿಕ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತದೆ. ಮತ್ತು ಈ ಕೆಳಗಿನ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿದೆ.

೧. ಸಹಭಾಗಿನಿ ಸಮುದಾಯ ಕಾರ್ಯಕ್ರಮಗಳು.

೨. ರಾಜ್ಯ ಮತ್ತು ಕೇಂದ್ರ ಸರ್ಕಾರದ ಕಾರ್ಯಕ್ರಮಗಳು

೩. ಎಚ್.ಐ.ವಿ – ಓ.ಎಸ್ ನೆದರ್‌ಲ್ಯಾಂಡ್

೪. ಎನ್.ಎಫ್.ಯು.ಎ ಜಪಾನ

೫. ಎಫ್.ಆರ್.ಎಲ್.ಎಚ್.ಡಿ – ಬೆಂಗಳೂರು

೬. ಎಸ್.ಇ.ಎ.ಆರ್.ಸಿ.ಎಚ್ – ಬೆಂಗಳೂರು

೭. ಹಂಗರ್ ಫ್ರೀ ಯೋಜನೆ

೮. ಫ್ರೆಜ್–ದಿ–ನೋಸ್ ಫ್ರೆಝ್, ಜರ್ಮನಿ – ಐ.ಸಿ.ಎಚ್.ಎ.ಪಿ ಬೆಂಗಳೂರು

ಬರ್ಡ್ಸ್ ಸಂಸ್ಥೆಯು ಹಳೆಯ ಯೋಜನೆಗಳೊಂದಿಗೆ ಈ ಕೆಳಗಿನ ಹೊಸ ಯೋಜನೆಗಳನ್ನು ಕಾರ್ಯಗತಗೊಳಿಸುತ್ತಿದ್ದು ಅವುಗಳೆಂದರೆ–

೧. ಕೆ.ಎಚ್.ಪಿ.ಟಿ ಸಹಯೋಗದಿಂದ ಹೆಚ್ಚಿನ ಅಪಾಯ ಇರುವ ಜನತೆಯೊಂದಿಗೆ ಎಚ್.ಐ.ವಿ ಏಡ್ಸ್ ಕುರಿತು ಚರ್ಚೆ.

೨. ಎಚ್‌ಇಆರ್‌ಡಿ ಸೊಸಾಯಿಟಿ ಮಹಾರಾಷ್ಟದ ಸಂಯೋಗದಿಂದ – ಶಕ್ತಿವರ್ಧಕ ತರಬೇತಿ ಆಯೋಜನಗೊಳಿಸುವದು.

೩. ಸಮಸ್ತ ಯೋಜನೆ, ಯು.ಎಸ್.ಎ.ಐ.ಡಿ ಸಹಯೋಗದಿಂದ – ಬೆಳಗಾವಿ ಜಿಲ್ಲೆಯ ೨೦೦ ಗ್ರಾಮಗಳಲ್ಲಿ ಗ್ರಾಮೀಣ ಎಚ್.ಐ.ವ್ಹಿ ಕಾಳಜಿ ಮತ್ತು ಬೆಂಬಲ ಯೋಜನೆ.

೪. 'ಕಾರ್ರಿಡಾರ್ಸ್' ಸಹಯೋಗದೊಂದಿಗೆ – ಬೆಳಗಾವಿ ಜಿಲ್ಲೆಯ ೮ ತಾಲ್ಲೂಕಿನ ೪೬೨ ಸಮುದಾಯಗಳಲ್ಲಿಯ ಲೈಂಗಿಕ ಕಾರ್ಯಕರ್ತೆಯರೊಂದಿಗೆ ಚರ್ಚೆ–ಜಾಗೃತಿ.

೫. ರೀಚ್ ಇಂಡಿಯಾ ಸಹಯೋಗದ ಶಿಕ್ಷಣ ವಾಹಿನಿ – ೫೦ ಗ್ರಾಮಗಳಲ್ಲಿ ಸಾಕ್ಷರತಾ ಅಭಿವೃದ್ಧಿ ಯೋಜನೆ.

**'ಬರ್ಡ್ಸ್'ನ ಸಂಘಟನೆ ರೂಪ :**

**ಆಡಳಿತ ವರ್ಗ**
↓
ಅಧ್ಯಕ್ಷರು
↓
ಕಾರ್ಯಕಾರಿ ನಿರ್ದೇಶಕರು
↓
ಕೋಶಾಧಿಕಾರಿಗಳು
↓
ನಿರ್ದೇಶಕರು

ಕಾರ್ಯರೂಪದ ಅಧಿಕಾರಿಗಳು
↓
ಕಾರ್ಯಕಾರಿ ಅಧಿಕಾರಿ
↓
ಯೋಜನಾ ಮುಖ್ಯಸ್ಥ
↓
ಬೆಂಬಲದ ಸಿಬ್ಬಂಧಿ
↓
ಕೆಳಮಟ್ಟದ ಕಾರ್ಯಕರ್ತರು/
ಸಹಾಯಕ ಸಿಬ್ಬಂದಿ.

*ಕೋಷ್ಟಕ – ೪.೫.೩ : ಸಾಧನೆಯ ಪಕ್ಷಿನೋಟ*

| ಕ್ರ.ಸಂ | ಯೋಜನೆಯ ಹೆಸರು | ಸಾಧನೆ |
|---|---|---|
| ೧ | ನವಪ್ರಭಾ ರೂರಲ್ ರೆಸಿಡೆನ್ಸಿಯಲ್ ಸ್ಕೂಲ್, ತುಕ್ಕಾನಟ್ಟಿ | ೫೮ ವಿದ್ಯಾಥಿಗಳು ತಮ್ಮ ಹೈಸ್ಕೂಲ ವಿದ್ಯಾಭ್ಯಾಸವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿದ್ದಾರೆ. |
| ೨ | ಬಿ.ಎಸ್.ಡಬ್ಲು ಕಾಲೇಜ ತುಕ್ಕಾನಟ್ಟಿ | ೫೦ ವಿದ್ಯಾರ್ಥಿಗಳು ಪದವಿ ಕೋರ್ಸ್‌ವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿ, ವಿವಿಧ 'ಸರ್ಕಾರೇತರ ಸಂಸ್ಥೆ'ಗಳಲ್ಲಿ ನೇಮಕವಾಗಿದ್ದಾರೆ. |
| ೩ | ಎಂ.ಎಸ್.ಡಬ್ಲು ಸ್ನಾತಕೋತ್ತರ ಪದವಿ ಕಾಲೇಜು, ತುಕ್ಕಾನಟ್ಟಿ | ಪ್ರಸಕ್ತ ವರ್ಷದಲ್ಲಿ ೨೦ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗಿದೆ. |
| ೪ | ಕೃಷಿ ವಿಜ್ಞಾನ ಕೇಂದ್ರ, ತುಕ್ಕಾನಟ್ಟಿ | ೧. ಕೃಷಿಕ ಮಹಿಳೆಯರಿಗೆ, ಕೃಷಿ ಇಲಾಖೆಯ ಸಿಬ್ಬಂದಿಗೆ ಹಲವಾರು ತರಬೇತಿಗಳು.<br>೨. ಎಣ್ಣೆ ಬೀಜ ಮತ್ತು ಕಾಳುಗಳ ಕುರಿತು ಹಲವಾರು ಪ್ರಾತ್ಯಕ್ಷಿಕೆಗಳು.<br>೩. ಮೀನುಗಾರಿಕೆ, ಹುಲ್ಲು ಪ್ರದೇಶ ಅಭಿವೃದ್ಧಿ, ಸಾವಯವ ಕೃಷಿ, ಮಣ್ಣು ಪರೀಕ್ಷೆ,, ಪಶುಸಂಗೋಪನೆ, ಸಂಗ್ರಹ ಮುಂತಾದವುಗಳ ಹಲವಾರು ಯೋಜನೆಗಳನ್ನು ರೈತ ಸಮುದಾಯಕ್ಕೆ ಆಯೋಜಿಸಲಾಗಿದೆ. |
| ೫ | ಔಷಧಿ ಸಸಿಗಳ ಸಂರಕ್ಷಣೆ | ೧. ಗೋಕಾಕ ತಾಲೂಕಿನ ೧೦ ಗ್ರಾಮಗಳ ಜನರಿಗೆ ವಿವಿಧ ಔಷಧಿ ಗುಣದ ಸಸಿಗಳನ್ನು ಹಂಚಲಾಗಿದೆ.<br>೨. ಔಷಧಿ ಸಸ್ಯಗಳ ಅಧ್ಯಯನ ಮತ್ತು ಅವುಗಳ ಪ್ರಯೋಜನ ಕುರಿತು ಎಚ್.ಎಸ್.ಆರ್.ಡಿ ಕೇಂದ್ರ ನಡೆಸುವದು. |
| ೬ | ಅಂಗವಿಕಲ ಮಕ್ಕಳ ಸಮಗ್ರ ಶಿಕ್ಷಣ ವಿಭಾಗ. | ವಿವಿಧ ತರಹದ ಅಂಗವೈಕಲ್ಯ ಹೊಂದಿದ ೨೮ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ ಮತ್ತು ವಸತಿ ವ್ಯವಸ್ಥೆ. |
| ೭ | ಕಿವುಡರಿಗಾಗಿ ವಿಶೇಷ ಶಾಲೆ | ೬೪ ಕಿವುಡು ಮಕ್ಕಳು ತಮ್ಮ ಪ್ರಾಥಮಿಕ ಶಿಕ್ಷಣ ಪೂರ್ತಿಗೊಳಿಸಲು ಸಹಾಯ. |

| | | |
|---|---|---|
| ೮ | ಎಚ್.ಐ.ವ್ಹಿ ಮಹಿಳೆಯರು ಹಾಗೂ ಲೈಂಗಿಕ ಕಾರ್ಯಕರ್ತರೊಂದಿಗೆ ಸಮಾಲೋಚನೆ | ರಾಜ್ಯಾದ್ಯಾಂತ ೧೫೦೦೦ ಕಾರ್ಯಕರ್ತೆಯರೊಂದಿಗೆ ಸಮಾಲೋಚನೆ, ಎಚ್.ಐ.ವಿ ಯಿಂದ ಅವರು ರಕ್ಷಿಸಿಕೊಳ್ಳುವ ಯೋಜನೆಗಳ ಕಾರ್ಯಗತಗೊಳಿಸುವುದು. |
| ೯ | 'ಪ್ರೈಡ್' ಸಾಕ್ಷರತಾ ಯೋಜನೆ | ೧. ಗೋಕಾಕ ತಾಲೂಕಿನ ೪೫ ಗ್ರಾಮಗಳಲ್ಲಿ ಸಾಕ್ಷರತಾ ವರ್ಗಗಳು ಮತ್ತು ೨೭೦೦ ಮಂದಗತಿ ಕಲಿಕೆಯ ಮಕ್ಕಳಿಗೆ ಮತ್ತು ಶಾಲೆ ಬಿಡಬಹುದಾದ ವಿದ್ಯಾರ್ಥಿಗಳಿಗೆ ಸಹಾಯ<br>೨. ಗ್ರಾಮಗಳ ೪೫ ಸಮಿತಿಗಳ ಶಕ್ತಿವರ್ಧನೆ ಯೋಜನೆ ಮುಂದುವರಿಕೆ.<br>೩. ೩೨ ಗ್ರಾಮಗಳಲ್ಲಿ ಸಮುದಾಯ ಕಲಿಕಾ ಕೇಂದ್ರಗಳ ಸ್ಥಾಪನೆ. |
| ೧೦ | 'ಸಮಸ್ತ' ಯೋಜನೆ, ಗೋಕಾಕ | ಸಮುದಾಯದ ಸಾಮಾನ್ಯ ಜನತೆಯಲ್ಲಿ ಎಚ್.ಐ.ವಿ ಅಪಾಯದ ೨೦೦ ಗ್ರಾಮಗಳನ್ನು ಗುರುತಿಸಿದ್ದು. |
| ೧೧ | ಎಂ.ಎಸ್.ಎಂ ಹಸ್ತಕ್ಷೇಪ | ೧. ಬೆಳಗಾವಿ ಜಿಲ್ಲೆಯ ೩ ತಾಲೂಕುಗಳಲ್ಲಿ ೧೨೦೦ ಎಂ.ಎಸ್.ಎಂ ಗಳನ್ನು ಗುರುತಿಸಿ ಎಚ್.ಐ.ವ್ಹಿ ಶಿಕ್ಷಣಕ್ಕಾಗಿ ಕೇಂದ್ರ ಸ್ಥಾಪನೆ. |
| ೧೨ | ಶಕ್ತಿ ಸಂಘ (ಸಮಾನ ವಯಸ್ಕರಲ್ಲಿ ಶಿಕ್ಷಣ,ಬರ್ಡ್ಸ್ ಕಾರ್‍ರಿಡಾರ್ ಮೂಲಕ) | ಬೆಳಗಾವಿ ಜಿಲ್ಲೆಯ ೧೮೦೦ ಲೈಂಗಿಕ ಕಾರ್ಯಕರ್ತೆಯರ ಜತೆಗೆ ಸಮಾಲೋಚನೆ. |
| ೧೩ | ಕೆ.ಎಚ್.ಪಿ.ಟಿ ಅರ್ಬನ್ ಹಸ್ತಕ್ಷೇಪ | ೧. ಹೆಚ್ಚಿನ ಅಪಾಯದ ಗುಂಪುಗಳನ್ನು ತಲುಪಲು ಬೆಳಗಾವಿ ಜಿಲ್ಲೆಯ ೧೬ ಪಟ್ಟಣಗಳಲ್ಲಿ ಕಾರ್ಯಕ್ರಮ ನಡೆಸಿದ್ದು.<br>೨. ನಿರಂತರ ಶಿಬಿರ ಮತ್ತು ಆಸ್ಪತ್ರೆಗಳ ಮೂಲಕ ವೈದ್ಯಕೀಯ ಸೇವೆ. |
| ೧೪ | 'ಸಮಸ್ತ' ಯೋಜನೆ, ಮುಧೋಳ | ಎಚ್.ಐ.ವಿ ತಡೆಯುವುದಕ್ಕೆ ಮುಧೋಳ ತಾಲೂಕಿನ ೫೨ ಗ್ರಾಮಗಳಲ್ಲಿ ಸಮುದಾಯದ ಸಾಮಾನ್ಯ ಸದಸ್ಯರೊಂದಿಗೆ ಕಾರ್ಯಮಾಡಿದ್ದು. |

| | | |
|---|---|---|
| ೧೫ | ಆರ್.ಇ.ಎ.ಸಿ.ಎಚ್ (ರೀಚ್) ಇಂಡಿಯಾ ಯೋಜನೆ, ಬದಾಮಿ | ೧. ೧೭೫೨ ಶಾಲೆ ಬಿಟ್ಟ ಮಕ್ಕಳನ್ನು ಶಾಲೆಗೆ ಸೇರಿಸಿದ್ದು.<br>೨. ಕಲಿಕಾ ಕೇಂದ್ರ ಪ್ರೇರಣಾ ಶಿಬಿರ ಮತ್ತು ಎಸ್.ಓ.ಎ.ಸಿ ಸಭೆಗಳ ಮೂಲಕ ನಿರಂತರ ಸಂಪರ್ಕ ಹೊಂದುವದು.<br>೩. ೧೭೫೨ ವಿದ್ಯಾರ್ಥಿಗಳಲ್ಲಿ ೧೦೮೦ ವಿದ್ಯಾರ್ಥಿಗಳನ್ನು ಔಪಚಾರಿಕ ಶಿಕ್ಷಣದಲ್ಲಿ ಉಳಿಸಿಕೊಂಡಿದ್ದು. |
| ೧೬ | ಎ.ವಿ.ಇ.ಆರ್.ಟಿ ಯೋಜನೆ, ಮುಂಬೈ | ಮಹಾರಾಷ್ಟ್ರದ ಮುಂಬೈನಲ್ಲಿ ೨೬ ಸರ್ಕಾರೇತರ ಸಂಸ್ಥೆಗಳ ಕಾರ್ಯಕರ್ತರೊಂದಿಗೆ ಸಮಾಲೋಚನೆ. |
| ೧೭ | ಸ್ವ-ಸೇವಾ ಗುಂಪು ಸ್ಥಾಪನೆಗೆ ಆರ್ಥಿಕ ಅಭಿವೃದ್ಧಿ | ೧. ಶಿಬಿರ ಆಧಾರಿತ ಸಾಕ್ಷರತಾ ಕಾರ್ಯಗಳ ಮೂಲಕ ೩೫೦ ಸಾಕ್ಷರತಾ ಕಾರ್ಯಕ್ರಮಗಳು.<br>೨. ನಿರಂತರ ವರ್ಗಗಳ ಮೂಲಕ ೬೦೦ ಮಹಿಳೆಯರಲ್ಲಿ ಸಾಕ್ಷರತೆ.<br>೩. ಆರ್ಥಿಕ ನಿರಂತರತೆಗಾಗಿ ಸ್ವ-ಸಹಾಯ ಗುಂಪಿನ ಮಹಿಳೆಯರಿಗೆ ರೂ. ೯೦ ಲಕ್ಷ ಸಾಲ ನೀಡಲಾಗಿದೆ. (ಕೆನರಾ ಬ್ಯಾಂಕ್ ಮತ್ತು ಭಾರತೀಯ ಸ್ಟೇಟ್ ಬ್ಯಾಂಕ್ ಸಹಾಯದಿಂದ.) |

ಹೀಗೆ, ಬರ್ಡ್ಸ್ ಸಂಸ್ಥೆಯು ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ವಿವಿಧ ಯೋಜನೆಗಳನ್ನು ಹಮ್ಮಿಕೊಳ್ಳುವ ಮೂಲಕ ಗ್ರಾಮೀಣ ಜನರಲ್ಲಿ ವಿಶೇಷವಾಗಿ ಅಶಕ್ತ ಗುಂಪುಗಳನ್ನು ಗುರುತಿಸಿ ಸಬಲೀಕರಣಗೊಳಿಸುವಲ್ಲಿ ಶಕ್ತಿಯುತವನ್ನಾಗಿ ಮಾಡುವದರಲ್ಲಿ ವಿಶೇಷವಾದ ಶ್ರಮವನ್ನು ವಹಿಸಿದೆ.

**********

ಅಧ್ಯಾಯ – ೫

# ಪ್ರತಿಸ್ಪಂದಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು

ಅಧ್ಯಾಯ – ೫

# ಪ್ರತಿಸ್ಪಂದಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು

ಕುಟುಂಬ, ಸಮಾಜ ಮತ್ತು ರಾಷ್ಟ್ರದ ರಚನೆಗೆ ಜನಸಮುದಾಯವೇ ಆಧಾರ. ರಾಷ್ಟ್ರದ ನೈಜ ಸಂಪತ್ತೆಂದರೆ ಅದರ ಆರೋಗ್ಯವಂತ 'ಜನತೆ' ಅಂದರೆ ಮಾನವ ಸಂಪನ್ಮೂಲ. ಮಾನವ ಸಂಪನ್ಮೂಲ ಅಭಿವೃದ್ಧಿಯನ್ನು ಆರ್ಥಿಕಾಭಿವೃದ್ಧಿಯೊಂದಿಗೆ ಸಮೀಕರಿಸಲಾಗುತ್ತದೆ. ಅದರಂತೆಯೇ, ಮಾನವ ಸಂಪನ್ಮೂಲಾಭಿವೃದ್ಧಿಗೆ ಆರ್ಥಿಕ ಅಭಿವೃದ್ಧಿಯು ಅವಶ್ಯಕ ಷರತ್ತಾಗಿರುತ್ತದೆ. ಅವು ಪರಸ್ಪರ ಪೂರಕ–ಅವಲಂಬಿತ ಅಂಶಗಳಾಗಿವೆ. ಆದರೆ, ಕೇವಲ ಆರ್ಥಿಕ ಬೆಳವಣಿಗೆಯಾಗುವದರಿಂದ ಮಾನವ ಸಂಪನ್ಮೂಲ ಅಭಿವೃದ್ಧಿಯಾಯಿತೆಂದು ಹೇಳಲಾಗದು. ಆದ್ದರಿಂದ ನಿಜವಾದ ಪ್ರಗತಿಯನ್ನು ಸಾಧಿಸಲು ಅವೆರಡಲ್ಲಿನ ವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿರಬೇಕು.

ಇಂದು ಅಭಿವೃದ್ಧಿಯ ಪರಿಕಲ್ಪನೆ ಬದಲಾಗಿದೆ. ತುಳಿತಕ್ಕೊಳಗಾದವರನ್ನು ಶೋಷಣೆಯಿಂದ ರಕ್ಷಿಸುವದು ಅಭಿವೃದ್ಧಿಯ ಒಂದು ಆಯಾಮವಾದರೆ ಜನಸಾಮಾನ್ಯರಿಗೆ ಪೌಷ್ಠಿಕ ಆಹಾರ, ಶುದ್ಧ ಕುಡಿಯುವ ನೀರಿನ ಪೂರೈಕೆ, ಸಂಪೂರ್ಣ ಆರೋಗ್ಯ ಸೌಲಭ್ಯ ಹಾಗೂ ಜ್ಞಾನ ವೃದ್ಧಿಯ ಚಟುವಟಿಕೆಗಳಲ್ಲಿ ಸಂಪನ್ಮೂಲಗಳ ಹೂಡಿಕೆ ಅಭಿವೃದ್ಧಿಯ ಇತರ ವಿಧಾನಗಳು. ಅಭಿವೃದ್ಧಿಯು ಮಾನವ ಜನಾಂಗದ ಜೀವನಮಟ್ಟದ ಉತ್ತಮಿಕೆಗಾಗಿಯೇ ಇದ್ದರೂ ಸಹ, ಆರ್ಥಿಕ ಮತ್ತು ರಾಜಕೀಯ ಪ್ರಗತಿಗಳೆಡೆಗೆ ಅತೀ ಕೇಂದ್ರಿಕೃತವಾಗಿ, ಮನುಷ್ಯನನ್ನು ಒಬ್ಬ ವ್ಯಕ್ತಿಯೆಂದು ತಿಳಿಯುವಲ್ಲಿ ನಿರ್ಲಕ್ಷ್ಯ ಕಂಡು ಬರುತ್ತದೆ. ಅವನದೇ ಅಭಿವೃದ್ಧಿಗೆ ವ್ಯಕ್ತಿಯೇ ಕೇಂದ್ರ ಬಿಂದು. ಸಮಗ್ರ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರ. ಅವನಿಂದಲೇ ಕುಟುಂಬ, ಸಮುದಾಯ ಮತ್ತು ರಾಷ್ಟ್ರ. ಆದ್ದರಿಂದ ಮಾನವ ಅಭಿವೃದ್ಧಿಯಡೆಗೆ ಕಾಳಜಿ–ಜಾಗರೂಕತೆ ವಹಿಸುವದು ಅಗತ್ಯ.

ಆರೋಗ್ಯ, ಶಿಕ್ಷಣ ಹಾಗೂ ಇತರ ಹಲವಾರು ಅಂಶಗಳಿಂದ ಸಮುದಾಯದ ಅಭಿವೃದ್ಧಿಯು ನಿರ್ಧರಿಸಲ್ಪಡುತ್ತದೆ. ಜನಸಂಖ್ಯೆಯ ಗುಣವಾಚಕಗಳಾದ ವಯಸ್ಸು, ದಾಂಪತ್ಯದ ಸ್ಥಿತಿ–ಕುಟುಂಬದ ಗಾತ್ರ, ಜನಸಂಖ್ಯಾ ಪ್ರಗತಿ, ಜನನ ಪ್ರಮಾಣ, ಮರಣ ಪ್ರಮಾಣ, ಮತ್ತು ಸಾಮಾಜಿಕ ಅಂಶಗಳಾದ ಧರ್ಮ, ಜಾತಿ, ಶಿಕ್ಷಣ, ವೃತ್ತಿ ಕುಟುಂಬದ ಆದಾಯ ಮತ್ತು ವಾಸಸ್ಥಾನದ ಸ್ಥಿತಿ–ಗತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಆರೋಗ್ಯ, ಶಿಕ್ಷಣ, ಮತ್ತು ಗ್ರಾಮೀಣ ಅಭಿವೃದ್ಧಿ  ಮಧ್ಯ ಸಂಬಂಧ ಮತ್ತು ಮಹತ್ವವನ್ನು ಅರಿಯದೆ ಸಮಾಜದ ಗುಂಪಿನ ಸಾಮಾಜಿಕ ಸ್ಥಿತಿಯನ್ನು ಕಾಪಾಡುವದಾಗಲಿ ಮತ್ತು ಅಭಿವೃದ್ಧಿ ಪಡಿಸುವದಾಗಲಿ ಸಾಧ್ಯವಾಗದು. ಇವುಗಳನ್ನು ಆಯಾ ಸಾಮಾಜಿಕ ಸ್ಥಿತಿ–ಗತಿಯ ಸಂದರ್ಭಗಳನ್ನು ಅವಲೋಕಿಸಿ ತಿಳಿದುಕೊಳ್ಳಬೇಕಾಗುತ್ತದೆ.

ಜನತೆಯ ಸಹಭಾಗಿತ್ವವಿಲ್ಲದೆ ಅಭಿವೃದ್ಧಿಯ ಮೌಲ್ಯಮಾಪನ ಸಾಧ್ಯವಾಗದು. ಆದ್ದರಿಂದ, ಸಮುದಾಯದ ಸಂಘಟನೆಗಳಾದ ಸರ್ಕಾರೇತರ ಸಂಸ್ಥೆಗಳ ಮೌಲ್ಯಮಾಪನದಲ್ಲಿ ಪ್ರತಿಸ್ಪಂದಿಗಳ ಅಧ್ಯಯನ ಮುಖ್ಯವಾಗುತ್ತದೆ.

**೫ (ಅ) ಪ್ರತಿಸ್ಪಂದಿಗಳ ಕ್ಷೇತ್ರವ್ಯಾಪ್ತಿ :**

ಅಧ್ಯಯನಕ್ಕೆ ಆಯ್ದುಕೊಂಡ ಸರ್ಕಾರೇತರ ಸಂಸ್ಥೆಗಳ ಬಗೆಗಿನ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸುವುದರ ಮೊದಲು ಯಾವ ಯಾವ ಪ್ರದೇಶಗಳಲ್ಲಿ ಪ್ರತಿಸ್ಪಂದಿಗಳಿಂದ ಮಾಹಿತಿಯನ್ನು ಸಂಗ್ರಹಿಸಬೇಕು ಎನ್ನುವುದರ ಬಗ್ಗೆ ಸ್ಪಷ್ಟತೆ ಇರಬೇಕಾಗುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಜೆ. ಜಿ ಸಹಕಾರಿ ಆಸ್ಪತ್ರೆ, ಕೆ.ಎಲ್.ಇ ಸಂಸ್ಥೆ, ಭಾವ ಸಂಗಮ ಗೋಕಾಕ, ಮಹಿಳಾ ಸಮಾಖ್ಯಾ ಕರ್ನಾಟಕ, ಬರ್ಡ್ಸ್ ಎಂಬ ಐದು ಸರ್ಕಾರೇತರ ಸಂಸ್ಥೆಗಳನ್ನು ಆಯ್ದುಕೊಳ್ಳಲಾಗಿದ್ದು ಪ್ರತಿಯೊಂದು ಸರ್ಕಾರೇತರ ಸಂಸ್ಥೆಯು ತನ್ನದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿದೆ.

**ಜೆ. ಜಿ. ಸಹಕಾರಿ ಆಸ್ಪತ್ರೆ :**

ಈ ಸರ್ಕಾರೇತರ ಸಂಸ್ಥೆಯು ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನಲ್ಲಿ ಪ್ರಮುಖ ಆರೋಗ್ಯ ಸೇವೆಯನ್ನು ನೀಡುವ ಸಂಸ್ಥೆಯಾಗಿದ್ದು, ಗೋಕಾಕ, ರಾಯಬಾಗ, ಚಿಕ್ಕೋಡಿ, ಅಥಣಿ, ಬೈಲಹೊಂಗಲ, ಹುಕ್ಕೇರಿ ತಾಲೂಕುಗಳಿಂದ ಸಾರ್ವಜನಿಕರು ಆರೋಗ್ಯ ಸೇವೆಯನ್ನು ಪಡೆಯುವ ಸಲುವಾಗಿ ಬರುತ್ತಾರೆ. ಅದೇ ರೀತಿ ಸಂಸ್ಥೆಯು ನಡೆಸುವ ಯೋಗ ನಿಸರ್ಗಧಾಮ ಕೇಂದ್ರಕ್ಕೆ ಬೆಳಗಾವಿ ಜಿಲ್ಲೆಯಿಂದ ಮಾತ್ರವಲ್ಲದೇ ಮಹಾರಾಷ್ಟ್ರ ರಾಜ್ಯದಿಂದಲೂ ಹಾಗೂ ಕರ್ನಾಟಕದ ಉಳಿದ ಭಾಗದಿಂದಲೂ ಸಹ ಜನರು ತಮ್ಮ ಆರೋಗ್ಯದ ಅವಶ್ಯಕತೆಗೆ ಭೇಟಿ ನೀಡುತ್ತಾರೆ.

ಅಧ್ಯಯನದ ಕಾಲದಲ್ಲಿ ಗೋಕಾಕ ತಾಲೂಕಿನ ಮಲ್ಲಾಪೂರ ಪಿ.ಜಿ, ಕೊಣ್ಣೂರ, ಪಾಮಲದಿನ್ನಿ, ದುರದುಂಡಿ, ಅರಭಾವಿ, ಶಿಂಧಿಕುರಬೇಟ, ಧೂಪದಾಳ, ಮೂಡಲಗಿ, ಹುಕ್ಕೇರಿ ತಾಲೂಕಿನ ಗುಡಸ, ರಕ್ಷಿ, ಸುಲ್ತಾನಪೂರ ರಾಯಭಾಗ ತಾಲೂಕಿನ ರಾಯಭಾಗ, ಕುಡಚಿ, ಚಿಂಚಲಿ, ಹಾರೂಗೇರಿ, ಕಂಕಣವಾಡಿ, ಅಥಣಿ ತಾಲೂಕಿನ ಕೊಕಟನೂರ, ಕಾಗವಾಡ, ಮಂಗಸೂಳಿ, ಚಿಕ್ಕೋಡಿ ತಾಲೂಕಿನ ಚಿಕ್ಕೋಡಿ, ಸದಲಗಾ, ನಿಪ್ಪಾಣಿ, ಬೆಡಕಿಹಾಳ ಗ್ರಾಮಗಳಿಂದ ಪ್ರತಿಸ್ಪಂದಿಗಳ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಕೆ.ಎಲ್.ಇ :**

ಶಿಕ್ಷಣ ಕ್ಷೇತ್ರಕ್ಕೆ ಅಪ್ರತಿಮ ಕೊಡುಗೆಯನ್ನು ನೀಡಿರುವಂತಾದ ಕೆ.ಎಲ್.ಇ ಸಂಸ್ಥೆಯು ಬೆಳಗಾವಿ ಜಿಲ್ಲೆಯಾದ್ಯಂತ ತನ್ನ ಅಂಗಸಂಸ್ಥೆಯನ್ನು ಹೊಂದಿದೆ. ಪ್ರಸ್ತುತ ಅಧ್ಯಯನದಲ್ಲಿ ಪ್ರತಿಸ್ಪಂದಿಗಳನ್ನು ಗೋಕಾಕ ತಾಲೂಕಿನ ಗೋಕಾಕ ಶಹರ, ಬೆಳಗಾವಿ ತಾಲೂಕಿನ ಬೆಳಗಾವಿ ಶಹರ, ಚಿಕ್ಕೋಡಿ ತಾಲೂಕಿನ ಚಿಕ್ಕೋಡಿ ಶಹರ, ನಿಪ್ಪಾಣಿ, ಅಂಕಲಿ, ಗಳತಗಾ, ಬೈಲಹೊಂಗಲ ತಾಲೂಕಿನ ಬೈಲಹೊಂಗಲ ಶಹರ, ಸವದತ್ತಿ ತಾಲೂಕಿನ ಸವದತ್ತಿ ಶಹರ, ಖಾನಾಪೂರ ತಾಲೂಕಿನ ಖಾನಾಪೂರ ಶಹರದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ.

**ಭಾವ ಸಂಗಮ :**

ಭಾವ ಸಂಗಮ ಇದು ಬೆಳಗಾವಿ ಜಿಲ್ಲೆಯಲ್ಲಿ ಗೋಕಾಕ ತಾಲೂಕಿನ ಒಂದು ಪ್ರಮುಖ ಕಲೆ ಮತ್ತು ಸಾಹಿತ್ಯ ಕ್ಷೇತ್ರದ ಅಭಿವೃದ್ದಿಗೆ ಟೊಂಕ ಕಟ್ಟಿ ನಿಂತಿರುವ ಸಂಸ್ಥೆ. ಭಾವ ಸಂಗಮ ಕಲಾ ಸಂಸ್ಥೆಯ ಬಗ್ಗೆ ಘಟಪ್ರಭಾ, ಅರಭಾವಿ, ಯಾದವಾಡ, ಜಮಖಂಡಿ, ಧೂಪದಾಳ, ಕುಡಚಿ ಮತ್ತು ಗೋಕಾಕ ಶಹರದ ಪ್ರತಿಸ್ಪಂದಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಮಹಿಳಾ ಸಮಾಖ್ಯಾ ಕರ್ನಾಟಕ :**

ಮಹಿಳಾ ಸಮಾಖ್ಯಾ ಸಂಸ್ಥೆಯು ಮಹಿಳಾ ಸಬಲೀಕರಣದಲ್ಲಿ ಅತ್ಯಂತ ಕಾಳಜಿಯನ್ನು ಹೊಂದಿದ ಸಂಸ್ಥೆಯಾಗಿದೆ. ಈ ಸರ್ಕಾರೇತರ ಸಂಸ್ಥೆಯು ಪ್ರಸ್ತುತ ಬೆಳಗಾವಿ ಜಿಲ್ಲೆಯ ಗೋಕಾಕ, ರಾಮದುರ್ಗ, ಸವದತ್ತಿ, ರಾಯಭಾಗ ತಾಲೂಕುಗಳಲ್ಲಿ ತನ್ನ ಕ್ಷೇತ್ರವ್ಯಾಪ್ತಿಯನ್ನು ಹೊಂದಿದೆ. ಈ ತಾಲೂಕುಗಳಲ್ಲಿ ವಿಶೇಷವಾಗಿ ಸಮಾಖ್ಯಾದ ಕ್ಷೇತ್ರವ್ಯಾಪ್ತಿ ಹೊಂದಿರುವ ಗೋಕಾಕ ತಾಲೂಕಿನ ಗ್ರಾಮಗಳಾದ ಅಡಿಬಟ್ಟಿ, ಅರಭಾವಿ, ಅಂಕಲಗಿ, ಕುಲಗೋಡ, ಸವದತ್ತಿ ತಾಲೂಕಿನ ಶಿರಸಂಗಿ, ಯರಗಟ್ಟಿ, ಸತ್ತಿಗೇರಿ, ಮುನವಳ್ಳಿ, ಮುರಗೋಡ, ರಾಮದುರ್ಗ ತಾಲೂಕಿನ ದೊಡ್ಡಮಂಗಡಿ, ಕಟಕೋಳ, ಬಟಕುರ್ಕಿ, ಹಲಗತ್ತಿ, ರಾಯಭಾಗ ತಾಲೂಕಿನ ರಾಯಭಾಗ ಶಹರದ ಪ್ರತಿಸ್ಪಂದಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಬರ್ಡ್ಸ್ :**

ಬೆಳಗಾವಿ ಸಮಗ್ರ ಗ್ರಾಮೀಣಾಭಿವೃದ್ಧಿ ಸಂಸ್ಥೆ, ತುಕ್ಕಾನಟ್ಟಿಯಲ್ಲಿ ತನ್ನ ಕೇಂದ್ರ ಕಚೇರಿಯನ್ನು ಹೊಂದಿದ್ದು ಗ್ರಾಮೀಣಾಭಿವೃದ್ಧಿಯಲ್ಲಿ ತನ್ನ ಛಾಪನ್ನು ಒತ್ತಿದೆ. ಈ ಸರ್ಕಾರೇತರ ಸಂಸ್ಥೆ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ತುಕ್ಕಾನಟ್ಟಿ, ಕಲ್ಲೋಳಿ, ನಾಗನೂರ, ಮೂಡಲಗಿ, ಗುರ್ಲಾಪೂರ, ಹಳ್ಳೂರ, ಶಿವಾಪೂರ ಗೋಕಾಕ ಶಹರದ ಪ್ರತಿಸ್ಪಂದಿಗಳಿಂದ ಸಂಗ್ರಹಿಸಲಾಗಿದೆ.

**೫ (ಬ) ಪ್ರತಿಸ್ಪಂದಿಗಳ ಆಯ್ಕೆ ವಿಧಾನ :**

ಪ್ರತಿಯೊಂದು ಅಧ್ಯಯನದಲ್ಲಿ ಪ್ರತಿಸ್ಪಂದಿಗಳ ಆಯ್ಕೆಯ ವಿಧಾನವು ಬಹಳ ಪ್ರಮುಖ ಅಂಶ. ಪ್ರಸ್ತುತ ಅಧ್ಯಯನದಲ್ಲಿ ಅಧ್ಯಯನಕ್ಕೊಳಪಡಿಸಿದ ಸರ್ಕಾರೇತರ ಸಂಸ್ಥೆಗಳ ಕ್ಷೇತ್ರವ್ಯಾಪ್ತಿಯನ್ನು ಹೊಂದಿದ ಗ್ರಾಮಗಳಿಂದ ಪ್ರತಿಸ್ಪಂದಿಗಳನ್ನು ಆಯ್ಕೆ ಮಾಡಲಾಗಿದೆ. ಸರ್ಕಾರೇತರ ಸಂಸ್ಥೆಗಳು ಹೆಚ್ಚಿನ ಕ್ಷೇತ್ರವ್ಯಾಪ್ತಿಯನ್ನು ಹೊಂದಿದ್ದರೂ ಸಹಿತ ಸಮಯದ ಮಿತಿಯಿಂದಾಗಿ ಆಯ್ದ ಪ್ರತಿಸ್ಪಂದಿಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಧ್ಯಯನದ ಪ್ರತಿ ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಒಂದು ನೂರು ಪ್ರತಿಸ್ಪಂದಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹೀಗೆ ಒಟ್ಟು ಐದು ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ೫೦೦ ಜನರನ್ನು ಸಂದರ್ಶಿಸಿ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರತಿ ಸರ್ಕಾರೇತರ ಸಂಸ್ಥೆಗಳ ಗ್ರಾಮಮಟ್ಟದ ಕ್ಷೇತ್ರ ವ್ಯಾಪ್ತಿಯು ಬೇರೆ ಬೇರೆಯಾಗಿದ್ದು ವಿವಿಧ ಗ್ರಾಮಗಳ ಪ್ರತಿಸ್ಪಂದಿಗಳಿಂದ ನೇರವಾಗಿ ಮಾಹಿತಿ ಸಂಗ್ರಹಿಸಲಾಗಿದೆ. ಮಾಹಿತಿ ಸಂಗ್ರಹಣೆ ಕಾಲಕ್ಕೆ ಯಾವುದೇ ರೀತಿಯ ಪೂರ್ವಾಗ್ರಹವನ್ನು ಹೊಂದದೆ ನಿಷ್ಪಕ್ಷಪಾತವಾಗಿ ಅಧ್ಯಯನಕ್ಕೆ ಅವಶ್ಯಕವಾಗುವ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಸಂಶೋಧನೆಗೆ ಪೂರಕವಾಗುವ ಈ ಸಮೀಕ್ಷೆಯಲ್ಲಿ ಪ್ರತಿಸ್ಪಂದಿಗಳ ಮತ್ತು ಅವರ ಕುಟುಂಬದ ವಿಶಿಷ್ಟ ಲಕ್ಷಣಗಳನ್ನು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ ಮತ್ತು ಅದರ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಪ್ರತಿಸ್ಪಂದಿಗಳ ಲಕ್ಷಣಗಳನ್ನು ಅಧ್ಯಯನ ಮಾಡಲು ಲಿಂಗ, ವಯಸ್ಸು, ಶಿಕ್ಷಣ, ಶ್ರಮ, ದಾಂಪತ್ಯ, ಕುಟುಂಬದ ವಿಧ, ವೃತ್ತಿ, ವಾರ್ಷಿಕ ವರಮಾನ, ಶೌಚದ ವ್ಯವಸ್ಥೆ ಮತ್ತು ಇನ್ನಿತರ ಮಹತ್ವದ ಅಂಶಗಳನ್ನು ಸಂಗ್ರಹಿಸಲಾಗಿದೆ.

**೫.೧ ಲಿಂಗಾನುಪಾತ :**

ಬೆಳಗಾವಿ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ಸಂಬಂಧಿಸಿದ ಸಮಸ್ಯೆಗಳಿಗೆ 'ಸರ್ಕಾರೇತರ ಸಂಸ್ಥೆ'ಗಳ ಲಾಭವನ್ನು ಎಷ್ಟು ಜನ ಸ್ತ್ರೀ-ಪುರುಷರು ಪಡೆದಿದ್ದಾರೆಂದು ತಿಳಿಯಲು, ಸಮೀಕ್ಷೆಯಲ್ಲಿನ ಒಟ್ಟು ಪ್ರತಿಸ್ಪಂದಿಗಳಲ್ಲಿ ಅವರ ಅನುಪಾತ ಎಷ್ಟೆಂದು ಲಕ್ಷ್ಯದಲ್ಲಿಡುದು ಅವಶ್ಯ.

ಸಮೀಕ್ಷೆಯಲ್ಲಿನ ಒಟ್ಟು ಪ್ರತಿಸ್ಪಂದಿಗಳಲ್ಲಿ ಸ್ತ್ರೀ-ಪುರುಷರು ಎಷ್ಟಿದ್ದರೆಂಬ ಅಂಕಿ ಅಂಶಗಳನ್ನು ಸಂಗ್ರಹಿಸುವ ಪ್ರಯತ್ನ ಮಾಡಲಾಯಿತು. ಅದನ್ನು ಕೋಷ್ಟಕ ೫.೧ ರಲ್ಲಿ ನೀಡಲಾಗಿದೆ.

***ಕೋಷ್ಟಕ ೫.೧ ಪ್ರತಿಸ್ಪಂದಿಗಳ ಲಿಂಗಾನುಪಾತ***

| ಲಿಂಗ | ಪ್ರತಿಸ್ಪಂದಿಗಳ ಸಂಖ್ಯೆ | ಶೇಕಡಾ ಪ್ರಮಾಣ |
|---|---|---|
| ಪುರುಷರು | ೧೭೨ | ೩೪.೪ |
| ಸ್ತ್ರೀಯರು | ೩೨೮ | ೬೫.೬ |
| ಒಟ್ಟು | ೫೦೦ | ೧೦೦ |




ಈ ಕೋಷ್ಟಕ ಸ್ಪಷ್ಟಗೊಳಿಸುವದೇನೆಂದರೆ, ಒಟ್ಟು ಸಮೀಕ್ಷೆಗೊಳಪಡಿಸಿದ ಪ್ರತಿಸ್ಪಂದಿಗಳಲ್ಲಿ (೫೦೦), ಪುರುಷರು ೧೭೨ (ಶೇ.೩೪.೪) ರಷ್ಟಿದ್ದರೆ, ಸ್ತ್ರೀಯರು ೩೨೮ (ಶೇ.೬೫.೬) ರಷ್ಟಿದ್ದರು. ಇದರಿಂದ ಕಂಡು ಬರುವುದೇನೆಂದರೆ 'ಸರ್ಕಾರೇತರ ಸಂಸ್ಥೆ'ಗಳಿಂದ ಲಾಭ ಪಡೆಯುವವರಲ್ಲಿ ಸ್ತ್ರೀಯರ ಸಂಖ್ಯೆಯು ಪುರುಷರಿಗಿಂತ ಅಧಿಕವಾಗಿದೆ. ಇದನ್ನೇ, ಇನ್ನೊಂದು ದೃಷ್ಟಿಯಿಂದ ನೋಡಿದರೆ, ಪುರುಷರಿಗಿಂತ ಹೆಣ್ಣು ಮಕ್ಕಳು ಹೆಚ್ಚಾಗಿ ಸಮುದಾಯ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ಇದರಿಂದಾಗಿ ಪೂರ್ತಿ ಕುಟುಂಬವೇ ಪ್ರಯೋಜನ ಪಡೆಯುವದರಲ್ಲಿ ಸಂದೇಹವಿಲ್ಲ.

**೫.೨ ವಯಸ್ಸು:**

ವಯಸ್ಸು- ಪ್ರತಿಸ್ಪಂದಿಗಳ ಒಂದು ಮಹತ್ವದ ವೈಯಕ್ತಿಕ ವಿಶೇಷ ಗುಣವಾಗಿದೆ. ಏಕೆಂದರೆ ಒಂದು ಅಪೇಕ್ಷಿತ ಪಾತ್ರ ನಿರ್ವಹಿಸಬಯಸುವಲ್ಲಿ ವಯಸ್ಸಿನ ಪ್ರಬುದ್ಧತೆ ಮಹತ್ವದ್ದೆನಿಸುತ್ತದೆ.

ಜೀವಶಾಸ್ತ್ರಿಯ ರೀತಿಯಲ್ಲಿ ವಯಸ್ಸು ವ್ಯಕ್ತಿಯೊಬ್ಬನ ದೈಹಿಕ ಮತ್ತು ಭೌದ್ಧಿಕ ಪ್ರಬುದ್ಧತೆಯನ್ನು ನಿರ್ಧರಿಸುತ್ತದೆ. ಸಮಾಜಶಾಸ್ತ್ರದ ಪ್ರಕಾರ ವಯಸ್ಸು, ವ್ಯಕ್ತಿಯೊಬ್ಬನ ಸಾಮಾಜಿಕ ಸ್ಥಾನವನ್ನು ನಿರ್ಧರಿಸುವಲ್ಲಿಯೂ ಮುಖ್ಯವಾಗುತ್ತದೆ. ಯಾವುದೊಂದು ಸಮಾಜದಲ್ಲಿ, ವ್ಯಕ್ತಿಯ ಶಕ್ತಿ, ಅಧಿಕಾರ, ಗೌರವ, ಶ್ರೇಣಿ, ಮತ್ತು ಮನ್ನಣೆಗಳು ಸಹ ವಯಸ್ಸನ್ನು ಅವಲಂಬಿಸಿರುತ್ತವೆ. ದೇಶದ ಸಮಗ್ರ ಅಭಿವೃದ್ಧಿಯು ಸಹಿತ ಜನರ ವಯಸ್ಸಿನಿಂದ ನಿರ್ಧರಿತಗೊಳ್ಳುತ್ತದೆ. ಉದಾಹರಣೆಗಾಗಿ, ಯುವಕರು ಮಕ್ಕಳಿಗಿಂತ ಮತ್ತು ಹಿರಿಯ ನಾಗರಿಕರಿಗಿಂತ ಹೆಚ್ಚು ಉತ್ಪಾದಕ ಸಾಮರ್ಥ್ಯವನ್ನು ಹೊಂದಿರುತ್ತಾರೆ.

ಅಧ್ಯಯನದಲ್ಲಿ ವಯಸ್ಸಿನ ಮಾಹಿತಿ ಸಂಗ್ರಹವು ಅತ್ಯವಶ್ಯಕವಾಗಿದೆ. ಸದ್ಯದ ಅಧ್ಯಯನಕ್ಕೆ ಸಂಬಂಧಿಸಿದ ಪ್ರತಿಸ್ಪಂದಿಗಳ ವಯಸ್ಸಿನ ವಿವರವನ್ನು ಕೋಷ್ಟಕ ೫.೨. ರಲ್ಲಿ ನೀಡಲಾಗಿದೆ.

***ಕೋಷ್ಟಕ ೫.೨ ಪ್ರತಿಸ್ಪಂದಿಗಳ ವಯಸ್ಸಿನ ಗುಂಪು.***

| ವಯಸ್ಸಿನ ಗುಂಪು | ಪ್ರತಿಸ್ಪಂದಿಗಳ | ಶೇಕಡಾ ಪ್ರಮಾಣ |
|---|---|---|
| ೨೧-೩೦ | ೧೩೧ | ೨೬.೨ |
| ೩೧-೪೦ | ೨೧೨ | ೪೨.೪ |
| ೪೧-೫೦ | ೯೫ | ೧೯.೦ |
| ೫೦ಕ್ಕಿಂತ ಹೆಚ್ಚು | ೬೨ | ೧೨.೪ |
| **ಒಟ್ಟು** | **೫೦೦** | **೧೦೦** |

ಈ ಕೋಷ್ಟಕವು ಸ್ಪಷ್ಟಗೊಳಿಸುವದೇನೆಂದರೆ ಒಟ್ಟು ೫೦೦ ಪ್ರತಿಸ್ಪಂದಿಗಳಲ್ಲಿ ೧೩೧ ಪ್ರತಿಸ್ಪಂದಿಗಳು (ಶೇ. ೨೬.೨) ೨೧-೩೦ರ ಗುಂಪಿನಲ್ಲಿ, ೨೧೨ ಪ್ರತಿಸ್ಪಂದಿಗಳು ಅತೀ ಹೆಚ್ಚು ಸಂಖ್ಯೆಯವರು (ಶೇ. ೪೨.೪), ೩೧-೪೦ರ ಗುಂಪಿನಲ್ಲಿ, ೯೫ ಪ್ರತಿಸ್ಪಂದಿಗಳು (ಶೇ. ೧೯) ೪೧-೫೦ರ ಗುಂಪಿನಲ್ಲಿ, ಮತ್ತು ಇನ್ನುಳಿದ ೬೨ ಪ್ರತಿಸ್ಪಂದಿಗಳು (ಶೇ. ೧೨.೪) ಐವತ್ತು ವಯಸ್ಸಿಗಿಂತ ಹೆಚ್ಚಿನ ವಯಸ್ಕರ ಗುಂಪಿನಲ್ಲಿ ಸೇರಿದವರಾಗಿದ್ದಾರೆ.

ಕೋಷ್ಟಕವು ಪ್ರದರ್ಶಿಸುವ ಮಹತ್ವದ ಅಂಶವೆಂದರೆ ಗರಿಷ್ಠ ಸಂಖ್ಯೆಯ ಪ್ರತಿಸ್ಪಂದಿಗಳು ಶೇ,೬೮.೬ (೨೬.೨+೪೨.೪) ೨೧-೪೦ರ ವಯಸ್ಸಿನ ಗುಂಪಿಗೆ ಸೇರಿದವರಾಗಿದ್ದಾರೆ.

**೫.೩. ವಿದ್ಯಾರ್ಹತೆ:**

ಸಮಗ್ರ ಅಭಿವೃದ್ಧಿ ಕುರಿತಾಗಿ ಇರುವ ಜಾಗೃತ ಮತ್ತು ಸೇವಾಸಂಸ್ಥೆಗಳ ಪ್ರಯೋಜನ ಪಡೆಯಲು ಸಾಕಷ್ಟು ತಿಳುವಳಿಕೆ ಇರುವದು ಅವಶ್ಯ. ಆದ್ದರಿಂದ ಪ್ರತಿಸ್ಪಂದಿಗಳ ಶೈಕ್ಷಣಿಕ ಮಟ್ಟ ತಿಳಿದುಕೊಳ್ಳಲು ಮಾಹಿತಿಯನ್ನು ಕಲೆಹಾಕಿದ್ದು ಈ ಅಧ್ಯಯನದ ಮುಖ್ಯ ಅಂಶ.

ಸಾಮಾನ್ಯವಾಗಿ ಒಳ್ಳೆಯ ಶಿಕ್ಷಣ ಪಡೆದಿರುವ ಜನರಲ್ಲಿ ಸರ್ಕಾರೇತರ ಸಂಸ್ಥೆಗಳ ಕುರಿತು ಜಾಗೃತಿಯಿರುತ್ತದೆ, ತಿಳುವಳಿಕೆ ಹೆಚ್ಚಾಗಿರುತ್ತದೆ. ಹೀಗಾಗಿ ಶಿಕ್ಷಣವು ಸಮಗ್ರ ಅಭಿವೃದ್ಧಿಗಾಗಿ ಲಭ್ಯವಿರುವ ಬೇರೆ-ಬೇರೆ ಮಾರ್ಗಗಳ ಬಗ್ಗೆ ಚಿಂತನ ಮಾಡುವ ಸಾಮರ್ಥ್ಯ ಬೆಳೆಸುತ್ತದೆ. ಅದರಂತೆ ಸೂಕ್ತ ತಂತ್ರಜ್ಞಾನಗಳ, ಮತ್ತು ಸರ್ಕಾರೇತರ ಸಂಸ್ಥೆಗಳ ಲಭ್ಯತೆ ಬಗ್ಗೆ ಅರಿತುಕೊಳ್ಳಲು ಸಹಕಾರಿಯಾಗುತ್ತದೆ. ಸ್ವ-ಮಾರ್ಗದರ್ಶನ, ಸ್ವ-ಚಿಂತನ ಮತ್ತು ಸ್ವ-ನಿರ್ಣಯಗಳಲ್ಲಿ ಶಿಕ್ಷಣವು ಮಹತ್ವದ್ದಾಗಿದೆ. ತಪ್ಪು ಗ್ರಹಿಕೆ ಹಾಗೂ ಮೂಢನಂಬಿಕೆಗಳ ವಿರುದ್ಧ ಸರಿಯಾದ ಮದ್ದು-ಶಿಕ್ಷಣವೇ ಆಗಿದೆ. ಇದನ್ನು ಗಮನದಲ್ಲಿರಿಸಿಕೊಂಡು, ಪ್ರತಿಸ್ಪಂದಿಗಳ ಶೈಕ್ಷಣಿಕ ಹಿನ್ನಲೆಯ ಮಾಹಿತಿ ಸಂಗ್ರಹಿಸಲಾಗಿದೆ. ಇದನ್ನು ಕೋಷ್ಟಕ ೫.೩.೧ರಲ್ಲಿ ನೀಡಲಾಗಿದೆ.

***ಕೋಷ್ಟಕ ೫.೩ – ಶೈಕ್ಷಣಿಕ ಮಟ್ಟ***

| ಮಟ್ಟ | ಪ್ರತಿಸ್ಪಂದಿಗಳ ಸಂಖ್ಯೆ | ಶೇಕಡಾಪ್ರಮಾಣ |
|---|---|---|
| ಅಶಿಕ್ಷಿತರು | ೧೩೨ | ೨೬.೪ |
| ಪ್ರಾಥಮಿಕ ಶಿಕ್ಷಣ | ೧೬೭ | ೩೩.೪ |
| ಮಾಧ್ಯಮಿಕ ಶಿಕ್ಷಣ | ೯೦ | ೧೮.೦ |
| ಪಿ.ಯು.ಸಿ | ೫೨ | ೧೦.೪ |
| ಪದವಿ | ೩೭ | ೭.೪ |
| ಸ್ನಾತಕೋತ್ತರ | ೨೨ | ೪.೪ |
| **ಒಟ್ಟು** | **೫೦೦** | **೧೦೦** |



ಮೇಲಿನ ಕೊಷ್ಟಕದಿಂದ ಸ್ಪಷ್ಟವಾಗಿ ತಿಳಿಯುವದೇನೆಂದರೆ ಸಮೀಕ್ಷಿಸಿದ ಒಟ್ಟು ೫೦೦ ಪ್ರತಿಸ್ಪಂದಿಗಳಲ್ಲಿ ೧೩೨ ಪ್ರತಿಸ್ಪಂದಿಗಳು (ಶೇ. ೨೬.೪) ಮಾತ್ರ ಅನಕ್ಷರಸ್ಥರಾಗಿದ್ದಾರೆ. ಇನ್ನುಳಿದ ಬಹಳಷ್ಟು ಪ್ರತಿಸ್ಪಂದಿಗಳು ಪ್ರಾಥಮಿಕ ಹಂತದಿಂದ – ಉನ್ನತ ಶಿಕ್ಷಣದ ಅಂದರೆ ಸ್ನಾತಕೋತ್ತರ ಮಟ್ಟದವರೆಗೆ ಶಿಕ್ಷಣ ಪಡೆದವರಾಗಿದ್ದಾರೆ. ಒಟ್ಟು ೩೬೮ ಪ್ರತಿಸ್ಪಂದಿಗಳು (ಶೇ. ೭೩.೬೦)ಈ ಗುಂಪಿಗೆ ಸೇರಿದ್ದಾರೆ. ಆದರೆ ಪ್ರಾಥಮಿಕ ಮತ್ತು ಮಾಧ್ಯಮಿಕ ಮಟ್ಟದವರೆಗೆ ಶಿಕ್ಷಣ ಪಡೆದವರೇ ಹೆಚ್ಚಾಗಿದ್ದು, ಅವರು ಒಟ್ಟು ೨೫೭ ಮಾಹಿತಿದಾರರಿದ್ದಾರೆ (ಶೇ. ೫೧.೪೦). ಪದವಿ ಮತ್ತು ಸ್ನಾತಕೋತ್ತರ ಪದವಿ ಹೊಂದಿದ ಪ್ರತಿಸ್ಪಂದಿಗಳು ಕೇವಲ ೫೯ರಷ್ಟು (ಶೇ.೧೧.೮) ಇದ್ದಾರೆ. ಇದರಿಂದಾಗಿ ಶಿಕ್ಷಿತ ವರ್ಗದವರು ಸರ್ಕಾರೇತರ ಸಂಸ್ಥೆಗಳಿಂದ ಹೆಚ್ಚಿನ ಪ್ರಯೋಜನ ಪಡೆಯುತ್ತಾರೆ ಎಂದು ತಿಳಿಯಬಹುದಾಗಿದೆ.

**೫.೪ ಧಾರ್ಮಿಕ ಹಿನ್ನಲೆ.**

ಜನರ ಆರೋಗ್ಯ ಸ್ಥಿತಿ–ಗತಿ, ಶಿಕ್ಷಣ, ಸಬಲೀಕರಣದ ಅಂಶಗಳನ್ನು ವಿವರಿಸುವಲ್ಲಿ 'ಧರ್ಮ' ಮುಖ್ಯ ಅಂಶವಾಗಿದೆ. ಆಹಾರ ಪದ್ಧತಿ, ಜೀವನ ಶೈಲಿ, ಮಕ್ಕಳ ಆರೈಕೆ–ಪೋಷಣೆ, ಲಿಂಗ ಸಮಸ್ಯೆ, ಧಾರ್ಮಿಕ ಸಂಗತಿಗಳು ನಡುವಳಿಕೆಗಳು ಧರ್ಮದಿಂದ ಧರ್ಮಕ್ಕೆ ಬದಲಾಗಿರುತ್ತವೆ. ಆದ್ದರಿಂದ, ಅಭಿವೃದ್ಧಿ ಮೇಲೆ ನೇರ ಪರಿಣಾಮ ಬೀರುತ್ತವೆ. ಭಾರತದಲ್ಲಿ ಹಿಂದುಗಳೇ ಬಹುಮತದ ಜನಸಂಖ್ಯೆಯಲ್ಲಿದ್ದಾರೆ. ಇದು ಸಮೀಕ್ಷೆಯಿಂದಲೂ ಸಿದ್ಧವಾದ ಅಂಶವಾಗಿದೆ, ಇದನ್ನು ಕೋಷ್ಠಕ ೫.೪ ರಲ್ಲಿ ಬಿಂಬಿಸಲಾಗಿದೆ.

***ಕೋಷ್ಠಕ ೫.೪ ಪ್ರತಿಸ್ಪಂದಿಗಳ ಧರ್ಮ***

| **ಧರ್ಮ** | **ಸಂಖ್ಯೆ** | **ಶೇ.** |
|---|---|---|
| ಹಿಂದೂಗಳು | ೪೨೨ | ೮೪.೪ |
| ಮುಸ್ಲಿಮರು | ೪೨ | ೮.೪ |
| ಜೈನರು | ೨೨ | ೫.೦ |
| ಕ್ರೈಸ್ತರು | ೧೧ | ೨.೨ |
| **ಒಟ್ಟು** | **೫೦೦** | **೧೦೦** |

ಸಮೀಕ್ಷೆಯ ಅಂಕಿಅಂಶಗಳು ಸಾಮಾನ್ಯ ಜ್ಞಾನದೊಂದಿಗೆ ತಳುಕು ಹೊಂದುವದು ಕೋಷ್ಠಕದಲ್ಲಿ ಗೋಚರಿಸುತ್ತದೆ. ಅಂದುಕೊಂಡಂತೆ, ಒಟ್ಟು ೪೨೨ ಪ್ರತಿಸ್ಪಂದಿಗಳು (ಶೇ.೮೪.೪) ಹಿಂದುಧರ್ಮದವರಾಗಿದ್ದರೆ, ಇನ್ನು ಕೇವಲ ೭೮ ಪ್ರತಿಸ್ಪಂದಿಗಳು (ಶೇ.೧೫.೬) ಇತರ ಧರ್ಮಗಳಾದ ಮುಸ್ಲಿಮರು, ಜೈನರು ಮತ್ತು ಕ್ರೈಸ್ತ ಜನಾಂಗದವರಾಗಿದ್ದಾರೆ.

### ೫.೫ ಜಾತಿವಾರು ಮಾಹಿತಿ:

ಹಿಂದುಗಳ ಸಾಮಾಜಿಕ ವ್ಯವಸ್ಥೆಯಲ್ಲಿ 'ಜಾತಿ' ಅತ್ಯಂತ ಮಹತ್ವದ ಅಂಶ. ಭಾರತೀಯ ಸಾಮಾಜಿಕ ಚಟುವಟಿಕೆಗಳ ಮೂಲವೇ 'ಜಾತಿ'ಯಾಗಿದೆ. ಭಾರತ ಸಾಮಾಜಿಕ ರಚನೆಯೇ ಜಾತಿ ವ್ಯವಸ್ಥೆಯನ್ನು ಅವಲಂಬಿಸಿದೆ. ಇದರಿಂದ ಸಮಾಜದ ವಿಭಜನೆಯಾಗಿ, ಶ್ರೇಣಿ-ಗುಂಪುಗಳು-ವಿಭಾಗಗಳು ರಚಿತಗೊಳ್ಳುತ್ತವೆ. ಹಿಂದೂಧರ್ಮಕ್ಕೆ ಸೇರಿದ ಈ ಅಧ್ಯಯನದಲ್ಲಿಯ ಪ್ರತಿಸ್ಪಂದಿಗಳು ವಿವಿಧ ಜಾತಿ-ಉಪಜಾತಿಗೆ ಸೇರಿದವರಾಗಿದ್ದಾರೆ. ದುರ್ದೈವವೆಂದರೆ, ಇವುಗಳಲ್ಲಿ ಸಮಾಧಾನ ತರುವಂತಹ ಸಂಬಂಧ-ಜೋಡಣೆ ಇಲ್ಲದಂತಾಗಿದೆ. ಅದನ್ನು ವ್ಯವಸ್ಥಿತವಾಗಿ ಸ್ಥಾನೀಕರಿಸುವದು ಕಠಿಣವೆನಿಸಿದರೂ, ಒಂದು ಜಾತಿಯು ಇನ್ನೊಂದಕ್ಕಿಂತ ಹೆಚ್ಚಿನದು-ಕಡಿಮೆಯ ಸ್ಥಾನಹೊಂದಿದ್ದನ್ನು ಗಮನಿಸಿ ಹಲವಾರು ಗುಂಪುಗಳನ್ನು ಮಾಡಲಾಗಿದೆ. ಹೀಗಾಗಿ, ಅಧ್ಯಯನಕ್ಕಾಗಿ ಇಲ್ಲಿ ಮೂರು ಗುಂಪುಗಳಲ್ಲಿ ಜಾತಿಗಳನ್ನು ಉನ್ನತ, ಮಧ್ಯಮ ಮತ್ತು ಕೆಳ ಜಾತಿಯವರೆಂದು ವಿಂಗಡಿಸಲಾಗಿದೆ.

ಉನ್ನತ ಜಾತಿಯ ಗುಂಪಿನಲ್ಲಿ ಬ್ರಾಹ್ಮಣರು ಮತ್ತು ಲಿಂಗಾಯತರನ್ನು ಸೇರಿಸಲಾಗಿದೆ.

ಇನ್ನು ಮಧ್ಯಮ ಗುಂಪಿನಲ್ಲಿ ಮರಾಠರು, ಚಿನಿವಾಲರು, ಬಡಿಗರು, ಕಂಬಾರರು, ವೈಶ್ಯರನ್ನು ಗುರುತಿಸಲಾಗಿದೆ.

ಕೊನೆಯಲ್ಲಿ ಕೆಳಜಾತಿಯವರಲ್ಲಿ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡದವರನ್ನು ಸೇರಿಸಲಾಗಿದೆ, ಅವರು ವ್ಯವಸ್ಥೆಯ ಅತೀ ಕೆಳಹಂತದಲ್ಲಿದ್ದಾರೆ. ಈ ಕೆಳಗೆ ನೀಡಿದ ಕೋಷ್ಠಕ ೫.೫ ಜಾತಿವಾರು ಪ್ರತಿಸ್ಪಂದಿಗಳ ಅಂಕಿ-ಅಂಶ ನೀಡುತ್ತದೆ.

***ಕೋಷ್ಠಕ ೫.೫ ಪ್ರತಿಸ್ಪಂದಿಗಳ ಜಾತಿವಾರು ವಿಂಗಡಣೆ.***

| ಜಾತಿ | ಸಂಖ್ಯೆ | ಶೇ. |
|---|---|---|
| ಉನ್ನತವರ್ಗ | ೧೦೨ | ೨೦.೪ |
| ಮಧ್ಯಮ ವರ್ಗ | ೧೦೮ | ೨೧.೬ |
| ಕೆಳವರ್ಗ | ೨೧೫ | ೪೩.೦೦ |
| ಜಾತಿ ವರ್ಗೀಕರಣಕ್ಕೆ ಸಂಬಂಧಿಸಿದವರಲ್ಲ | ೭೫ | ೧೫.೬ |
| **ಒಟ್ಟು** | **೫೦೦** | **೧೦೦** |

ಕೋಷ್ಠಕ ೫.೫ ದಲ್ಲಿ ಅರಿತುಕೊಳ್ಳಬಹುದಾದ ಅಂಶವೆಂದರೆ, ಒಟ್ಟು ೫೦೦ ಪ್ರತಿಸ್ಪಂದಿಗಳಲ್ಲಿ ೧೦೨ ಪ್ರತಿಸ್ಪಂದಿಗಳು (ಶೇ,೨೦.೪) ಉನ್ನತ ವರ್ಗಕ್ಕೆ (ಅಂದರೆ, ಬ್ರಾಹ್ಮಣರು, ಲಿಂಗಾಯತರು) ವರ್ಗಕ್ಕೆ, ೧೦೮ ಪ್ರತಿಸ್ಪಂದಿಗಳು (ಶೆ,೨೧.೬) ಮಧ್ಯಮ (ಮರಾಠಾ, ಅಕ್ಕಸಾಲಿಗರು, ಕುಂಬಾರರು, ಬಡಿಗರು) ವರ್ಗಕ್ಕೆ ಸೇರಿದವರಾಗಿದ್ದರೆ, ಹೆಚ್ಚಿನ ಸಂಖ್ಯೆಯ ೨೧೫ ಪ್ರತಿಸ್ಪಂದಿಗಳು (ಶೇ,೪೩.೦)

ಪರಿಶಿಷ್ಠ ಜಾತಿ – ಪರಿಶಿಷ್ಠ ಪಂಗಡದ ವರ್ಗಕ್ಕೆ ಸೇರಿದವರಾಗಿದ್ದಾರೆ. ಇನ್ನುಳಿದ ೭೫ ಪ್ರತಿಸ್ಪಂದಿಗಳು (ಶೇ.೧೫) ಮುಸ್ಲಿಂ, ಜೈನ, ಕ್ರೈಸ್ತ ಜನಾಂಗಕ್ಕೆ ಸೇರಿದವರಾಗಿದ್ದು ಇವರು ಜಾತಿಯ ವರ್ಗೀಕರಣಕ್ಕೆ ಅಳವಡುವುದಿಲ್ಲ.

ಇದರಿಂದ ತಿಳಿದು ಬರುವದೇನೆಂದರೆ ಹೆಚ್ಚಿನ ಸಂಖ್ಯೆಯ ಕೆಳವರ್ಗದ ಪರಿಶಿಷ್ಠ ಜಾತಿ–ಜನಾಂಗದ ಮಾಹಿತಿದಾರರೇ 'ಸರ್ಕಾರೇತರ ಸಂಸ್ಥೆ'ಗಳು ನೀಡುವ ಸೌಲಭ್ಯಗಳನ್ನು ಹೆಚ್ಚಿಗೆ ಪಡೆದವರಾಗಿದ್ದಾರೆ. ನಂತರದ ಸ್ಥಾನಗಳು ಮಧ್ಯಮ ಮತ್ತು ಉನ್ನತ ವರ್ಗದ ಫಲಾನುಭವಿಗಳದ್ದು. ಹೀಗಾಗಿ ಕೆಳವರ್ಗದ ಜನತೆಗೆ ತಮ್ಮ ಸೇವೆಯನ್ನು ತಲುಪಿಸಬೇಕೆಂಬ 'ಸರ್ಕಾರೇತರ ಸಂಸ್ಥೆ'ಗಳ ಉದ್ದೇಶ ಸಾಧಿಸಿದಂತಾಗಿದೆ. ಆದುದರಿಂದ 'ಸರ್ಕಾರೇತರ ಸಂಸ್ಥೆ'ಗಳು ಜನ ಪರವಾಗಿವೆಯೆಂದು ಹೇಳಬಹುದು. ಅದರಲ್ಲಿಯೂ ಕೆಳವರ್ಗದವರನ್ನು ತಲುಪಲು ಯತ್ನಿಸುತ್ತಿರುವುದು ಸ್ಪಷ್ಟ.

**೫.೬ ವೈವಾಹಿಕ ಸ್ಥಾನಮಾನ:**

ಎಡ್ವರ್ಡ್ ವೆಸ್ಟರ್ ಮಾರ್ಕ್ (೧೯೨೪) ರವರ ಅಭಿಪ್ರಾಯದಂತೆ ಮಕ್ಕಳನ್ನು ಹೊಂದುವ ಕ್ರಿಯೆನ್ನು ಮೀರಿ ಗಂಡು–ಹೆಣ್ಣಿನ ಮಧ್ಯೆ ಅಧಿಕಾರಿಕ ಸಂಬಂಧವನ್ನು ಬೆಸೆಯುವುದೇ ವಿವಾಹ. ಇದೊಂದು ಸಾಮಾಜಿಕ ಬಂಧನ. ಸಂಪ್ರದಾಯ ಪದ್ಧತಿ ಮತ್ತು ಕಾನೂನುಗಳಿಂದ ನಿಯಂತ್ರಿತವಾಗಿದೆ. ಕೋಷ್ಠಕ ೫.೬ ವು ಪ್ರತಿಸ್ಪಂದಿಗಳ ವೈವಾಹಿಕ ಸ್ಥಿತಿಯನ್ನು ಸೂಚಿಸುತ್ತದೆ.

***ಕೋಷ್ಠಕ – ೫.೬. ಪ್ರತಿಸ್ಪಂದಿಗಳ ವೈವಾಹಿಕ ಸ್ಥಿತಿ.***

| ವೈವಾಹಿಕ ಸ್ಥಿತಿ | ಸಂಖ್ಯೆ | ಶೇಕಡಾ |
|---|---|---|
| ವಿವಾಹಿತ | ೪೩೫ | ೮೭.೦ |
| ವಿಧವೆ/ವಿಧುರ | ೩೫ | ೭.೦ |
| ವಿಚ್ಛೇದಿತ | ೩೦ | ೬.೦ |
| **ಒಟ್ಟು** | **೫೦೦** | **೧೦೦** |

ಒಟ್ಟು ಪ್ರತಿಸ್ಪಂದಿಗಳಲ್ಲಿ ಬಹಳಷ್ಟು ಜನರು ವಿವಾಹಿತರಾಗಿದ್ದು ಅವರಲ್ಲಿ ಗರಿಷ್ಠ ೪೩೫ ಪ್ರತಿಸ್ಪಂದಿಗಳು (ಶೇ. ೮೭.೦) ವೈವಾಹಿಕ ಜೀವನ ನಡೆಸುತ್ತಿರುವ ದಂಪತಿಗಳು, ೩೫ ಪ್ರತಿಸ್ಪಂದಿಗಳು (ಶೇ. ೭) ವಿಧವೆಯರು/ವಿಧುರರು. ಮತ್ತು ೩೦ ಪ್ರತಿಸ್ಪಂದಿಗಳು (ಶೇ. ೬) ವಿಚ್ಛೇದಿತರು. ವಿವಾಹಿತ ಮಹಿಳೆಯರೇ 'ಸರ್ಕಾರೇತರ ಸಂಸ್ಥೆ'ಗಳ ಸೇವೆಯನ್ನು ಗರಿಷ್ಠ ಪ್ರಮಾಣದಲ್ಲಿ ಪಡೆಯುತ್ತಿದ್ದಾರೆ.

**೫.೭ ಕುಟುಂಬ ರೀತಿ :**

ಮನೆಯ ಜೀವನದ ಚಟುವಟಿಕೆಗಳ ಸಾಂಪ್ರದಾಯಿಕ ಕೇಂದ್ರ. ಅದು ನಮ್ಮ ವ್ಯಕ್ತಿತ್ವಕ್ಕೆ ರೂಪ ಮತ್ತು ಪ್ರೇರಣೆ–ಪ್ರೋತ್ಸಾಹ ನೀಡುವ ಮೂಲ ನೆಲೆ. ಜೀವನದ ಏಳು–ಬೀಳು, ಸಾಫಲ್ಯ–ವೈಫಲ್ಯಗಳ

ಕಮ್ಮಟ. ಕುಟುಂಬ ವ್ಯವಸ್ಥೆ ಅಭಿವೃದ್ಧಿಯ ಸ್ಥಿತಿ-ಗತಿಯನ್ನು ನಿರ್ಧರಿಸುತ್ತದೆ. ಕುಟುಂಬದಲ್ಲಿನ ಜನರ ಸಂಖ್ಯೆಯು ಹೆಚ್ಚಾಗಿದ್ದರೆ, ಅವರ ಆರೋಗ್ಯದೆಡೆಗಿನ ಕಾಳಜಿ ಕಡಿಮೆಯಾಗಿರುತ್ತದೆ. ಅವೆರಡರ ಮಧ್ಯೆ ತದ್ವಿರುದ್ಧದ ಸಂಬಂಧ ಏರ್ಪಟ್ಟಿರುತ್ತದೆ. ದೊಡ್ಡ ಕುಟುಂಬದ ಅನಾನುಕೂಲತೆಗಳು ಮತ್ತು ಸಮಸ್ಯೆಗಳ ಕುರಿತಾಗಿ ಪಾರ್ಕ್ (೧೯೮೩)ರವರು ತಮ್ಮ ಲೇಖನವೊಂದರಲ್ಲಿ 'ಹಿಂದುಳಿವಿಕೆ, ಬಡತನ, ಅನಾರೋಗ್ಯ, ವೈವಾಹಿಕ ಅಸ್ಥಿರತೆ, ಗುಣಗಳಲ್ಲಿ ಒರಟತೆ, ಹೊಂದಾಣಿಕೆ ರಹಿತ ಕುಟುಂಬ, ವೈಯಕ್ತಿಕತೆ ಖಾಸಗಿ ಜೀವನಕ್ಕೆ ಭಂಗ ಮುಂತಾದವುಗಳು ದೊಡ್ಡ ಕುಟುಂಬದಿಂದ ಉಂಟಾಗುವ ಸಮಸ್ಯೆಗಳೆಂದು' ಅಭಿಪ್ರಾಯಿಸಿದ್ದಾರೆ. ಅದಕ್ಕಾಗಿಯೇ ಈ ಅಧ್ಯಯನಕ್ಕೆ ಪ್ರತಿಸ್ಪಂದಿಗಳ ಕುಟುಂಬದ ವಿಷಯ ಸಂಗ್ರಹಿಸಲಾಗಿದೆ. ಅದನ್ನು ಕೋಷ್ಟಕ ೫.೭ ರಲ್ಲಿ ನೀಡಲಾಗಿದೆ.

***ಕೋಷ್ಟಕ – ೫.೭ : ಪ್ರತಿಸ್ಪಂದಿಗಳ ಕುಟುಂಬ ವ್ಯವಸ್ಥೆ.***

| ರೀತಿ | ಸಂಖ್ಯೆ | ಶೇಕಡಾ |
|---|---|---|
| (ವಿಭಜಿತ) ವಿಭಕ್ತ ಕುಟುಂಬ | ೩೮೨ | ೭೬.೪ |
| (ಅವಿಭಜಿತ) ಅವಿಭಕ್ತ ಕುಟುಂಬ | ೧೧೮ | ೨೩.೬ |
| ಒಟ್ಟು | ೫೦೦ | ೧೦೦ |

ಕೋಷ್ಟಕದ ಪ್ರಕಾರ ಅತೀ ಹೆಚ್ಚಿನ (೩೮೨) ಪ್ರತಿಸ್ಪಂದಿಗಳು (ಶೇ.೭೬.೪) ವಿಭಕ್ತ ಕುಟುಂಬಗಳನ್ನು ಹೊಂದಿದ್ದಾರೆಂದೂ, ನಾಲ್ಕರಲ್ಲಿ ಒಂದಂಶದಷ್ಟು (೧೧೮) ಪ್ರತಿಸ್ಪಂದಿಗಳು (ಶೇ.೨೩.೬) ಅವಿಭಜಿತ ಕುಟುಂಬ ವ್ಯವಸ್ಥೆಯಲ್ಲಿ ಏಕತ್ರವಾಗಿ ಜೀವನ ಹೊಂದಿದ್ದಾರೆ ಎಂದೂ ತಿಳಿಯುತ್ತದೆ.

ಹೀಗಾಗಿ, ಗರಿಷ್ಠ ಪ್ರಮಾಣದ ಜನತೆ ಇಂದಿನ ದಿನಗಳಲ್ಲಿ ಚಿಕ್ಕ ಕುಟುಂಬ ವ್ಯವಸ್ಥೆ ಹೊಂದ ಬಯಸುತ್ತಿರುವದು ಸ್ಪಷ್ಟವಾಗುತ್ತದೆ. ಭಾರತವು ಗ್ರಾಮೀಣ-ಕೃಷಿಯಾಧಾರಿತ ದೇಶವಾಗಿದ್ದರೂ ಸಹ, ಕೌಟುಂಬಿಕ ವಿಭಜನೆ ಇಲ್ಲಿ ಕಂಡುಬರುತ್ತದೆ. ಇಲ್ಲಿನ ಅವಿಭಕ್ತ ಕುಟುಂಬದ ಪ್ರತಿಸ್ಪಂದಿಗಳು ಗ್ರಾಮೀಣ ಭಾಗದವರಲ್ಲಿ ಹೆಚ್ಚು ಕಂಡುಬರುತ್ತಾರೆ. ಪಟ್ಟಣಗಳಲ್ಲಿ ಹೆಚ್ಚಾಗಿ ಚಿಕ್ಕ ಕುಟುಂಬಗಳೇ ಇರುವದು ಸಾಮಾನ್ಯ.

**೫.೮ ವೃತ್ತಿ:**

ಸಾಮಾಜಿಕವರ್ಗೀಕರಣವು ಉದ್ಯೋಗದ ಮೇಲೆ ಅವಲಂಬಿತವಾಗಿದೆ. ಕುಟುಂಬದ ಸದಸ್ಯರ ಜೀವನ ಮಟ್ಟ ಅವರು ತೊಡಗಿರುವ ಉದ್ಯೋಗವನ್ನು ಅವಲಂಬಿಸಿದೆ. ಕುಟುಂಬದ ಗಳಿಕೆಯು ಉದ್ಯೋಗದೊಂದಿಗೆ ನೇರ ಸಂಬಂಧ ಹೊಂದಿದೆ. ಅಲ್ಲದೆ, ಜನರ ಅಭಿವೃದ್ಧಿಯ ಸೇವೆಗಳ ಬಳಕೆಗಳು ಕುಟುಂಬದ ಆದಾಯದ ಮೇಲೆ ನೇರ ಪರಿಣಾಮ ಬೀರುತ್ತವೆ.

ಭಾರತೀಯರಲ್ಲಿ ಇನ್ನೂ ಅತ್ಯಧಿಕ ಜನಸಂಖ್ಯೆಯು ಕೃಷಿ ಚಟುವಟಿಕೆಗಳನ್ನೇ ಅವಲಂಬಿಸಿದೆ. ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಗಳಲ್ಲಿ ಮತ್ತು ಪ್ರತಿಸ್ಪಂದಿಗಳಲ್ಲಿಯೂ ಹೆಚ್ಚಿನ ಜನರು ಕೃಷಿಕರು. ವೃತ್ತಿ ಸಂಬಂಧಿತ ಮಾಹಿತಿಯು ಕೋಷ್ಟಕ ೫.೮ ರಲ್ಲಿ ತೋರಿಸಿದಂತೆ ಇರುತ್ತವೆ.

***ಕೋಷ್ಟಕ – ೫.೮ : ಪ್ರತಿಸ್ಪಂದಿಗಳ ಉದ್ಯೋಗ.***

| ಉದ್ಯೋಗ | ಸಂಖ್ಯೆ | ಶೇಕಡಾ |
|---|---|---|
| ಬೇಸಾಯ | ೨೨೯ | ೪೫.೮ |
| ಕೃಷಿ ಕೂಲಿಗಳು | ೭೨ | ೧೪.೪ |
| ಕೃಷಿಯೇತರ ಕೂಲಿಗಳು | ೧೩೨ | ೨೬.೪ |
| ವ್ಯವಹಾರ | ೩೧ | ೬.೨ |
| ಸೇವಾಕ್ಷೇತ್ರ | ೩೬ | ೭.೨ |
| **ಒಟ್ಟು** | **೫೦೦** | **೧೦೦** |

ಈ ಕೋಷ್ಟಕವು ಸ್ಪಷ್ಟಗೊಳಿಸುವದೇನೆಂದರೆ, ಒಟ್ಟು ಪ್ರತಿಸ್ಪಂದಿಗಳಲ್ಲಿ ಹೆಚ್ಚಿನವರು ೨೨೯ (ಶೇ. ೪೫.೮) ಕೃಷಿಕರು. ೧೩೨ (ಶೇ. ೨೬.೪)ರಷ್ಟು ಕೃಷಿಯೇತರ ಕೂಲಿಗಳು. ೭೨ (ಶೇ. ೧೪.೪) ಕೃಷಿ ಕೂಲಿಗಳಾಗಿ, ೩೬ (ಶೇ. ೭.೨) ಒಂದಿಲ್ಲೊಂದು ತರಹದ ಸೇವಾಕ್ಷೇತ್ರದಲ್ಲಿ ತೊಡಗಿದವರು ಮತ್ತು ಕೇವಲ ೩೧ ಪ್ರತಿಸ್ಪಂದಿಗಳಲ್ಲಿ (ಶೇ,೬.೨)ಮಾತ್ರ ಉದ್ದಿಮೆ–ವಾಣಿಜ್ಯ ವೃತ್ತಿಯಲ್ಲಿದ್ದಾರೆ.

ಆರೋಗ್ಯದ ಬಗ್ಗೆ ಹೆಚ್ಚು ಕಾಳಜಿವಹಿಸುವ ಜನಸಂಖ್ಯೆ ಹೆಚ್ಚಾಗಿ ವ್ಯವಹಾರ ಮತ್ತು ಸೇವಾ ಕ್ಷೇತ್ರದಲ್ಲಿ ತೊಡಗಿದವರಾಗಿರುತ್ತಾರೆ. ಆದ್ದರಿಂದ ಸರ್ಕಾರೇತರ ಸಂಸ್ಥೆಗಳಿಂದ ಸೇವೆ ಆಪೇಕ್ಷಿಸಿದ ಪ್ರತಿಸ್ಪಂದಿಗಳಲ್ಲಿ ಅವರು ಕಡಿಮೆಯಾಗಿದ್ದಾರೆ. ೬೭ (ಶೇ. ೧೩.೪) ಇನ್ನುಳಿದ ವೃತ್ತಿಗಳ ಜನರಲ್ಲಿ–ಸ್ವಚ್ಛತೆಯ ಜಾಗೃತಿ ಕಡಿಮೆಯಾಗಿದ್ದು ರೋಗಗಳಿಗೆ ತುತ್ತಾಗುವವರ ಸಂಖ್ಯೆಯು ಅಧಿಕವಾಗಿರುತ್ತದೆ. ಹಾಗೆಯೇ ಅವರು 'ಸರ್ಕಾರೇತರ ಸಂಸ್ಥೆ'ಗಳಿಂದ ಸೇವೆಯನ್ನು ಪಡೆಯ ಬಯಸುತ್ತಾರೆ.

**೫.೯ ಪ್ರತಿಸ್ಪಂದಿಗಳು ಹೊಂದಿದ ಜಮೀನು :**

ಕೃಷಿ ಭೂಮಿ ಕೇವಲ ಒಂದು ಉತ್ಪಾದನೆಯ ಆರ್ಥಿಕ ಅಂಶ ಅಷ್ಟೇ ಅಲ್ಲದೆ, ಗ್ರಾಮೀಣ ಸಮುದಾಯದ ಜನರ ಸಾಮಾಜಿಕ–ಆರ್ಥಿಕ ಸ್ಥಿತಿಗತಿಯ ಮೇಲೆ ನೇರ ಪ್ರಭಾವ ಬೀರುವ ಸಾಮಾಜಿಕ ಅಂಶವೂ ಆಗಿದೆ. ಗ್ರಾಮೀಣ ಜನತೆಯಲ್ಲಿ ಭೂಮಿ ಮುಖ್ಯವಾದ ಆಸ್ತಿಯಾಗಿದೆ. ಅದು ಅನೇಕರಿಗೆ ಉದ್ಯೋಗ ನೀಡುತ್ತದೆ. ಜಮೀನು ರಹಿತರಿಗೆ ಕೂಲಿಯ ಕೆಲಸ ನೀಡುತ್ತದೆ. ಅಧಿಕ

ಜಮೀನು ಹೊಂದಿದವರು ಹೆಚ್ಚಿನ ಆದಾಯಗಳಿಸುವುದು ಸಹಜ. ಪ್ರತಿಸ್ಪಂದಿಗಳಲ್ಲಿ ಯಾರು ಎಷ್ಟು ಜಮೀನು ಹೊಂದಿದ್ದಾರೆಂದು ಸಂಗ್ರಹಿಸಿದ ಮಾಹಿತಿಯನ್ನು ಕೋಷ್ಟಕ ೫.೯ ರಲ್ಲಿ ನೀಡಲಾಗಿದೆ.

***ಕೋಷ್ಟಕ – ೫.೯ : ಪ್ರತಿಸ್ಪಂದಿಗಳು ಹೊಂದಿದ ಜಮೀನು***

| ಜಮೀನು (ಎಕರೆಗಳಲ್ಲಿ) | ಸಂಖ್ಯೆ | ಶೇಕಡಾ |
|---|---|---|
| ೧–೩ | ೯೨ | ೧೮.೪ |
| ೪–೬ | ೩೨ | ೬.೪ |
| ೭–೧೦ ಕ್ಕಿಂತ ಹೆಚ್ಚು | ೧೫ | ೩.೦ |
| ಆಮೀನು ರಹಿತರು | ೩೫೮ | ೭೧.೬ |
| **ಒಟ್ಟು** | **೫೦೦** | **೧೦೦** |

ಇದರ ಪ್ರಕಾರ, ಜಮೀನು ಹೊಂದಿದವರು ಕೇವಲ ೧೪೨ ಮಾಹಿತಿದಾರರಿದ್ದಾರೆ (ಶೇ. ೨೮.೬). ಜಮೀನು ರಹಿತರು ೩೫೮ (ಶೇ. ೭೧.೬)ರಷ್ಟಿದ್ದಾರೆ. ಜಮೀನು ಹೊಂದಿದವರಲ್ಲಿ ಹೆಚ್ಚಿನ ಜಮೀನು (೧೦ ಎಕರೆಗಿಂತಲು ಹೆಚ್ಚಿಗೆ) ಹೊಂದಿದವರು ಕೇವಲ ೦೩ (ಶೇ. ೦.೬) ಪ್ರತಿಸ್ಪಂದಿಗಳು ಮಾತ್ರ ಇನ್ನುಳಿದವರಲ್ಲಿ ೭ ರಿಂದ ೧೦ ಎಕರೆಯಷ್ಟು ಭೂಹಿಡುವಳಿಯನ್ನು ೩೨ (ಶೇ. ೬.೪) ಮತ್ತು ಅತೀ ಕಡಿಮೆ, ೩ ಎಕರೆಗಿಂತಲೂ ಕಡಿಮೆ ಭೂಮಿ ಹೊಂದಿದವರೇ ಅಧಿಕವಾಗಿದ್ದು, ೯೨ (ಶೇ. ೧೮.೪) ಮಾಹಿತಿದಾರರಿದ್ದಾರೆ.

ಜಮೀನು ರಹಿತರಾಗಿರುವ ಜನರು ಕೃಷಿ ಕೂಲಿಗಳಿಗಾಗಿ, ರಸ್ತೆ, ಕಟ್ಟಡ ಕೆಲಸ, ಜಲ್ಲಿ ಒಡೆಯುವ ಮತ್ತು ಸಣ್ಣ–ಕಾರ್ಖಾನೆಗಳಲ್ಲಿ ಕೂಲಿಗಳಾಗಿ ಕೆಲಸ ಮಾಡುವವರಾಗಿದ್ದಾರೆ.

**೫.೧೦ ವಾರ್ಷಿಕ ಆದಾಯ :**

ಯಾವುದೇ ಒಂದು ಭಾಗದ ಅಭಿವೃದ್ಧಿಯು ಅದರ ವಾರ್ಷಿಕ ಆದಾಯದ ಮೇಲೆ ಅವಲಂಬಿತವಾಗಿದೆ. ಒಂದು ಕುಟುಂಬದ ಆದಾಯವು ಅವರ ವಿವಿಧ ಉತ್ಪನ್ನದ ಮೂಲಗಳನ್ನು ಅವಲಂಬಿಸಿರುತ್ತದೆ. ಸ್ವಂತ ಜಮೀನಿನ ಗಳಿಕೆ, ವೃತ್ತಿಯ ಸ್ವರೂಪ ಮತ್ತು ಕುಟುಂಬದ ಜನರಲ್ಲಿ ಎಷ್ಟು ಸದಸ್ಯರ ಉದ್ಯೋಗ ಮೊದಲಾ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಸಾಮಾಜಿಕ ಸ್ಥಿತಿ–ಗತಿಯ ನಿರ್ಧಾರದಲ್ಲಿ ಕುಟುಂಬದ ಆದಾಯವೇ ಪ್ರಮುಖ ಪಾತ್ರವಹಿಸುತ್ತದೆ. ಆದ್ದರಿಂದ, ಪ್ರತಿಸ್ಪಂದಿಗಳ ಕುಟುಂಬದ ಆದಾಯ ಮಾಹಿತಿ ಸಂಗ್ರಹಿಸಿದ್ದು, ಕೋಷ್ಟಕ ೫.೧೦ ರಲ್ಲಿ ಅದನ್ನು ಪ್ರದರ್ಶಿಸಲಾಗಿದೆ.

*ಕೋಷ್ಟಕ – ೫.೧೦ : ಪ್ರತಿಸ್ಪಂದಿಗಳ ಆದಾಯ ಮಟ್ಟ*

| ಆದಾಯ –ವಾರ್ಷಿಕ | ಸಂಖ್ಯೆ | ಶೇಕಡಾ |
|---|---|---|
| ರೂ ೧೦,೦೦೦ಕ್ಕಿಂತ ಕಡಿಮೆ | ೩೧೪ | ೬೨.೮ |
| ರೂ ೧೦೦೦೧–ರೂ ೧೯೯೯೯ | ೭೦ | ೧೪.೦ |
| ರೂ ೨೦,೦೦೦–ರೂ ೨೯೯೯೯ | ೪೩ | ೮.೬ |
| ರೂ ೩೦,೦೦೦–ರೂ ೩೯೯೯೯ | ೨೦ | ೪.೦ |
| ರೂ ೪೦,೦೦೦–ರೂ ೪೯೯೯೯ | ೨೫ | ೫.೦ |
| ರೂ ೫೦,೦೦೦ ಕ್ಕಿಂತ ಹೆಚ್ಚು | ೨೮ | ೫.೬ |
| ಒಟ್ಟು | ೫೦೦ | ೧೦೦ |

ಸಮೀಕ್ಷೆಯಲ್ಲಿನ ಹೆಚ್ಚಿನ ಪ್ರತಿಸ್ಪಂದಿಗಳು ೩೧೪ (ಶೇ. ೬೨.೮) ಕಡಿಮೆ ಆದಾಯದ ಮಿತಿಯನ್ನು ಹೊಂದಿರುತ್ತಾರೆ. ವಾರ್ಷಿಕ ರೂ. ೧೦,೦೦೦ ರಿಂದ ರೂ. ೧೯,೯೯೯ ಗಳವರೆಗೆ ಆದಾಯ ಹೊಂದಿರುವರು ಕೇವಲ ೭೦ (ಶೇ. ೧೪). ರೂ. ೨೦,೦೦೦ ರಿಂದ ೨೯೯೯೯ ರ ವರೆಗೆ ೪೩ (ಶೇ. ೮.೬). ರೂ. ೩೦,೦೦೦ ರಿಂದ ೩೯,೯೯೯ ರ ವರೆಗೆ ಕೇವಲ ೨೦ ಪ್ರತಿಸ್ಪಂದಿಗಳು (ಶೇ. ೪.೦). ರೂ. ೪೦,೦೦೦ ರಿಂದ ೪೯,೯೯೯ ರ ವರೆಗಿನ ಆದಾಯದ ಮಟ್ಟದಲ್ಲಿ ೨೫ (ಶೇ. ೫) ಮಾಹಿತಿದಾರರಿದ್ದಾರೆ.

ಮುಖ್ಯವಾದ ಅಂಶವೆಂದರೆ, ಅರ್ಧಕ್ಕಿಂತ ಹೆಚ್ಚು ಪ್ರತಿಸ್ಪಂದಿಗಳು ರೂ. ೧೦,೦೦೦ ಕ್ಕಿಂತ ಕಡಿಮೆ ಆದಾಯಹೊಂದಿದ್ದು ಬಡವರ ವರ್ಗಕ್ಕೆ ಸೇರಿದವರಾಗಿದ್ದಾರೆ, ಹೀಗಾಗಿ ಅವರು ಸಾದಾ–ಮನೆಗಳಲ್ಲಿ ವಾಸಿಸುತ್ತಾರೆ. ಸರ್ಕಾರೇತರ ಸಂಸ್ಥೆಗಳು ಇವರ ಅಭಿವೃದ್ಧಿಗೆ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿವೆ.

**೫.೧೧ ವಾಸಸ್ಥಾನ ನಮೂನೆ :**

ಮನೆ ಅಥವಾ ನೆಲೆ ಮನುಷ್ಯನ ಮೂಲಭೂತ ಸೌಲಭ್ಯಗಳಲ್ಲೊಂದು. ಅವನ ಅಭಿವೃದ್ಧಿಯ ಮೌಲ್ಯಮಾಪನದಲ್ಲಿ ನೆಲೆಯ ಸ್ವರೂಪವನ್ನು ಮಾನದಂಡವಾಗುವುದು.

ಹಳ್ಳಿಗಳಲ್ಲಿ ಸಾಮಾನ್ಯವಾಗಿ ಮನೆಗಳನ್ನು ಮಣ್ಣು, ಬಿದಿರು, ಹುಲ್ಲು ಮತ್ತು ಮಣ್ಣಿನ ಹೆಂಚುಗಳನ್ನು ಉಪಯೋಗಿಸಿ (ಕಚ್ಚಾ–ರೀತಿಯ) ವಾಸದ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಆದರೂ ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಭಾಗದಲ್ಲೂ ಸಹ ನಗರೀಕರಣ ಮತ್ತು ಜಾಗತೀಕರಣದ ಪರಿಣಾಮದ ಫಲವಾಗಿ ಜನರು ತಮ್ಮ ಮನೆಗಳನ್ನು ನವೀಕರಿಸುತ್ತಿರುವದನ್ನು ಕಾಣಬಹುದು.

ಅಧ್ಯಯನದಲ್ಲಿ ವಿಶ್ಲೇಷಣೆಯ ಅನುಕೂಲತೆಗಾಗಿ ವಾಸ-ಸ್ಥಾನಗಳಲ್ಲಿ ಮೂರು ವಿಧಗಳನ್ನು ಮಾಡಲಾಗಿದೆ. ೧. ಕಚ್ಚಾ ಮನೆಗಳು ೨. ಭಾಗಶಃ ಮನೆಗಳು ೩. ಪಕ್ಕಾಮನೆಗಳು, ಭಾಗಶಃ ಕಚ್ಚಾ ಮನೆಗಳು-ಕೆಸರು, ಮಣ್ಣು, ಕಲ್ಲು, ಇಟ್ಟಿಗೆಗಳಿಂದ ನಿರ್ಮಿಸಿದ ಸಾಮಾನ್ಯ ದರ್ಜೆಯ ಮನೆಗಳು. ಪೂರ್ಣವಾಗಿ ಕಚ್ಚಾ-ಕೇವಲ ಮಣ್ಣು ಮತ್ತು ಒಣ ಹುಲ್ಲಿನಿಂದ ಹೊದಿಸಿದ ಮನೆಗಳೆಂದು ವಿಂಗಡಿಸಲಾಗಿದೆ. ಇದರ ವಿವರ ಕೋಷ್ಟಕ ೫.೧೧ ರಲ್ಲಿ ನೀಡಿದಂತೆ ಇದೆ.

***ಕೋಷ್ಟಕ – ೫.೧೧ : ಪ್ರತಿಸ್ಪಂದಿಗಳ ವಾಸ-ಸ್ಥಾನ***

| **ಮನೆ-ವಿಧ** | **ಸಂಖ್ಯೆ** | **ಶೇ** |
|---|---|---|
| ಕಚ್ಚಾಮನೆ | ೧೧೨ | ೨೨.೪ |
| ಭಾಗಶಃ ಕಚ್ಚಾ | ೩೫೬ | ೭೧.೨ |
| ಪಕ್ಕಾಮನೆ | ೩೨ | ೬.೪ |
| **ಒಟ್ಟು** | **೫೦೦** | **೧೦೦** |

ಇದರಿಂದ ಸ್ಪಷ್ಟವಾಗಿ ಗೋಚರಿಸುವದೇನೆಂದರೆ ಅತ್ಯಧಿಕ ಸಂಖ್ಯೆಯ ಪ್ರತಿಸ್ಪಂದಿಗಳು ಕಚ್ಚಾ ಮನೆ ಮತ್ತು ಭಾಗಶಃ ಕಚ್ಚಾಮನೆಗಳಲ್ಲಿ ಸ್ಥಿತಿಯಲ್ಲಿ ವಾಸಿಸುತ್ತಿದ್ದಾರೆ.

**೫.೧೨ ಕುಟುಂಬದ ಗಾತ್ರ :**

ಕುಟುಂಬದ ಜನರ ಸಂಖ್ಯೆ, ಅವರ ವಯಸ್ಸು, ಶೈಕ್ಷಣಿಕ ಅರ್ಹತೆ, ಉದ್ದೋಗಗಳು ಆ ಕುಟುಂಬದ ಒಟ್ಟು ಆದಾಯವನ್ನು ನಿರ್ಧರಿಸುತ್ತವೆ. ಏಕೆಂದರೆ ಕಡಿಮೆ ಜನರು ಇದ್ದಲ್ಲಿ ಉದ್ಯೋಗದ ಅವಕಾಶಗಳು ಹೆಚ್ಚಿರುತ್ತವೆ. ಕುಟುಂಬದಲ್ಲಿ ಜನರ ಸಂಖ್ಯೆ ಹೆಚ್ಚಾದಂತೆ ಅಶಿಸ್ತು ಅಲಸ್ಯ ಹೆಚ್ಚಾಗುವ ಲಕ್ಷಣಗಳು ಕಂಡುಬಂದು ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗುವದು. ದೊಡ್ಡ ಕುಟುಂಬದವರು ಸರ್ಕಾರೇತರ ಸಂಸ್ಥೆಗಳ ಸೇವೆಯನ್ನು ಅವಲಂಬಿಸಿರುವ ಸಾಧ್ಯತೆ ಹೆಚ್ಚು.

***ಕೋಷ್ಟಕ – ೫.೧೨ : ಕುಟುಂಬದ ಗಾತ್ರ***

| **ಸದಸ್ಯರ ಸಂಖ್ಯೆ** | **ಸಂಖ್ಯೆ** | **ಶೇಕಡಾ** |
|---|---|---|
| ೧-೪ | ೯೬ | ೧೯.೨ |
| ೫-೮ | ೩೫೬ | ೭೧.೨ |
| ೯ಕ್ಕಿಂತ ಹೆಚ್ಚು | ೪೮ | ೯.೬ |
| **ಒಟ್ಟು** | **೫೦೦** | **೧೦೦** |

ಕೋಷ್ಟಕದಿಂದ ತಿಳಿದುಕೊಳ್ಳಬಹುದೇನೆಂದರೆ, ಗರಿಷ್ಠ ಸಂಖ್ಯೆಯ ೩೫೬ (ಶೇ,೭೧.೨) ಪ್ರತಿಸ್ಪಂದಿಗಳು ೫ ರಿಂದ ೮ ಜನರ ಒಟ್ಟಿಗೆ ವಾಸಿಸುತ್ತಿದ್ದು, ಸದ್ಯದ ಸ್ಥಿತಿಯಲ್ಲಿ ಕುಟುಂಬದ ಈ

ಗಾತ್ರವು ಅಧಿಕವೆನಿಸುತ್ತದೆ. ಇದಕ್ಕಿಂತ ಹೆಚ್ಚಿನ ಸದಸ್ಯರು, ಅಂದರೆ ೯ ಕ್ಕಿಂತ ಹೆಚ್ಚು ಸದಸ್ಯರೆಲ್ಲ ಸೇರಿ ಒಂದೆಡೆ ವಾಸಿಸುವ ಕುಟುಂಬಗಳ ಸಂಖ್ಯೆ ೪೮ (ಶೇ. ೯.೬) ಆಗಿದ್ದು, ಇದು ರಾಜ್ಯದಲ್ಲಿಯಲ್ಲಿ ಕುಟುಂಬದ ವ್ಯವಸ್ಥೆಗೆ ಅನ್ವಯಿಸಿದರೆ (ಶೇ. ೧೦ ರಷ್ಟು ಕುಟುಂಬಗಳು) ಅಧಿಕವೇ ಆಗುತ್ತದೆ. ಇದು ಅಭಿವೃದ್ಧಿಯ ದೃಷ್ಟಿಯಿಂದ ಒಳ್ಳೆಯ ಸೂಚನೆ ಅಲ್ಲ. 'ಚಿಕ್ಕ-ಕುಟುಂಬ ಚೊಕ್ಕ ಕುಟುಂಬ' ಎನ್ನುವ ಮಾತಿಗೆ ಸೂಕ್ತವಾಗಿ ಕೇವಲ ೯೬ (ಶೇ, ೧೯.೨) ಪ್ರತಿಸ್ಪಂದಿಗಳು ಮಾತ್ರ ವಾಸಿಸುತ್ತಿರುವದು, ಇನ್ನೂ ಇತ್ತಕಡೆಗೆ ಗಮನಹರಿಸಬೇಕೆಂಬ ಅಂಶವನ್ನು ಸೂಚಿಸುತ್ತದೆ.

**೫.೧೩ ಶೌಚಾಲಯ ವ್ಯವಸ್ಥೆ :**

ಆರೋಗ್ಯ ಹಾಗೂ ಶೌಚಾಲಯ ವ್ಯವಸ್ಥೆಯ ಮಧ್ಯೆ ನೇರ ಸಂಬಂಧವಿದ್ದು, ಶೌಚವು ಜನರ ಆರೋಗ್ಯ ಸ್ಥಿತಿ ನಿರ್ಧಾರದಲ್ಲಿ ಮಹತ್ವದ ಅಂಶವಾಗಿದೆ. ಶೌಚಾಲಯ ವ್ಯವಸ್ಥೆಯನ್ನು ಹೊಂದಿರುವ ಕಡೆ ಆರೋಗ್ಯ ಸುಸ್ಥಿತಿಯಲ್ಲಿರುವ ಸಾಧ್ಯತೆ ಹೆಚ್ಚು. ಸಾರ್ವಜನಿಕರ ಆರೋಗ್ಯ ಕಾಳಜಿಯಲ್ಲಿ ಸಾರ್ವಜನಿಕ ಶೌಚಾಲಯದ ವ್ಯವಸ್ಥೆ (ಸೌಲಭ್ಯವೆ) ಪ್ರಮುಖ ಅಂಶವಾಗಿದೆ. 'ಶೌಚಾಲಯ'ದ ಬಳಕೆಯ ಕುರಿತು ಸಾಕಷ್ಟು ಅರಿವು ಇರದ ಕಾರಣಕ್ಕಾಗಿ ಜನರು ಅವುಗಳನ್ನು ಬಳಸುತ್ತಿಲ್ಲ ಅಥವಾ ಅಸಮರ್ಪಕ ರೀತಿಯಲ್ಲಿ ಬಳಸುತ್ತಿದ್ದಾರೆ. ಒಂದು ಸಮೀಕ್ಷೆಯ ಪ್ರಕಾರ ಈ ಶೌಚಾಲಯಗಳನ್ನು ಹೇಗೆ ಬಳಸಬೇಕೆಂಬುದರ ಬಗ್ಗೆ ಅರಿವಿನ ಕೊರತೆ ಎದ್ದು ಕಾಣುತ್ತದೆ. ಸಂಬಂಧಿಸಿದ ಮಾಹಿತಿಯನ್ನು ಕೆಳಗಿನ ಕೋಷ್ಟಕ ೫.೧೩ ರಲ್ಲಿ ನೀಡಲಾಗಿದೆ.

*ಕೋಷ್ಟಕ – ೫.೧೩ : ಶೌಚಾಲಯ ಸೌಲಭ್ಯ*

| ಸೌಲಭ್ಯ | ಸಂಖ್ಯೆ | ಶೇಕಡಾ |
|---|---|---|
| ಮನೆಗಳಲ್ಲಿದ್ದುದು | ೫೦ | ೧೦.೦ |
| ಸಾರ್ವಜನಿಕ | ೬೮ | ೧೩.೬ |
| ಬಯಲು ಶೌಚ ವ್ಯವಸ್ಥೆ | ೩೮೨ | ೭೬.೪ |
| **ಒಟ್ಟು** | **೫೦೦** | **೧೦೦** |

ಈ ಮೇಲಿನ ಕೋಷ್ಟಕದ ಪ್ರಕಾರ, ಅಧಿಕ ಸಂಖ್ಯೆಯ ಜನರು ಶೌಚಾಲಯದ ಸೌಲಭ್ಯವನ್ನು ಹೊಂದಿರುವದಿಲ್ಲ. ಈ ಸಮೀಕ್ಷೆಯ ಒಟ್ಟು ಪ್ರತಿಸ್ಪಂದಿಗಳು ೩೮೨ (ಶೇ. ೭೬.೪) ಶೌಚಕ್ಕೆ ಬಯಲಿಗೆ ಹೋಗುತ್ತಾರೆ. ಇನ್ನುಳಿದ ಕೇವಲ ಶೇ. ೨೩.೬ ರಷ್ಟು ಶೌಚಾಲಯದ ಬಳಕೆ ಮಾಡುತ್ತಿದ್ದು, ಅವರಲ್ಲಿ ಕೇವಲ ಶೇ. ೧೦ ರಷ್ಟು ಪ್ರತಿಸ್ಪಂದಿಗಳು ಮಾತ್ರ ತಮ್ಮ ಮನೆಗಳಲ್ಲಿ ಶೌಚಾಲಯಗಳನ್ನು ನಿರ್ಮಿಸಿಕೊಂಡಿರುವರು. ಶೇ. ೧೩.೬ ರಷ್ಟು ಜನತೆ ಸಾರ್ವಜನಿಕ ಶೌಚಾಲಯಗಳನ್ನು ಅವಲಂಬಿಸಿದ್ದಾರೆ. ಅವುಗಳ ನಿರ್ವಹಣೆಯ ಬಗ್ಗೆ ಮಾತನಾಡದಿರುವುದೇ ಉತ್ತಮ.

**೫.೧೪ ಬೆಳಕಿನ ವ್ಯವಸ್ಥೆ :**

ಮಾನವರ ಎಲ್ಲ ಚಟುವಟಿಕೆಗಳಿಗೆ 'ಬೆಳಕು' ಅತ್ಯವಶ್ಯಕ. ಸಾಮಾಜಿಕ ಚಟುವಟಿಕೆಗಳಲ್ಲಿ ಮಹತ್ವದ ಪಾತ್ರ ಬೆಳಕಿನದು. ಸಮೀಕ್ಷೆಗೊಳಪಡಿಸಿದ ಪ್ರತಿಸ್ಪಂದಿಗಳು ತಮ್ಮ ಮನೆಗಳಲ್ಲಿ ಯಾವ ತರಹದ ಬೆಳಕಿನ ವ್ಯವಸ್ಥೆ ಮಾಡಿಕೊಂಡಿದ್ದಾರೆಂಬ ಮಾಹಿತಿಯನ್ನು ಸಂಗ್ರಹಿಸಲಾಗಿದೆ ಅದನ್ನು ಈ ಕೆಳಗಿನ ಕೋಷ್ಟಕ ೫.೧೪ ರಲ್ಲಿ ನೀಡಲಾಗಿದೆ.

***ಕೋಷ್ಟಕ – ೫.೧೪ : ಬೆಳಕಿನ ಮೂಲ***

| ಬೆಳಕಿನ ಸೌಕರ್ಯ | ಸಂಖ್ಯೆ | ಶೇಕಡಾ |
|---|---|---|
| ವಿದ್ಯುಚ್ಛಕ್ತಿ | ೪೫೮ | ೯೧.೬ |
| ಸೀಮೆ ಎಣ್ಣೆ | ೪೨ | ೮.೪ |
| **ಒಟ್ಟು** | **೫೦೦** | **೧೦೦** |

ಕೋಷ್ಟಕದಲ್ಲಿ ಕಂಡು ಬರುವಂತೆ, ಬಹುತೇಕ ಪ್ರತಿಸ್ಪಂದಿಗಳು ೪೫೮ (ಶೇ. ೯೧.೬) ವಿದ್ಯುತ್‌ಶಕ್ತಿಯ ವ್ಯವಸ್ಥೆ ಹೊಂದಿದ್ದಾರೆ. ಮತ್ತು ಇನ್ನುಳಿದ ಕೆಲವೇ ೪೨ (ಶೇ. ೮.೪) ಪ್ರತಿಸ್ಪಂದಿಗಳು ಇನ್ನು ಸೀಮೆ ಎಣ್ಣೆ ಮೂಲದಿಂದ ಬೆಳಕಿನ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಇದರಿಂದ ಕಂಡು ಬರುವ ಸಂಗತಿಯೆಂದರೆ, ಸರ್ಕಾರ ಅಧಿಕ ಸಂಖ್ಯೆಯ ಜನರಿಗೆ ವಿದ್ಯುತ್ ವ್ಯವಸ್ಥೆಯನ್ನು ಎಲ್ಲ ಪ್ರದೇಶಗಳಲ್ಲಿಯೂ ಮಾಡಿಕೊಟ್ಟಿದೆ.

**೫.೧೫ ನೀರಿನ–ವ್ಯವಸ್ಥೆ :**

ಅಖ್ತರ್(೨೦೦೨)ರವರು ಸೂಚಿಸಿದಂತೆ, ಸುರಕ್ಷಿತ ಕುಡಿಯುವ ನೀರಿನ ಅಲಭ್ಯತೆ ಮತ್ತು ಕೊರತೆಯು ನೀರಿನಿಂದ ಹರಡುವ ರೋಗಗಳಿಗೆ ಮುಖ್ಯಕಾರಣವಾಗಿದೆ. ಜಾಗತಿಕ ಆರೋಗ್ಯ ಸಂಘಟನೆಯ ಅಂಕಿ ಸಂಖ್ಯೆಯ ಪ್ರಕಾರ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಶೇ.೮೦ ರಷ್ಟು ರೋಗಗಳು ಅಶುದ್ಧ ಮತ್ತು ಕಡಿಮೆ ನೀರಿನ ಪೂರೈಕೆಯ ಕಾರಣದಿಂದಾಗಿರುತ್ತದೆ. ಮಾನವನ ಆರೋಗ್ಯದ ತಳಹದಿ ನೀರು. 'ಜೀವಿಸಿರಲು' ನೀರು ಬೇಕೇ ಬೇಕು. ಆದ್ದರಿಂದ ಅದನ್ನು ಮಾನವನ ಹಕ್ಕು ಎಂದು ಹೇಳುವದರಲ್ಲಿ ಉತ್ಪ್ರೇಕ್ಷೆಯೆನಿಸಲಾರದು.

ಸುರಕ್ಷಿತ ನೀರು ಮತ್ತು ನೈರ್ಮಲ್ಯೀಕರಣ ಇಲ್ಲದಿದ್ದರೆ, ಅದು ನೈಜ ಅಭಿವೃದ್ಧಿಯೇ ಅಲ್ಲ. ಸ್ವಚ್ಛ–ಶುದ್ಧ–ಸುರಕ್ಷಿತ ನೀರು ಆರೋಗ್ಯ ಜೀವನದ ಮುಖ್ಯದ್ವಾರ. ಜನರ ಆರೋಗ್ಯವು ಸಾಮಾಜಿಕ ಸಮಾನತೆ ಮತ್ತು ಮಾನವನ ಘನತೆಗೆ ಅವಶ್ಯಕ ಷರತ್ತು.

*ಕೋಷ್ಟಕ – ೫.೧೫ : ನೀರಿನ ಅವಲಂಬನೆ*

| ಮೂಲ | ಸಂಖ್ಯೆ | ಶೇಕಡಾ/ಪ್ರತಿಶತ |
|---|---|---|
| ಮನೆಗಳಲ್ಲಿ ನಲ್ಲಿ | ೧೯೨ | ೩೮.೪ |
| ಸಾರ್ವಜನಿಕ ನಲ್ಲಿ | ೧೫೮ | ೩೧.೬ |
| ಸಾರ್ವಜನಿಕ ಕೈ ಪಂಪು | ೯೨ | ೧೮.೪ |
| ಬಾವಿಯ ನೀರು | ೫೮ | ೧೧.೬ |
| ಒಟ್ಟು | ೫೦೦ | ೧೦೦ |

ಇದರಿಂದ ಸ್ಪಷ್ಟವಾಗಿ ಕಂಡುಬರುವ ಅಂಶವೆಂದರೆ ೧೯೨ (ಶೇ. ೩೮.೪) ಪ್ರತಿಸ್ಪಂದಿಗಳು ತಮ್ಮ–ತಮ್ಮ ಮನೆಗಳಲ್ಲಿ ಸ್ವಂತಕ್ಕಾಗಿ ನಲ್ಲಿ ನೀರಿನ ವ್ಯವಸ್ಥೆ ಹೊಂದಿದ್ದಾರೆ. ಅದರಂತೆ ಸಾರ್ವಜನಿಕ ನಲ್ಲಿ ನೀರನ್ನು ೧೫೮ (ಶೇ. ೩೧.೬) ಪ್ರತಿಸ್ಪಂದಿಗಳು ಅವಲಂಬಿಸಿದ್ದಾರೆ. ಇನ್ನು ೯೨ (ಶೇ. ೧೮.೪) ಜನರು ಸಾರ್ವಜನಿಕ ಕೈಪಂಪುಗಳನ್ನು ಬಳಸುತ್ತಿದ್ದರೆ, ಉಳಿದ ೫೮ (ಶೇ. ೧೧.೬) ಜನರು ತೆರೆದ ಬಾವಿಯ ನೀರನ್ನು ಉಪಯೋಗಿಸುತ್ತಿದ್ದಾರೆ.

ಅಧ್ಯಯನದ ಸಮೀಕ್ಷೆಯ ಕ್ಷೇತ್ರವು ಬೆಳಗಾವಿ ಜಿಲ್ಲೆಯ ಹತ್ತು ತಾಲೂಕಗಳನ್ನು ಒಳಗೊಂಡಿದ್ದು ಪ್ರತಿ ತಾಲೂಕುಗಳಿಂದಲೂ ಪ್ರತಿಸ್ಪಂದಿಗಳನ್ನು ಸಂಪರ್ಕಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾಹಿತಿಗಳನ್ನು ಸಂಗ್ರಹಿಸುವಾಗ ಅಧ್ಯಯನ ವ್ಯಾಪ್ತಿಯ ಸರ್ಕಾರೇತರ ಸಂಸ್ಥೆಗಳು ಕಾರ್ಯನಿರ್ವಹಿಸುವ ಕ್ಷೇತ್ರಗಳಿಗೆ ಹೆಚ್ಚು ಗಮನವನ್ನು ನೀಡಲಾಗಿದೆ.

ಹೀಗೆ ಪ್ರತಿಸ್ಪಂದಿಗಳ ಸಾಮಾಜಿಕ–ಆರ್ಥಿಕ ಹಿನ್ನೆಲೆಯನ್ನು ಅರಿತುಕೊಳ್ಳಲಾಯಿತು. ಅದರಿಂದ ತಿಳಿದುಬಂದ ಮುಖ್ಯ ಅಂಶಗಳೆಂದರೆ ಒಟ್ಟು ಪ್ರತಿಸ್ಪಂದಿಗಳ ಪೈಕಿ ಮಹಿಳಾ ಪ್ರತಿಸ್ಪಂದಿಗಳು ಅಧಿಕವಾಗಿದ್ದಾರೆ. ಅಲ್ಲದೆ, ಅವರು ಸರ್ಕಾರೇತರ ಸಂಸ್ಥೆಗಳ ಹೆಚ್ಚಿನ ಪ್ರಯೋಜನ ಪಡೆಯುತ್ತಿದ್ದಾರೆ. ಅದರಂತೆ ಅಧಿಕ ಸಂಖ್ಯೆಯ ಪ್ರತಿಸ್ಪಂದಿಗಳು ೨೧ ರಿಂದ ೪೦ ವರ್ಷದ ಗುಂಪಿಗೆ ಸೇರಿದವರಾಗಿದ್ದಾರೆ. ಬಹುತೇಕ ಜನ ಪ್ರಾಥಮಿಕ ಶಿಕ್ಷಣ ಹೊಂದಿದವರಾಗಿದ್ದಾರೆ. ಇನ್ನೊಂದು ಮುಖ್ಯವಾದ ಅಂಶವೆಂದರೆ ಅಧಿಕ ಸಂಖ್ಯೆಯ ಪ್ರತಿಸ್ಪಂದಿಗಳು ಹಿಂದು ಧರ್ಮಿಯರಾಗಿದ್ದು, ಮುಸ್ಲಿಂ ಮತ್ತು ಜೈನರು ಅಲ್ಪ ಸಂಖ್ಯೆಯಲ್ಲಿದ್ದಾರೆ. ಈ ಅಧ್ಯಯನದಲ್ಲಿ ಎಲ್ಲಾ ಜಾತಿಯ ಜನರನ್ನು ಪ್ರತಿನಿಧಿಸಿದ್ದು ಈ ಕ್ಷೇತ್ರದಲ್ಲಿನ ಪ್ರತಿಸ್ಪಂದಿಗಳಲ್ಲಿ ಕೆಳವರ್ಗದ ಜನರು ಅಧಿಕವಾಗಿದ್ದಾರೆ. ಅದರಂತೆ ಹೆಚ್ಚಿನ ಸಂಖ್ಯೆಯ ಪ್ರತಿಸ್ಪಂದಿಗಳಲ್ಲಿ ವಿವಾಹಿತರು, ಅವರಲ್ಲಿ ವಿವಾಹಿತ ಹೆಣ್ಣು ಮಕ್ಕಳು ಸರ್ಕಾರೇತರ ಸಂಸ್ಥೆಗಳು ನೀಡುವ ವಿವಿಧ ಸೌಕರ್ಯಗಳನ್ನು ಹೆಚ್ಚಿಗೆ ಬಳಸಿಕೊಳ್ಳುತ್ತಿದ್ದಾರೆ. ಕುಟುಂಬದ ಬಗ್ಗೆ ಹೇಳಬೇಕೆಂದರೆ ಅಧಿಕ ಸಂಖ್ಯೆಯ ಪ್ರತಿಸ್ಪಂದಿಗಳು ಮಧ್ಯಮ ಗಾತ್ರದ ಕುಟುಂಬಗಳನ್ನು ಹೊಂದಿದವರಾಗಿದ್ದಾರೆ.

ಸಮೀಕ್ಷಾ ಕ್ಷೇತ್ರದಲ್ಲಿನ ಪ್ರತಿಸ್ಪಂದಿಗಳಲ್ಲಿ ಭೂರಹಿತರು ಹೆಚ್ಚಿಗೆ ಇದ್ದು, ಅವರ ವಾರ್ಷಿಕ ವರಮಾನ ರೂ. ೧೦,೦೦೦ ಕ್ಕಿಂತ ಕಡಿಮೆ ಇದೆ. ಹೀಗಾಗಿ ಅಧಿಕ ಸಂಖ್ಯೆಯ ಜನರು ಭಾಗಶಃ ಕಚ್ಚಾ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಕೆಲವೇ ಜನರು ಹೆಚ್ಚಿನ ಆದಾಯ ಹೊಂದಿದವರು ಪಕ್ಕಾ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಇದರಂತೆ ಅಧಿಕ ಸಂಖ್ಯೆಯ ಪ್ರತಿಸ್ಪಂದಿಗಳು ತಮ್ಮ ಮನೆಗಳಲ್ಲಿ ಶೌಚಾಲಯ ಹೊಂದಿರುವುದಿಲ್ಲ.

**ಸರ್ಕಾರೇತರ ಸಂಸ್ಥೆಗಳ ಸಮೀಕ್ಷೆ – ವಿಶ್ಲೇಷಣೆ**

**೫.೧೬ ಸಮೀಕ್ಷೆಯ ಕ್ಷೇತ್ರದಲ್ಲಿ ಕಾರ್ಯಗೈಯ್ಯುವ ಸರ್ಕಾರೇತರ ಸಂಸ್ಥೆಗಳು :**

| ಸರ್ಕಾರೇತರ ಸಂಸ್ಥೆಗಳು | ಪ್ರತಿಸ್ಪಂದಿಗಳು | ಶೇಕಡಾ |
|---|---|---|
| ಯಾವುದು ಇಲ್ಲ | ೦ | ೦ |
| ೧–೫ | ೩೮೨ | ೭೬.೪ |
| ೬–೧೦ | ೧೦೨ | ೨೦.೪ |
| ೧೧ಕ್ಕಿಂತ ಅಧಿಕ | ೧೬ | ೩.೨ |
| **ಒಟ್ಟು** | **೫೦೦** | **೧೦೦** |

ಸಮೀಕ್ಷೆಯ ಕ್ಷೇತ್ರದಲ್ಲಿನ ಒಂದೊಂದು ಗ್ರಾಮದಲ್ಲಿ ಕಾರ್ಯಗೈಯ್ಯುತ್ತಿರುವ ಸರ್ಕಾರೇತರ ಸಂಸ್ಥೆಗಳ ಸಂಖ್ಯೆಯನ್ನು ಈ ಕೋಷ್ಟಕದಿಂದ ತಿಳಿದುಕೊಳ್ಳಬಹುದಾಗಿದೆ. ಇದರಿಂದ ತಿಳಿದುಬರುವದೇನೆಂದರೆ, 'ಸರ್ಕಾರೇತರ ಸಂಸ್ಥೆ'ಗಳು ಇಲ್ಲದ ಯಾವುದೊಂದು ಗ್ರಾಮ ಇಲ್ಲವೇ ಇಲ್ಲ. ಪ್ರತಿಯೊಂದು ಗ್ರಾಮದಲ್ಲಿ ಕನಿಷ್ಠ ಒಂದಾದರೂ 'ಸರ್ಕಾರೇತರ ಸಂಸ್ಥೆ' ಕಾರ್ಯಗೈಯ್ಯುತ್ತಿದೆ. ಆದ್ದರಿಂದ, ಒಂದೊಂದು ಗ್ರಾಮದಲ್ಲಿ ಒಂದರಿಂದ ಐದರವರೆಗೆ ಕಾರ್ಯಗೈಯ್ಯುತ್ತಿರುವ ಸರ್ಕಾರೇತರ ಸಂಸ್ಥೆಗಳನ್ನು ೩೮೨ (ಶೇ. ೭೬.೪) ಗ್ರಾಮಗಳಲ್ಲಿ ಕಾಣಬಹುದು. ಇನ್ನೂ ೬–೧೦ ಸರ್ಕಾರೇತರ ಸಂಸ್ಥೆಗಳು ೧೦೨ (ಶೇ. ೨೦.೪) ಗ್ರಾಮಗಳಲ್ಲಿ ಕಂಡರೆ, ೧೬ (ಶೇ. ೩.೨) ಗ್ರಾಮಗಳಲ್ಲಿ ೧೧ಕ್ಕಿಂತ ಹೆಚ್ಚಿನ ಸರ್ಕಾರೇತರ ಸಂಸ್ಥೆಗಳು ಅಸ್ತಿತ್ವದಲ್ಲಿವೆ. ಇಲ್ಲಿ ನೋಂದಾವಣೆ ಯಾಗದೇ ಇರುವ ಸ್ವಸಹಾಯ ಗುಂಪುಗಳನ್ನು ಸಹಿತ ಗಣನೆಗೆ ತೆಗೆದುಕೊಳ್ಳಲಾಗಿದೆ.

**೫.೧೭ ಸರ್ಕಾರೇತರ ಸಂಸ್ಥೆಗಳು ಮಾಹಿತಿದಾರರೊಂದಿಗೆ ಬೆರೆಯುವ ಅವಧಿ**

| ಅವಧಿ (ವರ್ಷಗಳಲ್ಲಿ) | ಸಂಖ್ಯೆ | ಶೇಕಡಾ |
|---|---|---|
| ೧–೨ | ೨೩೨ | ೪೬.೪ |
| ೩–೪ | ೯೯ | ೧೯.೮ |
| ೫–೬ | ೮೨ | ೧೬.೪ |
| ೭–೮ | ೬೮ | ೧೩.೬ |
| ೮ಕ್ಕಿಂತ ಅಧಿಕ | ೧೯ | ೩.೮ |
| **ಒಟ್ಟು** | ೫೦೦ | ೧೦೦ |

ಒಟ್ಟು ಪ್ರತಿಸ್ಪಂದಿಗಳಲ್ಲಿ ೨೩೨ (ಶೇ. ೪೬.೪) ಪ್ರತಿಸ್ಪಂದಿಗಳ ಕ್ಷೇತ್ರಗಳಲ್ಲಿನ 'ಸರ್ಕಾರೇತರ ಸಂಸ್ಥೆ'ಗಳು ಕಳೆದ ೧ ರಿಂದ ೨ ವರ್ಷಗಳವರೆಗೆ ಜನರೊಂದಿಗೆ ಕಾರ್ಯಮಾಡುತ್ತಿವೆ. ಅದರಂತೆ ೯೯ (ಶೇ. ೧೯.೮) ಪ್ರತಿಸ್ಪಂದಿಗಳ ಕ್ಷೇತ್ರಗಳಲ್ಲಿ ಅವು ೩ ರಿಂದ ೪ ವರ್ಷ, ೮೨ (ಶೇ. ೧೬.೪),ಜನರ ಭಾಗದಲ್ಲಿ ೫ರಿಂದ ೬ ವರ್ಷ ೬೮ (ಶೇ. ೧೩.೬) ಪ್ರತಿಸ್ಪಂದಿಗಳ ಗ್ರಾಮಗಳಲ್ಲಿ ೭ ರಿಂದ ೮ ವರ್ಷಗಳವರೆಗೆ ಮತ್ತು ಕೇವಲ ೧೯ (ಶೇ. ೩.೮) ಪ್ರತಿಸ್ಪಂದಿಗಳು ಊರುಗಳಲ್ಲಿ ಸರ್ಕಾರೇತರ ಸಂಸ್ಥೆಗಳು ೮ ವರ್ಷಗಳಿಗಿಂತ ಹೆಚ್ಚು ಕಾಲಾವಧಿಯಿಂದ ಕಾರ್ಯ ಮಾಡುತ್ತಿವೆಯೆಂದು ಅಭಿಪ್ರಾಯಿಸುತ್ತಾರೆ.

ಕೊನೆಯ ಹಂತದಲ್ಲಿನ 'ಸರ್ಕಾರೇತರ ಸಂಸ್ಥೆ'ಗಳಲ್ಲಿ ಅಂದರೆ ೧೯ ಪ್ರತಿಸ್ಪಂದಿಗಳ ಗ್ರಾಮಗಳಲ್ಲಿ ೮ಕ್ಕಿಂತ ಹೆಚ್ಚಿನ ವರ್ಷಗಳವರೆಗೆ ಕಾರ್ಯಗೈಯ್ಯುತ್ತಿರುವ 'ಸರ್ಕಾರೇತರ ಸಂಸ್ಥೆ'ಗಳಿವೆ. ಅತೀ ಕಡಿಮೆ ಸಂಖ್ಯೆಯ ಸರ್ಕಾರೇತರ ಸಂಸ್ಥೆಗಳು ೪೦ ವರ್ಷಕ್ಕಿಂತ ಹೆಚ್ಚು ಅವಧಿಯಿಂದಲೂ ಕಾರ್ಯಗೈಯ್ಯುತ್ತಿರುವದು ವಿಶೇಷ. ಇದರಿಂದ ತಿಳಿದು ಬರುವದೇನೆಂದರೆ ಹೆಚ್ಚಿನ ಸರ್ಕಾರೇತರ ಸಂಸ್ಥೆಗಳು ಸಮಾಜ ಮುಖಿಯಾಗಿ ಸಾರ್ವಜನಿಕರೊಂದಿಗೆ ಕೆಲಸ ಮಾಡುತ್ತಿದೆ.

**೫.೧೮ ಪ್ರತಿಸ್ಪಂದಿಗಳ ದೃಷ್ಟಿಯಲ್ಲಿ ಸರ್ಕಾರೇತರ ಸಂಸ್ಥೆಗಳು :**

| ನಿಲುವು | ಸಂಖ್ಯೆ | ಶೇಕಡಾ |
|---|---|---|
| ಸ್ನೇಹಪರ/ಸಹಕಾರಿ | ೪೮೨ | ೯೬.೪ |
| ಅಸಹಕಾರ | ೧೮ | ೩.೬ |
| ಒಟ್ಟು | ೫೦೦ | ೧೦೦ |



ಗರಿಷ್ಠ ಸಂಖ್ಯೆಯ ಸರ್ಕಾರೇತರ ಸಂಸ್ಥೆಗಳು ಜನರೊಂದಿಗೆ ಬೆರೆತು, ಸಹಕಾರದ ಸ್ನೇಹಪರ ಮನೋಧರ್ಮವನ್ನು ಹೊಂದಿವೆ (೪೮೨-ಶೇ.೯೬.೪). ಆದರೆ ಅತೀ ಕಡಿಮೆ ೧೮ (ಶೇ. ೩.೬) ಪ್ರತಿಸ್ಪಂದಿಗಳ ಪ್ರಕಾರ ಅವರ ಕ್ಷೇತ್ರದಲ್ಲಿನ 'ಸರ್ಕಾರೇತರ ಸಂಸ್ಥೆ'ಗಳು ಸಹಕಾರ ಮನೋಧರ್ಮ ಹೊಂದಿಲ್ಲವೆಂದು ಅಭಿಪ್ರಾಯಿಸುತ್ತಾರೆ.

**೫.೧೯ ಮಾಹಿತಿದಾರರಿಗೆ ಸಹಾಯಕವಾದ ಸರ್ಕಾರೇತರ ಸಂಸ್ಥೆಗಳು :**

| ಅಭಿಪ್ರಾಯ | ಸಂಖ್ಯೆ | ಶೇಕಡಾ |
|---|---|---|
| ಸಹಾಯಕವಾಗಿವೆ | ೪೩೨ | ೮೬.೪ |
| ಸಹಾಯಕವಾಗಿಲ್ಲ | ೩೦ | ೬.೦ |
| ಅಲ್ಪಮಟ್ಟಿಗೆ | ೩೮ | ೭.೬ |
| ಒಟ್ಟು | ೫೦೦ | ೧೦೦ |




ಒಟ್ಟು ೪೩೨ (ಶೇ. ೮೬.೪) ಮಹಿತಿದಾರರ ಪ್ರಕಾರ, ಅವರಲ್ಲಿಯ ಸರ್ಕಾರೇತರ ಸಂಸ್ಥೆಗಳು ಅವರ ಸರ್ವಾಂಗೀಣ ಅಭಿವೃದ್ಧಿಗೆ ಸಹಾಯಕವಾಗಿವೆ. ಅತೀ ಕಡಿಮೆ ೩೦ (ಶೇ. ೬) ಪ್ರತಿಸ್ಪಂದಿಗಳ ಪ್ರಕಾರ, ಅವು ಸಹಕಾರಿಯಾಗಿಲ್ಲವೆಂದಾದರೆ, ೩೮ (ಶೇ. ೭.೬) ಪ್ರತಿಸ್ಪಂದಿಗಳಿಗೆ ಅಲ್ಪಮಟ್ಟಿಗೆ ಸಹಾಯಕವಾಗಿವೆ.

೫.೨೦ ಸರ್ಕಾರೇತರ ಸಂಸ್ಥೆಗಳು ನೀಡಿದ ಸಹಾಯದ ವಿಧ :

| ಸಹಾಯದ ವಿಧ | ಸಂಖ್ಯೆ | ಶೇಕಡಾ |
|---|---|---|
| ಶೈಕ್ಷಣಿಕ | ೮೫ | ೧೭.೦ |
| ಆರೋಗ್ಯ | ೯೨ | ೧೮.೪ |
| ಸಾಂಸ್ಕೃತಿಕ | ೯೭ | ೧೯.೪ |
| ಮಹಿಳಾ ಸಬಲೀಕರಣ | ೧೩೯ | ೨೭.೮ |
| ಗ್ರಾಮೀಣ ಅಭಿವೃದ್ಧಿ | ೮೭ | ೧೭.೪ |
| ಒಟ್ಟು | ೫೦೦ | ೧೦೦ |




ಈ ಮಾಹಿತಿಯಿಂದ ತಿಳಿದು ಬರುವದೇನೆಂದರೆ ಗರಿಷ್ಠ ಸಂಖ್ಯೆಯ ೧೩೯ (ಶೇ. ೨೭.೮) ಸರ್ಕಾರೇತರ ಸಂಸ್ಥೆಗಳು ಮಹಿಳಾ ಸಬಲೀಕರಣದ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿವೆ. ೯೭ (ಶೇ. ೧೯.೪) ಪ್ರತಿಸ್ಪಂದಿಗಳ ಪ್ರಕಾರ ಸಾಂಸ್ಕೃತಿಕ ಚಟುವಟಿಕೆಗಳಿಗೆ, ೯೨ ಪ್ರತಿಸ್ಪಂದಿಗಳ ಪ್ರಕಾರ (ಶೇ. ೧೮.೪) ಆರೋಗ್ಯಕ್ಕೆ, ೮೭ (ಶೇ. ೧೭.೪) ಪ್ರತಿಸ್ಪಂದಿಗಳ ಪ್ರಕಾರ ಗ್ರಾಮೀಣ ಅಭಿವೃದ್ಧಿಗೆ ಮತ್ತು ೮೫ (ಶೇ. ೧೭.೦) 'ಶಿಕ್ಷಣ'ಕ್ಷೇತ್ರಕ್ಕೆ ಪ್ರಾಮುಖ್ಯತೆ ನೀಡಿದ್ದು ಕಂಡುಬರುತ್ತದೆ.

ಇದರಿಂದಾಗಿ ಅಧ್ಯಯನದ ಕಾರ್ಯವ್ಯಾಪ್ತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಬಹುತೇಕ ಸರ್ಕಾರೇತರ ಸಂಸ್ಥೆಗಳು ಕ್ಷೇತ್ರದ ಅಭಿವೃದ್ಧಿಗೆ ಬದ್ಧವಾಗಿವೆ. ಅಧ್ಯಯನದ ಅವಧಿಯಲ್ಲಿ

ಪ್ರತಿಸ್ಪಂದಿಗಳು ತಿಳಿಸಿದಂತೆ ಸರ್ಕಾರೇತರ ಸಂಸ್ಥೆಗಳು ಜನರ ಜೊತೆಗೆ ಕೆಲಸ ಮಾಡುತ್ತ, ಜನರ ಬೇಕು ಬೇಡಗಳನ್ನು ಪೂರೈಸುವತ್ತ ಅಗತ್ಯ ಯೋಜನೆಗಳನ್ನು ಹಾಕಿಕೊಂಡು ಜನಮುಖಿಯಾಗಿವೆ. ಹೆಚ್ಚಿನ ಸರ್ಕಾರೇತರ ಸಂಸ್ಥೆಗಳಿಂದ ಸಾರ್ವಜನಿಕರು ಉಪಯೋಗವನ್ನು ಪಡೆದಿದ್ದಾರೆ. ಉಪಯೋಗವನ್ನು ಪಡೆದವರಲ್ಲಿ ಹೆಚ್ಚಿನವರು ಮಹಿಳೆಯರು ಎಂಬುದು ವಿಶೇಷ. ಇದರಿಂದ ತಿಳಿದು ಬರುವುದೇನೆಂದರೆ, ಗ್ರಾಮೀಣ ಮಟ್ಟದಲ್ಲಿ ಮಹಿಳೆಯರ ಪಾತ್ರ ದಿನದಿಂದ ದಿನಕ್ಕೆ ಅಭಿವೃದ್ಧಿ ಹೊಂದುತ್ತಿದೆ. ಮಹಿಳೆಯರು ಹಿಂದೆಂದಿಗಿಂತಲೂ ಹೆಚ್ಚಾಗಿ ಅಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಿರುವುದು ಸಮಾಧಾನಕರ ಅಂಶವಾಗಿದೆ.

ಬೆಳಗಾವಿ ಜಿಲ್ಲೆಯಲ್ಲಿ ಪ್ರತಿ ಗ್ರಾಮಗಳಲ್ಲಿಯೂ ಸರ್ಕಾರೇತರ ಸಂಸ್ಥೆಗಳಿವೆ. ಹೆಚ್ಚಿನ ಗ್ರಾಮಗಳಲ್ಲಿ ಒಂದಲ್ಲ ಒಂದು ಸರ್ಕಾರೇತರ ಸಂಸ್ಥೆ ಕಾರ್ಯ ನಿರ್ವಹಿಸುತ್ತಿದೆ. ನೋಂದಣಿಯಾದ ಸರ್ಕಾರೇತರ ಸಂಸ್ಥೆಗಳಿಗಿಂತ, ನೋಂದಣಿಯಾಗದ ಸರ್ಕಾರೇತರ ಸಂಸ್ಥೆಗಳೇ ಅಧಿಕವಾಗಿದೆ. ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಸಮಾಜಮುಖಿಯಾಗಿದ್ದು ಜನರ ಅವಶ್ಯಕತೆಗಳನ್ನು ಪೂರೈಸುವತ್ತ ಗಮನವನ್ನು ಕೇಂದ್ರೀಕರಿಸಿದೆ. ಬೆಳಗಾವಿ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳು, ಆರೋಗ್ಯ, ಮಹಿಳಾ ಸಬಲೀಕರಣ, ಕ್ರೀಡೆ, ಕಲೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಸರ್ಕಾರೇತರ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಜನಪರಯೋಜನೆಗಳನ್ನು ಕಾರ್ಯಗತಗೊಳಿಸುವದರ ಮೂಲಕ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿಪರವಾಗಿವೆ.

***********

# ಅಧ್ಯಾಯ – ೬

# ಪ್ರಾಥಮಿಕ ಮಾಹಿತಿಯ ವಿಶ್ಲೇಷಣೆ

೬.೧ ಆರೋಗ್ಯ ಕ್ಷೇತ್ರ

೬.೨ ಶಿಕ್ಷಣಕ್ಷೇತ್ರ

೬.೩ ಸಾಹಿತ್ಯ ಮತ್ತು ಕಲೆ

೬.೪ ಮಹಿಳಾ ಸಬಲೀಕರಣ

೬.೫ ಗ್ರಾಮೀಣ ಅಭಿವೃದ್ಧಿ

ಅಧ್ಯಾಯ – ೬

# ಪ್ರಾಥಮಿಕ ಮಾಹಿತಿಯ ವಿಶ್ಲೇಷಣೆ

ಇದು ಮಹಾಪ್ರಬಂಧದ ಸಮಾರೋಪ ಭಾಗ. ಅಧ್ಯಯನದ ಒಟ್ಟು ಫಲಿತಗಳನ್ನು ಸಂಕ್ಷಿಪ್ತವಾಗಿಯೂ, ಸಮಗ್ರವಾಗಿಯೂ ಇಲ್ಲಿ ದಾಖಲಿಸಿ, ಅಧ್ಯಯನದಿಂದ ಕಂಡುಕೊಳ್ಳಲಾದ ಅಂಶಗಳನ್ನು, ವಿವರಗಳನ್ನು ಸೂಚಿಸಲಾಗಿದೆ.

ಈ ಅಧ್ಯಾಯದಲ್ಲಿ ಸಂಶೋಧನೆಯ ಸಲುವಾಗಿ ಕೈಗೊಳ್ಳಲಾದ ಕ್ಷೇತ್ರ ಅಧ್ಯಯನದಲ್ಲಿ ಸಂಗ್ರಹಿಸಲಾದ ಮಾಹಿತಿಗಳನ್ನು ಸಂಶೋಧನಾ ವೈಧಾನಿಕತೆಯ ಅನ್ವಯವಾಗಿ ವಿಶ್ಲೇಷಿಸಲಾಗಿದೆ. ಪ್ರಾಥಮಿಕ ಮಾಹಿತಿಗಳನ್ನು ಸರಳ ಕೋಷ್ಠಕಗಳ ಮುಖಾಂತರ ನೀಡಲಾಗಿದೆ. ಆಯ್ದ ಸರ್ಕಾರೇತರ ಸಂಸ್ಥೆಗಳು ಬೆಳಗಾವಿ ಜಿಲ್ಲೆಯ ಸಮಗ್ರ ಅಭಿವೃದ್ಧಿಯಲ್ಲಿ ನೀಡಿದ ಕೊಡುಗೆಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ. ಒಟ್ಟಾರೆಯಾಗಿ ಅಧ್ಯಯನದ ಉದ್ದೇಶ ಹಾಗೂ ಊಹೆಗಳನ್ನು ಪೂರ್ಣಗೊಳಿಸುವ ನಿಟ್ಟಿನಲ್ಲಿ ಸಂಗ್ರಹಿಸಲಾದ ಪ್ರಾಥಮಿಕ ಮಾಹಿತಿಗಳನ್ನು ದಾಖಲಿಸಲಾಗಿದೆ.

ಈ ಅಧ್ಯಯನದಲ್ಲಿ ಒಟ್ಟು ಐದು ಕ್ಷೇತ್ರಗಳ ಅಭಿವೃದ್ಧಿ ಸಮೀಕ್ಷೆಗೆ ಮಿಸಲಾಗಿದೆ. ೧) ಆರೋಗ್ಯ ೨) ಶಿಕ್ಷಣ ೩)ಸಾಹಿತ್ಯ–ಕಲೆ ೪)ಮಹಿಳಾ ಸಬಲೀಕರಣ ೫)ಗ್ರಾಮೀಣಾಭಿವೃದ್ಧಿ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಪ್ರತಿ ಕ್ಷೇತ್ರಗಳಿಂದ ೧೦೦ ಪ್ರತಿಸ್ಪಂದಿಗಳ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಹೀಗೆ ಒಟ್ಟು ೫೦೦ ಮಾಹಿತಿದಾರರಿಂದ ಮಾಹಿತಿಯನ್ನು ಸಂಗ್ರಹಿಸಿ ಸರಕಾರೇತರ ಸಂಸ್ಥೆಗಳ ಅಭಿವೃದ್ಧಿ ಸೂಚ್ಯಂಕವನ್ನು ನಿರ್ಧರಿಸಲಾಗಿದೆ.

## ೬.೧ ಆರೋಗ್ಯ ಕ್ಷೇತ್ರ – ಜೆ.ಜೆ.ಸಹಕಾರಿ ಆಸ್ಪತ್ರೆಯ ಸೇವೆಯ ಬಗೆಗಿನ ಮಾಹಿತಿ :

***ಕೋಷ್ಟಕ – ೬.೧.೧ : ಸರ್ಕಾರಿ ಆರೋಗ್ಯ ಸೇವೆ ಲಭ್ಯತೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಆರೋಗ್ಯದ ಬಗ್ಗೆ ಈ ಗ್ರಾಮದಲ್ಲಿ ಸರ್ಕಾರಿ ಸಂಸ್ಥೆಯ ಸೇವೆ ಇದೆಯೇ ? | i) ಹೌದು | ೮೭ | ೮೭.೦ |
| | ii) ಇಲ್ಲಾ | ೧೩ | ೧೩.೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೮೭ರಷ್ಟು ಜನರ ಅಭಿಪ್ರಾಯದಲ್ಲಿ ತಮ್ಮ ಗ್ರಾಮಗಳಲ್ಲಿ ಸರಕಾರಿ ಆರೋಗ್ಯ ಸೇವೆ ಇರುತ್ತದೆ. ಮತ್ತು ಕೇವಲ ಶೇಕಡಾ ೧೩ರಷ್ಟು ಜನರ ಅಭಿಪ್ರಾಯದಲ್ಲಿ ಗ್ರಾಮಗಳಲ್ಲಿ ಸರಕಾರಿ ಆರೋಗ್ಯ ಸೇವೆ ಲಭ್ಯವಿರುವದಿಲ್ಲ.

***ಕೋಷ್ಟಕ – ೬.೧.೨ : ಆರೋಗ್ಯ ಸೇವೆ ಲಭ್ಯತೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಆರೋಗ್ಯದ ಬಗ್ಗೆ ಈ ಗ್ರಾಮದಲ್ಲಿ ಸರ್ಕಾರಿ ಸಂಸ್ಥೆಯ ಸೇವೆ ಇದ್ದಲ್ಲಿ ಯಾವುದು? | i) ಪ್ರಾಥಮಿಕ ಆರೋಗ್ಯ ಕೇಂದ್ರ. | ೫೨ | ೫೨.೦ |
| | ii) ಎ.ಎನ್.ಎಂ. | ೩೫ | ೩೫.೦ |
| | iii) ಹೋಮಿಯೋಪತಿ / ಖಾಸಗಿ | ೧೩ | ೧೩.೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೫೨ರಷ್ಟು ಜನರ ಅಭಿಪ್ರಾಯದಲ್ಲಿ ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಇರುತ್ತದೆ. ಶೇಕಡಾ ೩೫ರಷ್ಟು ಜನರ ಅಭಿಪ್ರಾಯದಲ್ಲಿ ಗ್ರಾಮಗಳಲ್ಲಿ ಮಹಿಳಾ ಆರೋಗ್ಯ ಸಹಾಯಕಿಯರು ಆರೋಗ್ಯ

ಸೇವೆ ಸಲ್ಲಿಸುತ್ತಾರೆ. ಶೇಕಡಾ ೧೩ರಷ್ಟು ಜನರ ಅಭಿಪ್ರಾಯದಲ್ಲಿ ಗ್ರಾಮಗಳಲ್ಲಿ ಹೋಮೀಯೋಪತಿ/ಖಾಸಗಿ ವೈದ್ಯರ ಸೇವೆಯು ಲಭ್ಯವಿರುತ್ತದೆ.

***ಕೋಷ್ಟಕ – ೬.೧.೩ : ಸರ್ಕಾರಿ ಆರೋಗ್ಯ ಸೇವೆಯ ಗುಣಮಟ್ಟ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಸರ್ಕಾರಿ ಸಂಸ್ಥೆಯ ಸೇವೆ ಹೇಗಿದೆ (ವೈದ್ಯರ ಲಭ್ಯತೆ, ಔಷಧೋಪಚಾರ) | i) ಉತ್ತಮ | ೩೫ | ೩೫.೦ |
| | ii) ಮಧ್ಯಮ | ೪೯ | ೪೯.೦ |
| | iii) ಸಮಾಧಾನಕರ | ೧೬ | ೧೬.೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೩೫ರಷ್ಟು ಜನರ ಅಭಿಪ್ರಾಯದಲ್ಲಿ ಸರ್ಕಾರಿ ಸಂಸ್ಥೆಯ ಸೇವೆಯ ಗುಣಮಟ್ಟ ಉತ್ತಮವಾಗಿರುತ್ತದೆ. ಶೇಕಡಾ ೪೯ರಷ್ಟು ಜನರ ಅಭಿಪ್ರಾಯದಲ್ಲಿ ಸರ್ಕಾರಿ ಸಂಸ್ಥೆಯ ಸೇವೆಯು ಮಧ್ಯಮವಾಗಿರುತ್ತದೆ. ಶೇಕಡಾ ೧೬ರಷ್ಟು ಜನರ ಅಭಿಪ್ರಾಯದಲ್ಲಿ ಸರ್ಕಾರಿ ಸಂಸ್ಥೆಯ ಸೇವೆಯು ಸಮಾಧಾನಕರವಾಗಿರುತ್ತದೆ.

***ಕೋಷ್ಟಕ – ೬.೧.೪ : ಸ್ವಚ್ಛ ಪರಿಸರದ ಬಗ್ಗೆ ಗ್ರಾಮ ಪಂಚಾಯತಿಯ ಕಾರ್ಯವೈಖರಿ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಸ್ವಚ್ಛ ಪರಿಸರದ ಬಗ್ಗೆ ಗ್ರಾಮ ಪಂಚಾಯತಿಯ ಕಾರ್ಯವೈಖರಿ? | i) ಉತ್ತಮ – ಪ್ರತಿದಿನ ಸ್ವಚ್ಛ ಮಾಡುತ್ತಾರೆ. | ೧೭ | ೧೭.೦೦ |
| | ii) ಮಧ್ಯಮ – ವಾರಕ್ಕೊಂದು ಬಾರಿ. | ೨೨ | ೨೨.೦೦ |
| | iii) ಇಲ್ಲ – ಮಾಡುವುದಿಲ್ಲ. | ೬೧ | ೬೧.೦೦ |
| | ಒಟ್ಟು | ೧೦೦ | ೧೦೦ |



ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೧೭ ರಷ್ಟುಜನರ ಅಭಿಪ್ರಾಯದಲ್ಲಿ ಸ್ವಚ್ಛ ಪರಿಸರದ ಬಗ್ಗೆ ಗ್ರಾಮ ಪಂಚಾಯ್ತಿಯು ಉತ್ತಮ ಕಾರ್ಯ ಮಾಡುತ್ತಿದೆ. ಅಂದರೆ ಪ್ರತಿದಿನ ಸ್ವಚ್ಛ ಮಾಡುತ್ತಾರೆ. ಶೇಕಡಾ ೨೨ರಷ್ಟು ಜನರ ಅಭಿಪ್ರಾಯದಲ್ಲಿ ಸ್ವಚ್ಛ ಪರಿಸರದ ಬಗ್ಗೆ ಗ್ರಾಮ ಪಂಚಾಯ್ತಿಯು ಸಾಧಾರಣ ಕಾಳಜಿ ಮಾಡುತ್ತಿದೆ. ಅಂದರೆ ವಾರಕ್ಕೊಂದು ಬಾರಿ ಸ್ವಚ್ಛ ಮಾಡುತ್ತಾರೆ. ಶೇಕಡಾ ೬೧ರಷ್ಟು ಜನರ ಅಭಿಪ್ರಾಯದಲ್ಲಿ ಸ್ವಚ್ಛ ಪರಿಸರದ ಬಗ್ಗೆ ಗ್ರಾಮ ಪಂಚಾಯ್ತಿಯು ಯಾವುದೇ ಕೆಲಸ ಮಾಡುವುದಿಲ್ಲ. ಇದರಿಂದಾಗಿ ತಿಳಿದು ಬರುವುದೇನೆಂದರೆ ಗ್ರಾಮಗಳಲ್ಲಿ ಸ್ವಚ್ಛತೆ ವಿಚಾರದಲ್ಲಿ ಸರ್ಕಾರೇತರ ಸಂಸ್ಥೆಗಳಿಗೆ ಅವಕಾಶಗಳಿವೆ ಎಂಬುದಾಗಿದೆ.

*ಕೋಷ್ಟಕ – ೬.೧.೫ : ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು (ಎನ್.ಜಿ.ಓ) ಇದೆಯೇ ? | i) ಇದೆ<br>ii) ಇಲ್ಲಾ | ೯೨<br>೦೮ | ೯೨.೦೦<br>೦೮.೦೦ |
| | **ಒಟ್ಟು** | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೯೨ರಷ್ಟುಜನರ ಅಭಿಪ್ರಾಯದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು ಕೆಲಸ ನಿರ್ವಹಿಸುತ್ತಿವೆ. ಶೇಕಡಾ ೦೮ರಷ್ಟು ಜನರ ಅಭಿಪ್ರಾಯದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು ಕೆಲಸ ನಿರ್ವಹಿಸುವುದಿಲ್ಲ. ಹೆಚ್ಚಿನ ಪ್ರತಿಸ್ಪಂದಿಗಳು ಸರ್ಕಾರೇತರ ಸಂಸ್ಥೆಗಳ ಇರುವಿಕೆಯ ಬಗ್ಗೆ ಮಾಹಿತಿಯನ್ನು ನೀಡಿರುತ್ತಾರೆ.

*ಕೋಷ್ಟಕ – ೬.೧.೬ : ಸರ್ಕಾರೇತರ ಸಂಸ್ಥೆಗಳು ಆರೋಗ್ಯದ ಬಗ್ಗೆ ಅರಿವು ಮೂಡಿಸುವ ಬಗ್ಗೆ.*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಸರ್ಕಾರೇತರ ಸಂಸ್ಥೆಗಳು (ಎನ್.ಜಿ.ಓ) ಸ್ವಚ್ಛತೆ/ ಆರೋಗ್ಯದ ಬಗ್ಗೆ ಅರಿವು ಮೂಡಿಸಿವೆಯೇ? | i) ಹೌದು<br>ii) ಇಲ್ಲಾ | ೮೬<br>೧೪ | ೮೬.೦೦<br>೧೪.೦೦ |
| | **ಒಟ್ಟು** | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೮೬ರಷ್ಟುಜನರ ಅಭಿಪ್ರಾಯದಲ್ಲಿ ಸರ್ಕಾರೇತರ ಸಂಸ್ಥೆಗಳು ಆರೋಗ್ಯದ ಬಗ್ಗೆ ಅರಿವು ಮೂಡಿಸುವ ಕಾರ್ಯವನ್ನು ಮಾಡುತ್ತಿವೆ. ಶೇಕಡಾ ೧೪ ರಷ್ಟು ಜನರ ಅಭಿಪ್ರಾಯದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು ಆರೋಗ್ಯದ ಬಗ್ಗೆ ಅರಿವು ಮೂಡಿಸುವ ಕೆಲಸ ನಿರ್ವಹಿಸುವುದಿಲ್ಲ. ಪ್ರತಿಸ್ಪಂದಿಗಳ ಪ್ರಕಾರ ಸರ್ಕಾರೇತರ ಸಂಸ್ಥೆಗಳು ಆರೋಗ್ಯದ ಬಗ್ಗೆ ಹೆಚ್ಚಿನ ಅರಿವನ್ನು ಮೂಡಿಸುತ್ತಿವೆ.

*ಕೋಷ್ಟಕ – ೬.೧.೭ : ಆರೋಗ್ಯ ಕ್ಷೇತ್ರದಲ್ಲಿ ವಿವಿಧ ಸಂಸ್ಥೆಗಳ ಪಾತ್ರ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಆರೋಗ್ಯದ ಬಗ್ಗೆ ಯಾವ ಸಂಸ್ಥೆಗಳು ಕೆಲಸ ಮಾಡುತ್ತಿವೆ ? | i) ಎನ್.ಜಿ.ಓ.<br>ii) ಸರ್ಕಾರಿ ಸಂಸ್ಥೆ.<br>iii) ಖಾಸಗಿ ಸಂಸ್ಥೆ. | ೬೮<br>೨೧<br>೧೧ | ೬೮.೦೦<br>೨೧.೦೦<br>೧೧.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೬೮ ರಷ್ಟು ಜನರ ಅಭಿಪ್ರಾಯದಲ್ಲಿ ಸರ್ಕಾರೇತರ ಸಂಸ್ಥೆಗಳು ಆರೋಗ್ಯದ ಕ್ಷೇತ್ರದಲ್ಲಿ ಕಾರ್ಯವನ್ನು ಮಾಡುತ್ತಿವೆ. ಶೇಕಡಾ ೨೧ರಷ್ಟು ಜನರ ಅಭಿಪ್ರಾಯದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಗಳು ಕಾರ್ಯವನ್ನು ಮಾಡುತ್ತಿವೆ. ಶೇಕಡಾ ೧೧ ರಷ್ಟು ಜನರ ಅಭಿಪ್ರಾಯದಲ್ಲಿ ಖಾಸಗಿ ಸಂಸ್ಥೆಗಳು ಆರೋಗ್ಯದ ಕ್ಷೇತ್ರದಲ್ಲಿ ಕರ್ತವ್ಯ ನಿರ್ವಹಿಸುತ್ತಿವೆ.

*ಕೋಷ್ಟಕ – ೬.೧.೮ : ಜೆ.ಜಿ.ಸಹಕಾರಿ ಆಸ್ಪತ್ರೆಯ ಪರಿಚಯ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಜೆ.ಜಿ.ಸಹಕಾರಿ ಆಸ್ಪತ್ರೆಯ ಪರಿಚಯ ನಿಮಗಿದೆಯೆ.? | i) ಹೌದು<br>ii) ಇಲ್ಲಾ | ೯೬<br>೦೪ | ೯೬.೦೦<br>೦೪.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೯೬ರಷ್ಟುಜನರ ಅಭಿಪ್ರಾಯದಲ್ಲಿ ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯ ಪರಿಚಯ ಇರುತ್ತದೆ. ಶೇಕಡಾ ೦೪ರಷ್ಟು ಜನರ ಅಭಿಪ್ರಾಯದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯ ಪರಿಚಯ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಇದರಿಂದ ತಿಳಿದುಬರುವುದೇನೆಂದರೆ ಹೆಚ್ಚಿನ ಜನರಿಗೆ ಜೆ.ಜಿ.ಸಹಕಾರಿ ಆಸ್ಪತ್ರೆಯ ಪರಿಚಯವಿರುತ್ತದೆ ಮತ್ತು ಈ ಭಾಗದಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿರುತ್ತದೆ.

*ಕೋಷ್ಟಕ – ೬.೧.೯ : ಜೆ.ಜಿ.ಸಹಕಾರಿ ಆಸ್ಪತ್ರೆಯ ಆರೋಗ್ಯ ಶಿಬಿರಗಳಲ್ಲಿ ಪಾಲ್ಗೊಳ್ಳುವಿಕೆ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಜೆ.ಜಿ.ಸಹಕಾರಿ ಆಸ್ಪತ್ರೆಯು ನಡೆಸುವ ಆರೋಗ್ಯ ಶಿಬಿರಗಳಲ್ಲಿ ಭಾಗಿಯಾಗಿದ್ದೀರಾ? | i) ಹೌದು<br>ii) ಇಲ್ಲಾ | ೮೪<br>೧೬ | ೮೪.೦೦<br>೧೬.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೮೪ರಷ್ಟು ಜನರು ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯು ನಡೆಸುವ ಆರೋಗ್ಯ ಶಿಬಿರಗಳಲ್ಲಿ ಪಾಲ್ಗೊಂಡಿರುತ್ತಾರೆ. ಉಳಿದಂತೆ ಶೇಕಡಾ ೧೬ರಷ್ಟು ಜನರ ಆರೋಗ್ಯ ಕ್ಷೇತ್ರದಲ್ಲಿ ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯು ನಡೆಸುವ ಆರೋಗ್ಯ ಶಿಬಿರಗಳಲ್ಲಿ ಪಾಲ್ಗೊಂಡಿರುವುದಿಲ್ಲ.

ಇದರಿಂದ ತಿಳಿದುಬರುವುದೇನೆಂದರೆ ಹೆಚ್ಚಿನ ಜನರು ಜೆ. ಜಿ. ಸಹಕಾರಿ ಆಸ್ಪತ್ರೆ ನಡೆಸುವ ಆರೋಗ್ಯ ಶಿಬಿರಗಳಲ್ಲಿ ಪಾಲ್ಗೊಂಡು ಅದರ ಪ್ರಯೋಜನ ಪಡೆದಿರುತ್ತಾರೆ.

***ಕೋಷ್ಟಕ – ೬.೧.೧೦ : ಜೆ.ಜಿ.ಸಹಕಾರಿ ಆಸ್ಪತ್ರೆಯ ಆರೋಗ್ಯ ಶಿಬಿರಗಳಲ್ಲಿ ಪಾಲ್ಗೊಳ್ಳುವಿಕೆ ಸಂಖ್ಯೆ:***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಜೆ.ಜಿ.ಸಹಕಾರಿ ಆಸ್ಪತ್ರೆಯು ನಡೆಸುವ ಆರೋಗ್ಯ ಶಿಬಿರಗಳಲ್ಲಿ ಎಷ್ಟು ಸಲ ಭಾಗಿಯಾಗಿದ್ದೀರಿ? | i) ೧ ಸಲ | ೬೩ | ೬೩.೦೦ |
| | ii) ೨ ಸಲ | ೧೯ | ೧೯.೦೦ |
| | iii) ೨ ಕ್ಕಿಂತ ಹೆಚ್ಚು | ೧೮ | ೧೮.೦೦ |
| | **ಒಟ್ಟು** | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೬೩ರಷ್ಟು ಜನರು ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯು ನಡೆಸುವ ಆರೋಗ್ಯ ಶಿಬಿರಗಳಲ್ಲಿ ೧ ಸಲ ಪಾಲ್ಗೊಂಡಿರುತ್ತಾರೆ. ಉಳಿದಂತೆ ಶೇಕಡಾ ೧೯ ರಷ್ಟು ಜನರು ಜೆ.ಜಿ. ಸಹಕಾರಿ ಆಸ್ಪತ್ರೆಯ ಆರೋಗ್ಯ ಶಿಬಿರಗಳಲ್ಲಿ ೨ ಸಲ ಪಾಲ್ಗೊಂಡಿರುತ್ತಾರೆ. ಶೇಕಡಾ ೧೮ ರಷ್ಟು ಜನರು ೨ ಕ್ಕಿಂತ ಹೆಚ್ಚು ಸಲ ಪಾಲ್ಗೊಂಡಿರುತ್ತಾರೆ. ಇದರಿಂದ ತಿಳಿದುಬರುವುದೇನೆಂದರೆ ಹೆಚ್ಚಿನ ಜನರು ಜೆ. ಜಿ. ಸಹಕಾರಿ ಆಸ್ಪತ್ರೆ ನಡೆಸುವ ಆರೋಗ್ಯ ಶಿಬಿರಗಳಲ್ಲಿ ಪಾಲ್ಗೊಂಡು, ಪ್ರಯೋಜನ ಪಡೆದಿರುತ್ತಾರೆ.

***ಕೋಷ್ಟಕ – ೬.೧.೧೧ : ಜೆ.ಜಿ.ಸಹಕಾರಿ ಆಸ್ಪತ್ರೆಯ ಸೇವೆಯ ಗುಣಮಟ್ಟ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಜೆ.ಜಿ.ಸಹಕಾರಿ ಆಸ್ಪತ್ರೆಯ ವೈದ್ಯಕೀಯ ಸೇವೆಯ ಗುಣಮಟ್ಟ? | i) ಉತ್ತಮ<br>ii) ಅತ್ಯುತ್ತಮ<br>iii) ತೃಪ್ತಿದಾಯಕ<br>iv) ಸರಿಯಿಲ್ಲಾ. | ೬೬<br>೧೪<br>೦೯<br>೧೧ | ೬೬.೦೦<br>೧೪.೦೦<br>೦೯.೦೦<br>೧೧.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೧೪ರಷ್ಟು ಜನರು ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯ ಸೇವೆಯ ಗುಣಮಟ್ಟ ಅತ್ಯುತ್ತಮ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಉಳಿದಂತೆ ಶೇಕಡಾ ೬೬ರಷ್ಟು ಜನರು ಸೇವೆಯ ಗುಣಮಟ್ಟ ಉತ್ತಮವೆಂದು ಅಭಿಪ್ರಾಯಪಟ್ಟಿರುತ್ತಾರೆ. ಶೇಕಡಾ ೯ರಷ್ಟು ಜನರು ತೃಪ್ತಿದಾಯಕವೆಂದು ಅಭಿಪ್ರಾಯಪಟ್ಟಿರುತ್ತಾರೆ. ಶೇಕಡಾ ೧೧ರಷ್ಟು ಜನರು ಆಸ್ಪತ್ರೆಯ ಸೇವೆಯ ಗುಣಮಟ್ಟ ತೃಪ್ತಿದಾಯಕವಾಗಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಇದರಿಂದ ತಿಳಿದು ಬರುವುದೇನೆಂದರೆ ಹೆಚ್ಚಿನ ಜನರಿಗೆ ಅದು ಉತ್ತಮ ಸೇವೆಯನ್ನು ನೀಡುತ್ತಿದೆ.

***ಕೋಷ್ಟಕ – ೬.೧.೧೨ : ಜೆ.ಜಿ.ಸಹಕಾರಿ ಆಸ್ಪತ್ರೆಯು ಉಪಯುಕ್ತವೇ ?***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಜೆ.ಜಿ.ಸಹಕಾರಿ ಆಸ್ಪತ್ರೆಯು ವೈದ್ಯಕೀಯ ಕ್ಷೇತ್ರದಲ್ಲಿ ಈ ಭಾಗದ ಜನತೆಗೆ ಅನುಕೂಲ ಎಂದು ಭಾವಿಸುವಿರಾ? | i) ಹೌದು<br>ii) ಇಲ್ಲಾ | ೭೪<br>೨೬ | ೭೪.೦೦<br>೨೬.೦೦ |
| | **ಒಟ್ಟು** | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೭೪ ರಷ್ಟು ಜನರು ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯ ಸೇವೆಯು ಆರೋಗ್ಯ ಕ್ಷೇತ್ರದಲ್ಲಿ ಅತ್ಯುತ್ತಮ ಹಾಗೂ ಜನರಿಗೆ ಅನುಕೂಲಕರವಾಗಿದೆಯೆಂದು ಅಭಿಪ್ರಾಯಪಟ್ಟಿರುತ್ತಾರೆ. ಉಳಿದಂತೆ ಶೇಕಡಾ ೨೬ರಷ್ಟು ಜನರು ಆಸ್ಪತ್ರೆಯ ಸೇವೆಯು ಆರೋಗ್ಯ ಕ್ಷೇತ್ರದಲ್ಲಿ ಉಪಯುಕ್ತವಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ, ಹೆಚ್ಚಿನ ಜನರು ಜೆ.ಜಿ.ಸಹಕಾರಿ ಆಸ್ಪತ್ರೆಯ ಸಂಸ್ಥೆಯು ಅನುಕೂಲಕರವೆಂದು ಅಭಿಪ್ರಾಯಪಟ್ಟಿರುವುದರಿಂದ ಅದು ಬೆಳಗಾವಿ ಜಿಲ್ಲೆಯ ಆರೋಗ್ಯ ಅಭಿವೃದ್ಧಿಯಲ್ಲಿ ತನ್ನ ಪಾಲನ್ನು ಹೊಂದಿದೆಯೆಂದು ಹೇಳಬಹುದಾಗಿದೆ.

***ಕೋಷ್ಟಕ – ೬.೧.೧೩ : ಜೆ.ಜಿ.ಸಹಕಾರಿ ಆಸ್ಪತ್ರೆಯ ಸೇವೆಯ ವಿವರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಜೆ.ಜಿ.ಸಹಕಾರಿ ಆಸ್ಪತ್ರೆಯಿಂದ ಯಾವ ರೀತಿ ಸೇವೆಯನ್ನು ಪಡೆದುಕೊಂಡಿರುವಿರಿ? | i) ಒಳರೋಗಿ<br>ii) ಹೊರರೋಗಿ | ೩೭<br>೬೩ | ೩೭.೦೦<br>೬೩.೦೦ |
| | ಒಟ್ಟು | ೧೦೦ | ೧೦೦ |

ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೩೭ರಷ್ಟು ಜನರು ಜೆ.ಜಿ.ಸಹಕಾರಿ ಆಸ್ಪತ್ರೆಯಲ್ಲಿ ಒಳರೋಗಿಯಾಗಿ ಸೇವೆಯನ್ನು ಪಡೆದಿರುತ್ತಾರೆ. ಉಳಿದಂತೆ ಶೇಕಡಾ ೬೩ರಷ್ಟು ಜನರು ಜೆ.ಜಿ.ಸಹಕಾರಿ ಆಸ್ಪತ್ರೆಯ ಸೇವೆಯು ಧಾಮದಲ್ಲಿ ಹೊರರೋಗಿಯಾಗಿ ಸೇವೆಯನ್ನು ಪಡೆದಿರುತ್ತಾರೆ.

*ಕೋಷ್ಟಕ – ೬.೧.೧೪ : ಸರ್ಕಾರಿ ಸಂಸ್ಥೆಯ ಸೇವೆಯ ಗುಣಮಟ್ಟ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ವ್ಯಾಪ್ತಿಯ ಸರ್ಕಾರಿ ಆರೋಗ್ಯ ಕಾರ್ಯಕರ್ತೆಯರು ನಿಮ್ಮ ಗ್ರಾಮಕ್ಕೆ ನಿಯಮಿತವಾಗಿ ಭೆಟ್ಟಿ ನೀಡುತ್ತಾರೆಯೇ? | i) ಹೌದು<br>ii) ಇಲ್ಲಾ | ೫೭<br>೪೩ | ೫೭.೦೦<br>೪೩.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೫೭ರಷ್ಟು ಜನರ ಅಭಿಪ್ರಾಯದಲ್ಲಿ ಆರೋಗ್ಯ ಕಾರ್ಯಯಕರ್ತೆಯರು ನಿಯಮಿತವಾಗಿ ಗ್ರಾಮಗಳಿಗೆ ಭೇಟಿ ನೀಡಿರುತ್ತಾರೆ. ಶೇಕಡಾ ೪೩ರಷ್ಟು ಜನರ ಅಭಿಪ್ರಾಯದಲ್ಲಿ ಆರೋಗ್ಯ ಕಾರ್ಯಯಕರ್ತೆಯರು ನಿಯಮಿತವಾಗಿ ಗ್ರಾಮಗಳಿಗೆ ಭೇಟಿ ನೀಡಿರುವುದಿಲ್ಲ.

*ಕೋಷ್ಟಕ – ೬.೧.೧೫ : ಅನಾರೋಗ್ಯದ ನಿಮಿತ್ತ ಆಸ್ಪತ್ರೆಗೆ ಭೇಟಿ ನೀಡಿದ ವಿವರ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮಗೆ ಅನಾರೋಗ್ಯವಾದಾಗ ಯಾವ ಆಸ್ಪತ್ರೆಗೆ ಭೇಟಿ ನೀಡುವಿರಿ? | i) ಜೆ.ಜಿ.ಸಹಕಾರಿ ಆಸ್ಪತ್ರೆ<br>ii) ಸರ್ಕಾರಿ<br>iii) ಇತರೇ ಖಾಸಗಿ | ೫೯<br>೧೧<br>೩೦ | ೫೯.೦೦<br>೧೧.೦೦<br>೩೦.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೫೯ರಷ್ಟು ಜನರ ಅಭಿಪ್ರಾಯದಲ್ಲಿ ಅನಾರೋಗ್ಯವಾದಾಗ ಜೆ.ಜಿ.ಸಹಕಾರಿ ಆಸ್ಪತ್ರೆಗೆ ಭೇಟಿ ನೀಡುತ್ತಾರೆ. ಶೇಕಡಾ ೧೧ರಷ್ಟು ಜನರು ಸರ್ಕಾರಿ ಆಸ್ಪತ್ರೆಗಳಿಗೆ ಭೇಟಿ ನೀಡುತ್ತಾರೆ. ಶೇಕಡಾ ೩೦ರಷ್ಟು ಜನರ ಅಭಿಪ್ರಾಯದಲ್ಲಿ ಅನಾರೋಗ್ಯವಾದಾಗ ಇತರೇ ಖಾಸಗಿ ಸಂಸ್ಥೆಗೆ ಭೇಟಿ ನೀಡುತ್ತಾರೆ.

*ಕೋಷ್ಟಕ – ೬.೧.೧೬ : ಸರ್ಕಾರಿ ಆಸ್ಪತ್ರೆಯ ಗುಣಮಟ್ಟ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದ ಸರ್ಕಾರಿ ಆಸ್ಪತ್ರೆಯ ಗುಣಮಟ್ಟ? | i) ಉತ್ತಮ<br>ii) ಅತ್ಯುತ್ತಮ<br>iii) ತೃಪ್ತಿದಾಯಕ<br>iv) ಅಸಮಾಧಾನ | ೧೧<br>೧೨<br>೬೪<br>೧೩ | ೧೧.೦೦<br>೧೨.೦೦<br>೬೪.೦೦<br>೧೩.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೧೧ರಷ್ಟು ಜನರು ಸರ್ಕಾರಿ ಆಸ್ಪತ್ರೆ ಸೇವೆಯ ಗುಣಮಟ್ಟ ಉತ್ತಮವೆಂದು ಅಭಿಪ್ರಾಯಪಟ್ಟಿರುತ್ತಾರೆ. ಉಳಿದಂತೆ ಶೇಕಡಾ ೧೨ರಷ್ಟು ಜನರು ಸರ್ಕಾರಿ ಆಸ್ಪತ್ರೆ ಸೇವೆಯ ಗುಣಮಟ್ಟ ಅತ್ಯುತ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ. ಶೇಕಡಾ ೭೪ರಷ್ಟು ಜನರು ಸರ್ಕಾರಿ ಆಸ್ಪತ್ರೆಯ ಸೇವೆಗಳ ಗುಣಮಟ್ಟ ತೃಪ್ತಿದಾಯಕವೆಂದು ಅಭಿಪ್ರಾಯಪಟ್ಟಿರುತ್ತಾರೆ. ಶೇಕಡಾ ೧೩ರಷ್ಟು ಜನರು ಗುಣಮಟ್ಟ ತೃಪ್ತಿದಾಯಕವಾಗಿಲ್ಲವೆಂದು ಅಸಮಾಧಾನ ವ್ಯಕ್ತಪಡಿಸಿರುತ್ತಾರೆ.

ಮೇಲಿನ ಒಟ್ಟು ೧೬ ಅಂಶಗಳನ್ನು ಪರಿಶೀಲಿಸಲಾಗಿ ಆರೋಗ್ಯ ಕ್ಷೇತ್ರದಲ್ಲಿ ಸಮೀಕ್ಷೆ ಮಾಡಿದ ಪ್ರಕಾರ ಸರ್ಕಾರಿ ಸಂಸ್ಥೆಗಳಿಗಿಂತ ಸರ್ಕಾರೇತರ ಸಂಸ್ಥೆಗಳು ಹೆಚ್ಚು ಜನಪ್ರೀಯವಾಗಿದ್ದು, ಹೆಚ್ಚು ಜನಮುಖಿಯಾಗಿ ಜನಪರ ಕೆಲಸಗಳನ್ನು ಮಾಡುತ್ತಿವೆ. ಇದರಿಂದಾಗಿ ಸಾರ್ವಜನಿಕರಿಗೆ ಸರ್ಕಾರೇತರ ಸಂಸ್ಥೆಗಳು ಒಳ್ಳೆಯ ಕೆಲಸಗಳನ್ನು ಮಾಡುತ್ತಿರುವುದರ ಬಗ್ಗೆ ವಿಶ್ವಾಸವು ಹೆಚ್ಚಾಗಿರುತ್ತದೆ. ಒಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಯಾದ ಜೆ.ಜಿ.ಸಹಕಾರಿ ಆಸ್ಪತ್ರೆಯು ಗೋಕಾಕ ತಾಲೂಕಿನ ಜನರ ಆರೋಗ್ಯದ ಸೇವೆಯ ಬೇಡಿಕೆಯನ್ನು ಪೂರೈಸುವುದರ ಜೊತೆಗೆ ಬೆಳಗಾವಿ ಜಿಲ್ಲೆಯ ಅಭಿವೃದ್ಧಿಯಲ್ಲಿ ತನ್ನದೇ ಆದಂತಹ ಕೊಡುಗೆಯನ್ನು ನೀಡಿದೆಯೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಸಮೀಕ್ಷೆ ಮಾಡಿದ ಪ್ರದೇಶಗಳಲ್ಲಿ ಪ್ರತಿಸ್ಪಂದಿಗಳ ಅಭಿಪ್ರಾಯದಂತೆ ಶೇ.೯೬ ರಷ್ಟು ಜನರು ಜೆ.ಜಿ.ಸಹಕಾರಿ ಆಸ್ಪತ್ರೆಯ ಪರಿಚಯವಿದೆಯೆಂದು ತಿಳಿಸುತ್ತಾರೆ ಮತ್ತು ಶೇ.೮೪ ರಷ್ಟು ಜನರು ಅದು ಸಂಘಟಿಸುವ ಆರೋಗ್ಯ ಶಿಬಿರಗಳಲ್ಲಿ ಭಾಗಿಯಾಗಿದ್ದಾರೆ. ಅದೇ ರೀತಿ ಶೇ.೬೬ ರಷ್ಟು ಜನರು ಜೆ.ಜಿ.ಸಹಕಾರಿ

ಆಸ್ಪತ್ರೆಯು ಮಾಡುವ ಸೇವೆಯು ಉತ್ತಮವಾಗಿದೆಯೆಂದು ಅಭಿಪ್ರಾಯ ಪಡುತ್ತಾರೆ ಮತ್ತು ಶೇ.೭೪ ರಷ್ಟು ಜನರು ಜೆ.ಜಿ.ಸಹಕಾರಿ ಆಸ್ಪತ್ರೆಯು ಆರೋಗ್ಯ ಕ್ಷೇತ್ರದಲ್ಲಿ ಈ ಭಾಗದ ಜನರ ಅನುಕೂಲತೆಗಳಿಗೆ ಸ್ಪಂದಿಸಿದೆ ಎಂದು ಅಭಿಪ್ರಾಯ ಪಡುತ್ತಾರೆ. ಇದರಿಂದಾಗಿ ಜೆ.ಜಿ.ಸಹಕಾರಿ ಆಸ್ಪತ್ರೆ ಜನಪರ ಕಾಳಜಿಯನ್ನು ಹೊಂದಿ ಜನಮುಖಿಯಾಗಿದೆ ಮತ್ತು ಈ ಭಾಗದ ಸರ್ಕಾರಿ ಸೇವೆಗೆ ಹೋಲಿಸಿದಲ್ಲಿ ಸರ್ಕಾರೇತರ ಸಂಸ್ಥೆಯ ಸೇವೆಯನ್ನು, ಪ್ರಮುಖವಾಗಿ ವೈದ್ಯಕೀಯ ಸೇವೆ ಮಾಡುವದರಲ್ಲಿ ಸರ್ಕಾರಿ ರಂಗಕ್ಕೆ ಮಾದರಿಯಾಗಿದೆ ಎಂದೇ ಹೇಳಬೇಕಾಗುತ್ತದೆ. ತನ್ನ ಮಿತದರದ ವೈದ್ಯಕೀಯ ಸೇವೆ, ಅತ್ಯುನ್ನತ ತಂತ್ರಜ್ಞಾನ, ಸಮರ್ಪಣಾ ಮನೋಭಾವದ ಸಿಬ್ಬಂದಿ, ವೈಯುಕ್ತಿಕ ಕಾಳಜಿವಹಿಸುವ ಆಡಳಿತ ಮಂಡಳಿ, ಇವೆಲ್ಲವುಗಳಿಂದ ಜೆ.ಜಿ.ಸಹಕಾರಿ ಆಸ್ಪತ್ರೆಯು ಬೆಳಗಾವಿ ಜಿಲ್ಲೆಯ ಸಮಗ್ರ ಅಭಿವೃದ್ಧಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದೆ.

**೬.೨ ಶಿಕ್ಷಣಕ್ಷೇತ್ರ – ಕೆ.ಎಲ್.ಇ ಸಂಸ್ಥೆಯ ಕಾರ್ಯವೈಖರಿಯ ವಿವಿಧ ಆಯಾಮಗಳ ಬಗೆಗಿನ ವಿಶ್ಲೇಷಣೆ.**

***ಕೋಷ್ಟಕ ೬.೨.೧ : ಶಾಲೆಗಳ ಲಭ್ಯತೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಯಾವ ಶಾಲೆಗಳು ಇವೆ? | i) ಖಾಸಗಿ ಮತ್ತು ಸರ್ಕಾರಿ.<br>ii) ಖಾಸಗಿ ಮಾತ್ರ.<br>iii) ಸರ್ಕಾರಿ ಮಾತ್ರ | ೨೮<br>೨೬<br>೪೬ | ೨೮.೦೦<br>೨೬.೦೦<br>೪೬.೦೦ |
| | **ಒಟ್ಟು** | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೨೮ರಷ್ಟು ಜನರ ಅಭಿಪ್ರಾಯದಲ್ಲಿ, ಗ್ರಾಮಗಳಲ್ಲಿ ಖಾಸಗಿ ಮತ್ತು ಸರ್ಕಾರಿ ಶಾಲೆಗಳು ಇರುತ್ತವೆ. ಶೇಕಡಾ ೨೬ರಷ್ಟು ಜನರ ಅಭಿಪ್ರಾಯದಲ್ಲಿ ಗ್ರಾಮಗಳಲ್ಲಿ ಖಾಸಗಿ ಶಾಲೆಗಳು ಮಾತ್ರ ಇರುತ್ತವೆ. ಶೇಕಡಾ ೪೬ರಷ್ಟು ಜನರ ಅಭಿಪ್ರಾಯದಲ್ಲಿ ಗ್ರಾಮಗಳಲ್ಲಿ ಸರ್ಕಾರಿ ಶಾಲೆಗಳು ಮಾತ್ರ ಇರುತ್ತವೆ.

***ಕೋಷ್ಟಕ – ೬.೨.೨ : ಶಾಲೆಗಳಿಗೆ ಮಕ್ಕಳ ಸೇರಿಸುವಿಕೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಮಕ್ಕಳನ್ನು ಯಾವ ಶಾಲೆಗೆ ಕಳುಹಿಸುತ್ತೀರಿ | i) ಖಾಸಗಿ<br>ii) ಸರ್ಕಾರಿ | ೫೨<br>೪೮ | ೫೨.೦೦<br>೪೮.೦೦ |
| | **ಒಟ್ಟು** | ೧೦೦ | ೧೦೦ |

ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೫೨ರಷ್ಟು ಜನರು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಿಗೆ ಸೇರಿಸುತ್ತಾರೆ. ಶೇಕಡಾ ೪೮ರಷ್ಟು ಜನರು ತಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗಳಿಗೆ

ಸೇರಿಸುತ್ತಾರೆ. ಜನರು ಹೆಚ್ಚಾಗಿ ಖಾಸಗಿ ಶಾಲೆಗಳ ಬಗ್ಗೆ ಒಲವನ್ನು ತೋರಿಸುತ್ತಾರೆ. ಮತ್ತು ಸರ್ಕಾರಿ ಶಾಲೆಗಳ ಬಗ್ಗೆ ಹೆಚ್ಚಿನ ಒಲವನ್ನು ತೋರಿಸುವುದಿಲ್ಲ.

***ಕೋಷ್ಟಕ – ೬.೨.೩ : ಸರ್ಕಾರಿ ಶಾಲೆಗೆ ಮಕ್ಕಳನ್ನು ಸೇರಿಸುವಿಕೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗೆ ಏಕೆ ಕಳುಹಿಸುತ್ತೀರಿ? | i) ಮೂಲಭೂತ ಸೌಕರ್ಯಗಳು ಚೆನ್ನಾಗಿವೆ. | ೧೨ | ೧೨.೦೦ |
| | ii) ಶಿಕ್ಷಕರು ಪಾಠ ಚೆನ್ನಾಗಿ ಮಾಡುತ್ತಾರೆ. | ೩೦ | ೩೦.೦೦ |
| | iii) ಶುಲ್ಕ ಕಡಿಮೆ. | ೪೮ | ೪೮.೦೦ |
| | iv) ಮನೆಗೆ ಹತ್ತಿರವಾಗಿದೆ. | ೧೦ | ೧೦.೦೦ |
| ಒಟ್ಟು | | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೧೨ ರಷ್ಟು ಜನರ ಅಭಿಪ್ರಾಯದಲ್ಲಿ ಸರ್ಕಾರಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಚೆನ್ನಾಗಿವೆ. ಪ್ರತಿಶತ ೩೦ ರಷ್ಟು ಜನರ ಅಭಿಪ್ರಾಯ. ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರು ಪಾಠ ಚೆನ್ನಾಗಿ ಮಾಡುತ್ತಾರೆ ಎನ್ನುವುದು ಶೇಕಡಾ ೪೮ ರಷ್ಟು ಜನರ ಅಭಿಪ್ರಾಯದಲ್ಲಿ ಸರ್ಕಾರಿ ಶಾಲೆಗಳಲ್ಲಿ ಶುಲ್ಕ ಕಡಿಮೆ ಇರುವ ಕಾರಣದಿಂದ ಅವರ ಒಲವು ಸರಕಾರಿ ಶಾಲೆಗಳತ್ತ ಇರುವುದು. ಶೇಕಡಾ ೧೦ ರಷ್ಟು ಜನರು ಸರ್ಕಾರಿ ಶಾಲೆಗಳು ಮನೆಗಳಿಗೆ ಹತ್ತಿರವಾಗಿರುವ್ಯದರಿಂದ ತಮ್ಮ ಮಕ್ಕಳನ್ನು ಕಳಿಸವುದಾಗಿ ಹೇಳಿರುವರು.

***ಕೋಷ್ಟಕ – ೬.೨.೪ : ಖಾಸಗಿ ಶಾಲೆಗೆ ಮಕ್ಕಳನ್ನು ಸೇರಿಸುವಿಕೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಮಕ್ಕಳನ್ನು ಖಾಸಗಿ ಶಾಲೆಗೆ ಏಕೆ ಕಳುಹಿಸುತ್ತೀರಿ ? | i) ಮೂಲಭೂತ ಸೌಕರ್ಯಗಳು ಚೆನ್ನಾಗಿವೆ. | ೨೨ | ೨೨.೦೦ |
| | ii) ಶಿಕ್ಷಕರು ಚೆನ್ನಾಗಿ ಪಾಠ ಮಾಡುತ್ತಾರೆ. | ೪೮ | ೪೮.೦೦ |
| | iii) ಶುಲ್ಕ ಕಡಿಮೆ. | ೧೦ | ೧೦.೦೦ |
| | iv) ಮನೆಗೆ ಹತ್ತಿರವಾಗಿದೆ. | ೨೦ | ೨೦.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೨೨ರಷ್ಟು ಜನರು ಖಾಸಗಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳು ಚೆನ್ನಾಗಿವೆಯೆಂದು ಅಭಿಪ್ರಾಯ ಪಡುವರು. ಶೇಕಡಾ ೪೮ ರಷ್ಟು ಜನರ ಅಭಿಪ್ರಾಯದಲ್ಲಿ 'ಖಾಸಗಿ ಶಾಲೆಗಳಲ್ಲಿ ಶಿಕ್ಷಕರು ಪಾಠ ಚೆನ್ನಾಗಿ ಮಾಡುತ್ತಾರೆ'. ಶೇಕಡಾ ೧೦ ರಷ್ಟು ಜನರ ಅಭಿಪ್ರಾಯದಲ್ಲಿ 'ಖಾಸಗಿ ಶಾಲೆಗಳಲ್ಲಿ ಶುಲ್ಕ ಕಡಿಮೆ ಇರುತ್ತದೆ'. ಶೇಕಡಾ ೨೦ ರಷ್ಟು ಜನರು ಖಾಸಗಿ ಶಾಲೆಗಳು ಮನೆಗಳಿಗೆ ಹತ್ತಿರವಾಗಿರುವುದರಿಂದ ಅವರು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಿಗೆ ಕಳಿಸುವರು.

***ಕೋಷ್ಟಕ – ೬.೨.೫ : ಕೆ.ಎಲ್.ಇ. ಸಂಸ್ಥೆಯ ಪರಿಚಯ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆಎಲ್ಇ ಸಂಸ್ಥೆಯ ಪರಿಚಯ ನಿಮಗಿದೆಯೇ? | i) ಹೌದು | ೯೮ | ೯೮.೦೦ |
| | ii) ಇಲ್ಲಾ | ೦೨ | ೦೨.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೯೮ರಷ್ಟು ಜನರ ಅಭಿಪ್ರಾಯದಲ್ಲಿ ಕೆ.ಎಲ್.ಇ. ಸಂಸ್ಥೆಯ ಪರಿಚಯ ಇರುತ್ತದೆ. ಶೇಕಡಾ ೦೨ರಷ್ಟು ಜನರ ಅಭಿಪ್ರಾಯದಲ್ಲಿ ಕೆ.ಎಲ್.ಇ. ಸಂಸ್ಥೆಯ ಪರಿಚಯ ಇರುವುದಿಲ್ಲ.

***ಕೋಷ್ಟಕ – ೬.೨.೬ : ಕೆ.ಎಲ್.ಇ. ಸಂಸ್ಥೆಯು ನಡೆಸುವ ಶಾಲೆಗಳ ಗುಣಮಟ್ಟ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ನಡೆಸುವ ಶಾಲೆಯ ಗುಣಮಟ್ಟ? | i) ಅತ್ಯುತ್ತಮ | ೪೬ | ೪೬.೦೦ |
| | ii) ಉತ್ತಮ | ೩೦ | ೩೦.೦೦ |
| | iii) ಸಮಾಧಾನಕರ | ೧೩ | ೧೩.೦೦ |
| | iv) ಅಸಮಾಧಾನ | ೧೧ | ೧೧.೦೦ |
| | **ಒಟ್ಟು** | ೧೦೦ | ೧೦೦ |

ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೪೬ರಷ್ಟು ಜನರು ಕೆ.ಎಲ್.ಇ. ಸಂಸ್ಥೆಯು ನಡೆಸುವ ಶಾಲೆಗಳ ಗುಣಮಟ್ಟ ಅತ್ಯುತ್ತಮ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಉಳಿದಂತೆ ಶೇಕಡಾ ೩೦ರಷ್ಟು ಜನರು ಕೆ.ಎಲ್.ಇ. ಸಂಸ್ಥೆಯು ನಡೆಸುವ ಶಾಲೆಗಳ ಗುಣಮಟ್ಟ ಉತ್ತಮ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಶೇಕಡಾ ೧೩ರಷ್ಟು ಜನರು ಸಮಾಧಾನಕರ ಎಂದೂ ಶೇಕಡಾ ೧೧ರಷ್ಟು ಜನರು ತೃಪ್ತಿದಾಯಕವಾಗಿಲ್ಲವೆಂದೂ ಅಭಿಪ್ರಾಯಪಡುವರು.

***ಕೋಷ್ಟಕ – ೬.೨.೭ : ಶಾಲೆಗಳ ಗುಣಮಟ್ಟದ ಕುರಿತು ಅಭಿಪ್ರಾಯ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಅಭಿಪ್ರಾಯದಲ್ಲಿ ಯಾವ ಶಾಲೆ ಉತ್ತಮ? | i) ಸರ್ಕಾರಿ | ೧೨ | ೧೨.೦೦ |
| | ii) ಖಾಸಗಿ | ೩೫ | ೩೫.೦೦ |
| | iii) ಕೆ ಎಲ್ ಇ | ೫೩ | ೫೩.೦೦ |
| | **ಒಟ್ಟು** | ೧೦೦ | ೧೦೦ |

ಶೇಕಡಾ ೧೨ರಷ್ಟು ಜನರ ಅಭಿಪ್ರಾಯದಲ್ಲಿ 'ಸರ್ಕಾರಿ ಶಾಲೆಗಳು ಉತ್ತಮವಾಗಿವೆ'. ಶೇಕಡಾ ೩೫ರಷ್ಟು ಜನರ ಅಭಿಪ್ರಾಯದಲ್ಲಿ 'ಖಾಸಗಿ ಶಾಲೆಗಳು ಉತ್ತಮವಾಗಿವೆ'. ಶೇಕಡಾ ೫೩ರಷ್ಟು ಜನರ ಅಭಿಪ್ರಾಯದಲ್ಲಿ 'ಕೆ.ಎಲ್.ಇ. ಶಾಲೆಗಳು ಉತ್ತಮವಾಗಿವೆ'. ಇದರಿಂದಾಗಿ ತಿಳಿದುಬರುವುದೇನೆಂದರೆ ಜನರು ಹೆಚ್ಚಾಗಿ ಕೆ.ಎಲ್.ಇ. ಶಾಲೆಗಳ ಬಗ್ಗೆ ಒಲವನ್ನು ತೋರಿಸುತ್ತಾರೆ.

*ಕೋಷ್ಟಕ – ೬.೨.೮ : ಕೆ. ಎಲ್.ಇ. ಸಂಸ್ಥೆಯು ಕೆಲಸ ನಿರ್ವಹಿಸಿದ ಸೇವಾವಧಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ನಿಮ್ಮ ಗ್ರಾಮದಲ್ಲಿ ಎಷ್ಟು ವರ್ಷದಿಂದ ಕೆಲಸ ಮಾಡುತ್ತಿದೆ? | i) ೧–೪ | ೦೮ | ೦೮.೦೦ |
| | ii) ೫–೮ | ೦೭ | ೦೭.೦೦ |
| | iii) ೯ ಕ್ಕಿಂತ ಹೆಚ್ಚು | ೮೫ | ೮೫.೦೦ |
| | ಒಟ್ಟು | ೧೦೦ | ೧೦೦ |

*ಕೋಷ್ಟಕ – ೬.೨.೯ : ಕೆ. ಎಲ್.ಇ. ಸಂಸ್ಥೆಯ ಶಾಲೆಗಳ ಮೂಲಭೂತ ಸೌಕರ್ಯ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ಶಾಲೆಯ ಮೂಲಭೂತ ಸೌಕರ್ಯ ಹೇಗಿದೆ? | i) ಅತ್ಯುತ್ತಮ | ೭೯ | ೭೯.೦೦ |
| | ii) ಉತ್ತಮ | ೦೯ | ೦೯.೦೦ |
| | iii) ಸಮಾಧಾನಕರ | ೦೮ | ೦೮.೦೦ |
| | iv) ಅಸಮಾಧಾನ | ೦೪ | ೦೪.೦೦ |
| | ಒಟ್ಟು | ೧೦೦ | ೧೦೦ |




ಕೆ.ಎಲ್.ಇ. ಸಂಸ್ಥೆಯು ನಡೆಸುವ ಶಾಲೆಗಳ ಮೂಲಭೂತ ಸೌಕರ್ಯವು ಅತ್ಯುತ್ತಮ ಎಂದು ೭೯ರಷ್ಟು ಜನರು ಅಭಿಪ್ರಾಯಪಟ್ಟಿರುತ್ತಾರೆ. ಉಳಿದಂತೆ ಶೇಕಡಾ ೦೯ರಷ್ಟು ಜನರು ಕೆ.ಎಲ್.ಇ. ಸಂಸ್ಥೆಯು ನಡೆಸುವ ಶಾಲೆಗಳ ಮೂಲಭೂತ ಸೌಕರ್ಯವು ಉತ್ತಮ ಎಂದು ಹೇಳುವರು. ಶೇಕಡಾ ೦೮ರಷ್ಟು ಜನರು ಕೆ.ಎಲ್.ಇ. ಸಂಸ್ಥೆಯ ಶಾಲೆಗಳ ಮೂಲಭೂತ ಸೌಕರ್ಯವು ಸಮಾಧಾನಕರ ಎಂದೂ ಶೇಕಡಾ ೦೪ರಷ್ಟು ಜನರು ತೃಪ್ತಿದಾಯಕವಾಗಿಲ್ಲವೆಂದೂ ತಿಳಿಸಿದ್ದಾರೆ.

*ಕೋಷ್ಟಕ – ೬.೨.೧೦ : ಕೆ. ಎಲ್.ಇ. ಸಂಸ್ಥೆಯ ಶಾಲೆಗಳ ಆಡಳಿತ ಮಂಡಳಿಗಳ ಬಗ್ಗೆ ಅಭಿಪ್ರಾಯ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ಶಾಲೆಯ ಆಡಳಿತ ಮಂಡಳಿಯ ಬಗ್ಗೆ ನಿಮ್ಮ ಅಭಿಪ್ರಾಯ? | i) ಅತ್ಯುತ್ತಮ | ೬೩ | ೬೩.೦೦ |
| | ii) ಉತ್ತಮ | ೨೧ | ೨೧.೦೦ |
| | iii) ಸಮಾಧಾನ | ೦೯ | ೦೯.೦೦ |
| | iv) ಅಸಮಾಧಾನ | ೦೭ | ೦೭.೦೦ |
| | ಒಟ್ಟು | ೧೦೦ | ೧೦೦ |

ಕೆ.ಎಲ್.ಇ ಸಂಸ್ಥೆಯ ಆಡಳಿತ ಪ್ರತಿಶತ ೬೩ ಜನರಿಗೆ ಅತ್ಯುತ್ತಮವೆನಿಸಿದರೆ ಪ್ರತಿಶತ ೨೧ ರಷ್ಟು ಜನರಿಗೆ ಉತ್ತಮ, ಶೇ. ೯ ಜನರಿಗೆ ಸಮಾಧಾನಕರ. ಶೇ.೭ ರಷ್ಟು ಜನರಷ್ಟು ಸಮಾಧಾನ ತಂದಿಲ್ಲ. ಅಂದರೆ ಒಟ್ಟು ಶೇ. ೮೪ ರಷ್ಟು ಜನರಿಗೆ ಈ ಸಂಸ್ಥೆಯ ಆಡಳಿತ ವೈಖರಿ ಹಿಡಿಸಿದೆಯೆಂದರ್ಥ.

*ಕೋಷ್ಟಕ – ೬.೨.೧೧ : ಕೆ. ಎಲ್.ಇ. ಸಂಸ್ಥೆಯ ಶಾಲೆಗಳ ಅನುಕೂಲದ ಪ್ರಶ್ನೆ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ಶಾಲೆಯಿಂದಾಗಿ ಈ ಊರಿಗೆ ಅನುಕೂಲ ಆಗಿದಿಯೇ? | i) ಹೌದು | ೫೯ | ೫೯.೦೦ |
| | ii) ಇಲ್ಲಾ | ೪೧ | ೪೧.೦೦ |
| | ಒಟ್ಟು | ೧೦೦ | ೧೦೦ |

ಶೇಕಡಾ ೫೯ರಷ್ಟು ಜನರು ಕೆ.ಎಲ್.ಇ. ಸಂಸ್ಥೆಯ ಶಾಲೆಗಳಿಂದಾಗಿ ತಮ್ಮ ಊರಿಗೆ ಹೆಚ್ಚು ಅನುಕೂಲವಾಗಿದೆಯೆಂದು ಹೇಳಿದರೆ ಶೇಕಡಾ ೪೧ರಷ್ಟು ಜನರು ಹೆಚ್ಚು ಅನುಕೂಲಕರವಾಗಿರುವುದಿಲ್ಲವೆಂದು ಹೇಳಿದರು.

*ಕೋಷ್ಟಕ – ೬.೨.೧೨ : ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಕೆ. ಎಲ್.ಇ. ಸಂಸ್ಥೆಯ ಪಾತ್ರ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಕೆ.ಎಲ್.ಇ ಸಂಸ್ಥೆಯ ಪಾತ್ರ ಇದೆಯೇ? | i) ಹೌದು | ೬೨ | ೬೨.೦೦ |
| | ii) ಇಲ್ಲಾ | ೩೮ | ೩೮.೦೦ |
| | ಒಟ್ಟು | ೧೦೦ | ೧೦೦ |




ಈ ಪ್ರಶ್ನೆಗೆ ಪ್ರತಿಶತ ೬೨ ರಷ್ಟು ಜನರು ಸಕಾರಾತ್ಮಕ ಹಾಗೂ ಪ್ರತಿಶತ ೩೮ ರಷ್ಟು ಜನರು ನಕಾರಾತ್ಮಕ ಪ್ರತಿಕ್ರಿಯೆ ನೀಡಿದರು.

***ಕೋಷ್ಟಕ –೬.೨.೧೩ : ಕೆ. ಎಲ್.ಇ. ಸಂಸ್ಥೆಯು ಶಿಕ್ಷಣ ಕ್ಷೇತ್ರದಲ್ಲಿ ಸರ್ಕಾರಿ ಸಂಸ್ಥೆಗಳಿಗೆ ಮಾದರಿಯ ಕುರಿತು***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ಶಿಕ್ಷಣ ಕ್ಷೇತ್ರದಲ್ಲಿ ಸರ್ಕಾರಿ ಸಂಸ್ಥೆಗಳಿಗೆ ಮಾದರಿಯೇ | i) ಹೌದು | ೭೬ | ೭೬.೦೦ |
| | ii) ಇಲ್ಲಾ | ೨೪ | ೨೪.೦೦ |
| | ಒಟ್ಟು | ೧೦೦ | ೧೦೦ |



ಕೆ.ಎಲ್.ಇ. ಸಂಸ್ಥೆಯು ಶಿಕ್ಷಣ ಕ್ಷೇತ್ರದಲ್ಲಿ ಸರ್ಕಾರಿ ಸಂಸ್ಥೆಗಳಿಗೆ ಮಾದರಿಯಾಗಿದೆಯೆಂದು ನೂರರಲ್ಲಿ ೭೬ ಜನ ಹೇಳಿದರೆ ೨೪ ಜನರು ಮಾದರಿಯಾಗಿರುವುದಿಲ್ಲವೆಂದು ಸೂಚಿಸಿದರು.

***ಕೋಷ್ಟಕ – ೬.೨.೧೪ : ಕೆ.ಎಲ್.ಇ ಸಂಸ್ಥೆಯು ಯಾವ ರೀತಿಯಲ್ಲಿ ಮಾದರಿ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಕೆ.ಎಲ್.ಇ ಸಂಸ್ಥೆ ಮಾದರಿ ಆದಲ್ಲಿ ಯಾವ ರೀತಿ? | i) ಕಡಿಮೆ ವೆಚ್ಚ. | ೦೨ | ೦೨.೦೦ |
| | ii) ಅತ್ಯುತ್ತಮ ಮೂಲಭೂತ ಸೌಕರ್ಯ | ೨೨ | ೨೨.೦೦ |
| | iii) ಉತ್ತಮ ಶಿಕ್ಷಕರು. | ೧೮ | ೧೮.೦೦ |
| | iv) ಉತ್ತಮ ಕಲಿಕೆ. | ೧೯ | ೧೯.೦೦ |
| | v) ಗುಣಮಟ್ಟ. | ೧೧ | ೧೧.೦೦ |
| | vi) ಸುಲಭ ಪ್ರವೇಶ ನೀತಿ. | ೦೮ | ೦೮.೦೦ |
| | vii) ಉತ್ತಮ ಫಲಿತಾಂಶ. | ೧೧ | ೧೧.೦೦ |
| | viii) ವಿದ್ಯಾರ್ಥಿಯ ಸಮಗ್ರ ಅಭಿವೃದ್ಧಿಗೆ ಒತ್ತು. | ೦೯ | ೦೯.೦೦ |
| | **ಒಟ್ಟು** | ೧೦೦ | ೧೦೦ |

ಮೇಲಿನ ಪ್ರಾಥಮಿಕ ದತ್ತಾಂಶಗಳಿಂದ ತಿಳಿದು ಬರುವುದೇನೆಂದರೆ ಪ್ರತಿಸ್ಪಂದಿಗಳು ಹೆಚ್ಚಾಗಿ ಖಾಸಗಿ ಸಂಸ್ಥೆಗಳು ನಡೆಸುವ ಶಾಲೆಗಳತ್ತ ಒಲವನ್ನು ತೋರಿಸುತ್ತಿದ್ದು, ಇವುಗಳಲ್ಲಿ ಕೆ.ಎಲ್.ಇ.ಸಂಸ್ಥೆ ನಡೆಸುವ ಶಾಲೆಗಳನ್ನು ಮೆಚ್ಚಿಕೊಳ್ಳಲು ಕಾರಣ ಶೈಕ್ಷಣಿಕ ಗುಣಮಟ್ಟ, ಬೋಧಕವರ್ಗ, ಮೂಲಭೂತ ಸೌಕರ್ಯಗಳು ಈ ಕಾರಣಗಳಿಂದಾಗಿಯೇ ಈ ಸರ್ಕಾರೇತರ ಸಂಸ್ಥೆಯು ಸರ್ಕಾರಿ ಸಂಸ್ಥೆಗಳಿಗೆ ಮಾದರಿ ಆಗಿದೆ. ಅದೇ ರೀತಿ ಹೆಚ್ಚಿನ ಪ್ರತಿಸ್ಪಂದಿಗಳು ತಿಳಿಸಿದ ಪ್ರಕಾರ ಕೆ.ಎಲ್.ಇ.ಶಿಕ್ಷಣ ಸಂಸ್ಥೆಯು ಜನರಿಗೆ ಚಿರಪರಿಚಿತವಾಗಿದ್ದು ಸಮಾಜಮುಖಿಯಾಗಿದೆ. ಮತ್ತು ತನ್ನ ಗುಣ ವಿಶೇಷಗಳ ಮೂಲಕ ಸರ್ಕಾರಿ ರಂಗಕ್ಕೆ ಮಾದರಿಯಾಗಿದೆ.

**೬.೩ ಸಾಹಿತ್ಯ ಮತ್ತು ಕಲೆ – ಭಾವಸಂಗಮದ ವಿವಿಧ ಆಯಾಮಗಳ ಬಗೆಗಿನ ವಿಶ್ಲೇಷಣೆ.**

***ಕೋಷ್ಟಕ – ೬.೩.೧ : ಭಾವ ಸಂಗಮ ಗೋಕಾಕ ಸಂಸ್ಥೆಯ ಪರಿಚಯ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆಯ ಪರಿಚಯ ನಿಮಗಿದಿಯೇ? | i) ಹೌದು | ೮೯ | ೮೯.೦೦ |
| | ii) ಇಲ್ಲಾ | ೧೧ | ೧೧.೦೦ |
| | **ಒಟ್ಟು** | ೧೦೦ | ೧೦೦ |




ಪ್ರತಿಶತ ೮೯ ಜನರಿಗೆ ಗೋಕಾಕದ ಭಾವಸಂಗಮ ಪರಿಚಿತ. ಆದರೆ ಪ್ರತಿಶತ ೧೧ ರಷ್ಟು ಜನರಿಗೆ ಪರಿಚಿತವಿಲ್ಲ.

***ಕೋಷ್ಟಕ – ೬.೩.೨ : ಭಾವ ಸಂಗಮ ಗೋಕಾಕ ಸಂಸ್ಥೆಯ ಸೇವಾವಧಿಯ ಪರಿಚಯ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಎಷ್ಟು ವರ್ಷದಿಂದ ಕೆಲಸ ಮಾಡುತ್ತಿದೆ ? | i) ೧–೪ | ೫ | ೫.೦೦ |
| | ii) ೫–೮ | ೮೨ | ೮೨.೦೦ |
| | iii) ೯ ರಿಂದ ಹೆಚ್ಚು | ೧೩ | ೧೩.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೦೮ರಷ್ಟು ಜನರ ಅಭಿಪ್ರಾಯದಲ್ಲಿ ಭಾವ ಸಂಗಮ ಗೋಕಾಕ ಸಂಸ್ಥೆಯು ೧–೪ ವರ್ಷದಿಂದ ಕೆಲಸ ಮಾಡುತ್ತಿದೆ. ಶೇಕಡಾ ೩೫ರಷ್ಟು ಜನರ ಅಭಿಪ್ರಾಯದಲ್ಲಿ ೫–೮ ವರ್ಷದಿಂದ ಕೆಲಸ ಮಾಡುತ್ತಿದೆ. ಶೇಕಡಾ ೫೩ರಷ್ಟು ಜನರು ಕಳೆದ ೯ ವರ್ಷದಿಂದ ಕೆಲಸ ಮಾಡುತ್ತಿದಯೆಂದು ಹೇಳಿದರು.

***ಕೋಷ್ಟಕ – ೬.೩.೩ : ಭಾವ ಸಂಗಮ ಗೋಕಾಕ ಸಂಸ್ಥೆಯು ನಡೆಸುವ ಕಾರ್ಯಕ್ರಮಗಳ ವಿವರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆ ನಡೆಸುವ ಕಲಾ ಶಿಬಿರಗಳಲ್ಲಿ ಭಾಗವಹಿಸಿದ್ದಿರಾ? | i) ಹೌದು | ೮೮ | ೮೮.೦೦ |
| | ii) ಇಲ್ಲಾ | ೧೨ | ೧೨.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೮೮ರಷ್ಟು ಜನರು ಭಾವ ಸಂಗಮ, ಗೋಕಾಕ ಸಂಸ್ಥೆಯು ನಡೆಸುವ ಕಲಾ ಶಿಬಿರಗಳಲ್ಲಿ

ಭಾಗವಹಿಸಿದ್ದಾರೆ. ಶೇಕಡಾ ೧೨ರಷ್ಟು ಜನರು ಈ ಸಂಸ್ಥೆಯು ನಡೆಸುವ ಕಲಾ ಶಿಬಿರಗಳಲ್ಲಿ ಭಾಗವಹಿಸಿರುವುದಿಲ್ಲ.

***ಕೋಷ್ಟಕ – ೬.೩.೪ : ಭಾವ ಸಂಗಮ ಗೋಕಾಕ ಸಂಸ್ಥೆಯು ನಡೆಸುವ ಶಿಬಿರಗಳ ಗುಣಮಟ್ಟದ ವಿವರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆಯು ನಡೆಸುವ ಕಾಯ್ರಕ್ರಮದ ಗುಣಮಟ್ಟ? | i) ಅತ್ಯುತ್ತಮ<br>ii) ಉತ್ತಮ<br>iii) ಸಮಾಧಾನ<br>iv) ಅಸಮಾಧಾನ | ೭೯<br>೧೩<br>೦೫<br>೦೩ | ೭೯.೦೦<br>೧೩.೦೦<br>೦೫.೦೦<br>೦೩.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೭೯ರಷ್ಟು ಜನರಲ್ಲಿ ಭಾವ ಸಂಗಮದ ಕಾರ್ಯಕ್ರಮದ ಬಗ್ಗೆ ಅತ್ಯುತ್ತಮ ಅಭಿಪ್ರಾಯವಿದೆ. ಉಳಿದಂತೆ ಶೇಕಡಾ ೧೩ರಷ್ಟು ಜನರಲ್ಲಿ ಉತ್ತಮ ಅಭಿಪ್ರಾಯ. ಶೇಕಡಾ ೦೫ ರಷ್ಟು ಜನರು ಸಮಾಧಾನಕರ ಎಂದೂ ಶೇಕಡಾ ೦೩ರಷ್ಟು ಜನರು ತೃಪ್ತಿದಾಯಕವಾಗಿಲ್ಲವೆಂದೂ ಹೇಳಿದರು.

***ಕೋಷ್ಟಕ – ೬.೩.೫ : ಕಲೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಸರ್ಕಾರಿ ಸಂಸ್ಥೆಗಳ ಪಾತ್ರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದಲ್ಲಿ ಕಲೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಸರ್ಕಾರಿ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದೆಯೇ? | i) ಹೌದು<br>ii) ಇಲ್ಲಾ | ೨೮<br>೭೨ | ೨೮.೦೦<br>೭೨.೦೦ |
| | ಒಟ್ಟು | ೧೦೦ | ೧೦೦ |

ಗ್ರಾಮೀಣ ಮಟ್ಟದಲ್ಲಿ ಕಲೆ ಮತ್ತು ಸಾಹಿತ್ಯ ಕುರಿತ ಸರಕಾರಿ ಸಂಸ್ಥೆಗಳು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿಲ್ಲ. ಜಿಲ್ಲಾ ಕೇಂದ್ರದಲ್ಲಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಲೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳು ಜಿಲ್ಲಾ ಕೇಂದ್ರ ಅಥವಾ ತಾಲೂಕು ಕೇಂದ್ರಗಳಿಗೆ ಮಾತ್ರ ಸೀಮಿತವಾಗಿವೆ.

***ಕೋಷ್ಟಕ – ೬.೩.೬ : ಭಾವ ಸಂಗಮ ಗೋಕಾಕ ಸಂಸ್ಥೆಯಿಂದ ಪಡೆದುಕೊಂಡ ಲಾಭದ ಬಗ್ಗೆ ವಿವರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆಯಿಂದ ಯಾವ ರೀತಿಯ ಲಾಭ ಪಡೆದಿರುವಿರಿ? | i) ಕಲಾವಿದರಿಗೆ ಪ್ರೋತ್ಸಾಹ | ೩೩ | ೩೩.೦೦ |
| | ii) ಸಾಹಿತ್ಯ ಕಾರ್ಯಕ್ರಮಗಳು | ೪೮ | ೪೮.೦೦ |
| | iii) ಅರಿವು ಮೂಡಿಸುವಿಕೆ | ೧೯ | ೧೯.೦೦ |
| | ಒಟ್ಟು | ೧೦೦ | ೧೦೦ |




ಜನಾಭಿಪ್ರಾಯದಂತೆ ಭಾವ ಸಂಗಮ ಸಾಹಿತ್ಯ ಕಾರ್ಯಕ್ರಮಗಳನ್ನು ಸಂಘಟಿಸುವಲ್ಲಿ ಮುಂದಿದೆ. ಇದರ ಕಾರ್ಯಕ್ರಮಗಳ ಕುರಿತು ಶೇ ೪೮ ಜನರಿಗೆ ತಿಳಿದಿದೆ. ಇದು ಕಲಾವಿದರಿಗೆ ಪ್ರೋತ್ಸಾಹ ನೀಡುತ್ತಿರುವ ಸಂಗತಿಯ ಶೇ ೩೩ ರಷ್ಟು ಜನರು ಬಲ್ಲರು. ಇದರಿಂದ ಸಾಂಸ್ಕೃತಿಕ ಅರಿವು ಜಾಗೃತಗೊಂಡಿದೆಯೆಂದು ಶೇ ೧೯ ರಷ್ಟು ಭಾವಿಸಿದ್ದಾರೆ.

***ಕೋಷ್ಟಕ – ೬.೩.೭ : ಭಾವ ಸಂಗಮ ಗೋಕಾಕ ಸಂಸ್ಥೆಯ ಆಡಳಿತ ಮಂಡಳಿಯ ಗುಣಮಟ್ಟ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆಯ ಆಡಳಿತ ಮಂಡಳಿಯ ಕಾರ್ಯ ಚಟುವಟಿಕೆಯ ಗುಣಮಟ್ಟ? | i) ಅತ್ಯುತ್ತಮ | ೧೫ | ೧೫.೦೦ |
| | ii) ಉತ್ತಮ | ೪೮ | ೪೮.೦೦ |
| | iii) ಸಮಾಧಾನ | ೩೧ | ೩೧.೦೦ |
| | iv) ಅಸಮಾಧಾನ | ೦೬ | ೦೬.೦೦ |
| | ಒಟ್ಟು | ೧೦೦ | ೧೦೦ |




ಜನಾಭಿಪ್ರಾಯದಲ್ಲಿ ಶೇ. ೧೫ರಷ್ಟು ಜನರು ಭಾವ ಸಂಗಮದ ಆಡಳಿತ ಮಂಡಳಿಯ ಕಾರ್ಯ ಚಟುವಟಿಕೆಗಳ ಗುಣಮಟ್ಟವು ಅತ್ಯುತ್ತಮ ಎಂದೂ ಶೇಕಡಾ ೪೮ರಷ್ಟು ಜನರು ಉತ್ತಮ ಎಂದೂ ಶೇಕಡಾ ೩೧ರಷ್ಟು ಜನರು ಸಮಾಧಾನಕರ ಎಂದೂ ಅಭಿಪ್ರಾಯಪಟ್ಟಿರುತ್ತಾರೆ. ಶೇಕಡಾ ೦೬ರಷ್ಟು ಜನರ ಅಭಿಪ್ರಾಯದಲ್ಲಿ ಭಾವ ಸಂಗಮದ ಆಡಳಿತ ಮಂಡಳಿಯ ಕಾರ್ಯ ಚಟುವಟಿಕೆಗಳು ಗುಣಮಟ್ಟವು ತೃಪ್ತಿದಾಯಕವಾಗಿಲ್ಲ.

***ಕೋಷ್ಟಕ –೬.೩.೮ : ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಭಾವ ಸಂಗಮ ಗೋಕಾಕ ಸಂಸ್ಥೆಯ ಪಾತ್ರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಭಾವ ಸಂಗಮ, ಗೋಕಾಕ ಸಂಸ್ಥೆಯ ಪಾತ್ರವಿದೆಯೇ? | i) ಹೌದು | ೭೭ | ೭೭.೦೦ |
| | ii) ಇಲ್ಲಾ | ೨೩ | ೨೩.೦೦ |
| | **ಒಟ್ಟು** | ೧೦೦ | ೧೦೦ |



*ಕೋಷ್ಟಕ – ೬.೩.೯ : ಭಾವ ಸಂಗಮ ಗೋಕಾಕ ಸಂಸ್ಥೆಯು ಸಾಹಿತ್ಯ ಮತ್ತು ಕಲೆಯಲ್ಲಿ ಸರ್ಕಾರಿ ಸಂಸ್ಥೆಗಳಿಗೆ ಮಾದರಿ ಕುರಿತು*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆಯು ಸಾಹಿತ್ಯ ಮತ್ತು ಕಲೆಯಲ್ಲಿ ಸರ್ಕಾರಿ ಸಂಸ್ಥಗಳಿಗೆ ಮಾದರಿಯೇ? | i) ಹೌದು<br>ii) ಇಲ್ಲಾ | ೬೯<br>೩೧ | ೬೯.೦೦<br>೩೧.೦೦ |
| | ಒಟ್ಟು | ೧೦೦ | ೧೦೦ |




ಪ್ರತಿಸ್ಪಂದಿಗಳಲ್ಲಿ ಶೇಕಡಾ ೬೯ರಷ್ಟು ಜನರ ಅಭಿಪ್ರಾಯದಲ್ಲಿ ಭಾವ ಸಂಗಮ ಗೋಕಾಕ ಸಂಸ್ಥೆಯು ಸಾಹಿತ್ಯ ಮತ್ತು ಕಲೆಯಲ್ಲಿ ಸರ್ಕಾರಿ ಸಂಸ್ಥೆಗಳಿಗೆ ಮಾದರಿಯಾಗಿರುತ್ತದೆ. ಶೇಕಡಾ ೩೧ರಷ್ಟು ಜನರ ಅಭಿಪ್ರಾಯದಲ್ಲಿ ಭಾವ ಸಂಗಮ ಗೋಕಾಕ ಸಂಸ್ಥೆಯು ಮಾದರಿಯಾಗಿರುವುದಿಲ್ಲ.

*ಕೋಷ್ಟಕ – ೬.೩.೧೦ : ಭಾವ ಸಂಗಮ ಗೋಕಾಕ ಸಂಸ್ಥೆಯ ವಿವಿಧ ಕಾರ್ಯಗಳ ಪ್ರಗತಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಭಾವ ಸಂಗಮ, ಗೋಕಾಕ ಸಂಸ್ಥೆಯು ಮಾದರಿ ಆದಲ್ಲಿ ಯಾವ ರೀತಿ? | i) ಸತತ ಕಾರ್ಯಕ್ರಮ.<br>ii) ಕ್ರೀಯಾ ಶೀಲತೆ.<br>iii) ಸ್ಪಂದನೆ ಮಾಡುವ ರೀತಿ.<br>iv) ಅತ್ಯುತ್ತಮ ಕಾರ್ಯಕ್ರಮಗಳು<br>v) ಸಂಪನ್ಮೂಲ ವ್ಯಕ್ತಿ | ೪೧<br>೨೨<br>೧೧<br>೧೨<br>೧೪ | ೪೧.೦೦<br>೨೨.೦೦<br>೧೧.೦೦<br>೧೨.೦೦<br>೧೪.೦೦ |
| | ಒಟ್ಟು | ೧೦೦ | ೧೦೦ |




ವಿವಿಧ ವರ್ಗಗಳ ನೂರು ಜನರಿಗೆ ಪ್ರಮುಖವಾದ ಹತ್ತು ಪ್ರಶ್ನೆಗಳನ್ನು ಕೇಳಿ ಪಡೆದುಕೊಂಡ ಮಾಹಿತಿಗಳಿಂದ ತಿಳಿದು ಬರುವ ವಿಷಯಗಳು ಹೀಗಿವೆ :

೧) ಗೋಕಾಕದ ಭಾವಸಂಗಮ ಜನಮನಕ್ಕೆ ಸ್ಪಂದಿಸುತ್ತಿದೆ

೨) ಕಳೆದೆಂಟು ವರ್ಷಗಳಿಂದ ಸಮುದಾಯಮುಖಿಯಾಗಿದೆ

೩) ಸಾಂಸ್ಕೃತಿಕ ಶಿಬಿರಗಳನ್ನು ಏರ್ಪಡಿಸುವುದರ ಮೂಲಕ ಆಸಕ್ತರನ್ನು ಸೆಳೆಯುತ್ತಿದೆ

೪) ಈ ಸಂಸ್ಥೆಯ ಕಾರ್ಯಕ್ರಮಗಳ ಗುಣಮಟ್ಟ ಉತ್ತಮ

೫) ಕಲಾವಿದರನ್ನು ಪ್ರೋತ್ಸಾಹಿಸುತ್ತಿದೆ

೬) ಆಡಳಿತ ನಿರ್ವಹಣೆ ತೃಪ್ತಿಕರ

೭) ಕ್ರೀಯಾಶೀಲ

೮) ಜನಜಾಗೃತಿಯನ್ನುಂಟು ಮಾಡಿದೆ.

**೬.೪ ಮಹಿಳಾ ಸಬಲೀಕರಣ – ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ವಿವಿಧ ಅಭಿವೃದ್ಧಿ ಆಯಾಮಗಳ ವಿಶ್ಲೇಷಣೆ:**

***ಕೋಷ್ಟಕ – ೬.೪.೧ : ಮಹಿಳಾ ಸಮಾಖ್ಯಾ ಕರ್ನಾಟಕ ಬೆಳಗಾವಿ ಸಂಸ್ಥೆಯ ಪರಿಚಯ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಪರಿಚಯ ನಿಮಗಿದಿಯೇ? | i) ಹೌದು | ೩೮ | ೩೮.೦೦ |
| | ii) ಇಲ್ಲಾ | ೬೨ | ೬೨.೦೦ |
| | ಒಟ್ಟು | ೧೦೦ | ೧೦೦ |

ಈ ಸಂಸ್ಥೆ ಹೊಸದು. ಕೇವಲ ಪ್ರತಿಶತ ೩೮ ಜನರಿಗೆ ಮಾತ್ರ ಪರಿಚಿತ ಶೇ ೬೨ ರಷ್ಟು ಜನರಿಗೆ ಅಪರಿಚಿತ.

*ಕೋಷ್ಟಕ – ೬.೪.೨ : ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸ್ಪಂದನೆಯ ರೀತಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಜೊತೆಗೆ ನಿಮ್ಮ ಸ್ಪಂದನೆ ಯಾವ ರೀತಿ ಇದೆ? | i) ಅತ್ಯುತ್ತಮ | ೩೧ | ೩೧.೦೦ |
| | ii) ಉತ್ತಮ | ೪೩ | ೪೩.೦೦ |
| | iii) ಸಮಾಧಾನ | ೨೨ | ೨೨.೦೦ |
| | iv) ಅಸಮಾಧಾನ | ೦೪ | ೦೪.೦೦ |
| | ಒಟ್ಟು | ೧೦೦ | ೧೦೦ |




*ಕೋಷ್ಟಕ ೬.೪.೩ : ಮಹಿಳಾ ಸಮಾಖ್ಯಾ ಕರ್ನಾಟಕ ಬೆಳಗಾವಿ ಸಂಸ್ಥೆಯ ಸಹಾಯದ ರೀತಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನೀವು ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯಿಂದ ಯಾವ ರೀತಿ ಸಹಾಯ ಪಡೆದುಕೊಂಡಿರುವಿರಿ ? | i) ವಿದ್ಯಾಭ್ಯಾಸ | ೩೮ | ೩೮.೦೦ |
| | ii) ಆರೋಗ್ಯ | ೧೭ | ೧೭.೦೦ |
| | iii) ಅರಿವು ಮೂಡಿಸುವ ಕಾರ್ಯಕ್ರಮ | ೨೯ | ೨೯.೦೦ |
| | iv) ಇತರೆ | ೧೪ | ೧೪.೦೦ |
| | ಒಟ್ಟು | ೧೦೦ | ೧೦೦ |




ಈ ಕೋಷ್ಠಕವು ಮಹಿಳಾ ಸಮಾಖ್ಯಾ ಸಂಸ್ಥೆಯ ಅಭಿವೃದ್ಧಿಯಲ್ಲಿಯ ವಿವಿಧ ಕ್ಷೇತ್ರಗಳಲ್ಲಿಯ ಪಾಲುದಾರಿಕೆಯನ್ನು ಸೂಚಿಸುವುದು.

೧) ವಿದ್ಯಾಭ್ಯಾಸದಲ್ಲಿ ಪ್ರತಿಶತ ೩೮

೨) ಆರೋಗ್ಯ ಪ್ರತಿಶತ ೧೭

೩) ಸಾಮಾಜಿಕ ಅರಿವು ಜಾಗೃತಿ ಪ್ರತಿಶತ ೨೯

೪) ಇತರೆ ಪ್ರತಿಶತ ೧೪

***ಕೋಷ್ಟಕ – ೬.೪.೪ : ಮಹಿಳಾ ಸಮಾಖ್ಯಾ ಕರ್ನಾಟಕ ಬೆಳಗಾವಿ ಸಂಸ್ಥೆಯಿಂದ ಪಡೆದ ಪ್ರಯೋಜನ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯಿಂದ ಪ್ರಯೋಜನ ಪಡೆದ ನಂತರ ನಿಮ್ಮ ವ್ಯಕ್ತಿತ್ವದಲ್ಲಿ ಬದಲಾವಣೆ ಆಗಿದಿಯೇ? | i) ಇಲ್ಲ<br>ii) ಹೌದು | ೩೮<br>೬೨ | ೩೮.೦೦<br>೬೨.೦೦ |
| | ಒಟ್ಟು | ೧೦೦ | ೧೦೦ |

ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೬೨ರಷ್ಟು ಜನರ ಅಭಿಪ್ರಾಯದಲ್ಲಿ ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯಿಂದ ಪ್ರಯೋಜನ ಪಡೆದ ನಂತರ ಅವರ ವ್ಯಕ್ತಿತ್ವದಲ್ಲಿ ಬದಲಾವಣೆಯಾಗಿದೆ. ಶೇಕಡಾ ೩೮ರಷ್ಟು ಜನರ ಅಭಿಪ್ರಾಯದಲ್ಲಿ ಬದಲಾವಣೆಯಾಗಿರುವುದಿಲ್ಲ.

***ಕೋಷ್ಟಕ – ೬.೪.೫ : ಮಹಿಳಾ ಸಮಾಖ್ಯಾ ಕರ್ನಾಟಕ ಬೆಳಗಾವಿ ಸಂಸ್ಥೆಯ ಕಾರ್ಯಕ್ರಮದಲ್ಲಿ ಭಾಗವಹಿಸುವಿಕೆ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯು ನಡೆಸುವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೀರಾ? | i) ಹೌದು<br>ii) ಇಲ್ಲ | ೬೨<br>೩೮ | ೬೨.೦೦<br>೩೮.೦೦ |
| | ಒಟ್ಟು | ೧೦೦ | ೧೦೦ |

ಶೇಕಡಾ ೬೮ರಷ್ಟು ಜನರು ಈ ಸಂಸ್ಥೆಯ ಕಾರ್ಯಕ್ರಮದಲ್ಲಿ ಭಾಗವಹಿಸಿರುತ್ತಾರೆ. ಶೇಕಡಾ ೩೮ರಷ್ಟು ಜನರು ಭಾಗವಹಿಸಿರುವುದಿಲ್ಲ.

*ಕೋಷ್ಟಕ –೬.೪.೬ : ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಗುಣಮಟ್ಟ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸೇವೆಯ ಗುಣಮಟ್ಟ? | i) ಅತ್ಯುತ್ತಮ | ೧೮ | ೧೮.೦೦ |
| | ii) ಉತ್ತಮ | ೩೪ | ೩೪.೦೦ |
| | iii) ಸಮಾಧಾನ | ೩೧ | ೩೧.೦೦ |
| | iv) ಅಸಮಾಧಾನ | ೧೭ | ೧೭.೦೦ |
| | ಒಟ್ಟು | ೧೦೦ | ೧೦೦ |

ನೂರು ಪ್ರತಿಸ್ಪಂದಿಗಳಲ್ಲಿ ಕೇವಲ ೩೪ ಜನರಿಗೆ ಈ ಸಂಸ್ಥೆಯ ಸೇವೆಯ ಗುಣಮಟ್ಟ ಉತ್ತಮವೆನಿಸಿದೆ. ೩೧ ಜನರ ಅಭಿಪ್ರಾಯದಲ್ಲಿ ಸಮಾಧಾನಕರ. ೧೮ ಜನರು ಅತ್ಯುತ್ತಮವೆಂದು ಹೇಳಿದ್ದಾರೆ ೧೭ ಜನರಿಗೆ ತೃಪ್ತಿ ತಂದಿಲ್ಲ. ಒಟ್ಟಾರೆ ಜನರಿಗೆ ಮಹಿಳಾ ಸಮಾಖ್ಯಾ ಪೂರ್ಣ ಪ್ರಮಾಣದಲ್ಲಿ ಸ್ಪಂದಿಸುತಿಲ್ಲವೆಂದು ತಿಳಿಯುತ್ತದೆ.

*ಕೋಷ್ಟಕ – ೬.೪.೭ : ನಿರ್ಧಾರದ ಪ್ರವೃತ್ತಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸಂಪರ್ಕ ಬಂದ ನಂತರ ನಿಮ್ಮ ನಿರ್ಧಾರ ತೆಗೆದುಕೊಳ್ಳುವ ಪ್ರವೃತ್ತಿಯಲ್ಲಿ ಬದಲಾವಣೆ ಆಗಿದೆಯೆ? | i) ಇಲ್ಲ | ೩೮ | ೩೮.೦೦ |
| | ii) ಹೌದು | ೬೨ | ೬೨.೦೦ |
| | ಒಟ್ಟು | ೧೦೦ | ೧೦೦ |

ಮಹಿಳಾ ಸಮಾಖ್ಯಾ ಬಹುಪಾಲು ಜನರಿಂದ ದೂರ ಉಳಿದಿದ್ದರೂ ಅದರ ಸಂಪರ್ಕಕ್ಕೆ ಬಂದ ಮಹಿಳೆಚುರ ವ್ಯಕ್ತತ್ವದಲ್ಲಿ ಬದಲಾವಣೆ ತಂದಿದೆ. ಅವರಲ್ಲಿ ಸ್ವಂತ ನಿರ್ಧಾರ ತೆಗೆದುಕೊಳ್ಳುವ ಪ್ರವೃತ್ತಿ ಬೆಳೆದಿದೆ.

*ಕೋಷ್ಟಕ – ೬.೪.೮ : ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಪಾತ್ರ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಪಾತ್ರವಿದೆಯೆ? | i) ಇಲ್ಲ | ೩೮ | ೩೮.೦೦ |
| | ii) ಹೌದು | ೬೨ | ೬೨.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಠಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೬೨ರಷ್ಟು ಜನರ ಅಭಿಪ್ರಾಯದಲ್ಲಿ ತಮ್ಮ ಗ್ರಾಮದ ಸಮಗ್ರ ಆಭಿವೃದ್ಧಿಯಲ್ಲಿ ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಪಾತ್ರ ಪ್ರಾಮುಖ್ಯತೆಯನ್ನು ಹೊಂದಿದೆ. ಶೇಕಡಾ ೩೮ರಷ್ಟು ಜನರ ಅಭಿಪ್ರಾಯದಲ್ಲಿ ಪಾತ್ರ ನಗಣ್ಯ.

*ಕೋಷ್ಠಕ – ೬.೪.೯ : ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯು ಸರ್ಕಾರಿ ಸಂಸ್ಥೆಗಳಿಗೆ ಮಾದರಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆ ಸರ್ಕಾರಿ ಸಂಸ್ಥೆಗಳಿಗೆ ಮಾದರಿಯೇ? | i) ಇಲ್ಲ | ೩೮ | ೩೮.೦೦ |
| | ii) ಹೌದು | ೬೨ | ೬೨.೦೦ |
| | ಒಟ್ಟು | ೧೦೦ | ೧೦೦ |



ಪ್ರತಿಶತ ೬೨ ರಷ್ಟು ಪ್ರತಿಸ್ಪಂದಿಗಳು ಇದು ಮಾದರಿ ಸಂಸ್ಥೆಯೆಂದು ಅಭಿಪ್ರಾಯ ಸೂಚಿಸಿರುವರು.

***ಕೋಷ್ಟಕ – ೬.೪.೧೦ : ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯು ಯಾವ ರೀತಿಯಾಗಿ ಮಾದರಿ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯು ಮಾದರಿ ಆದಲ್ಲಿ ಯಾವ ರೀತಿ? | i) ಸ್ಪಂದನೆ. | ೨೨ | ೨೨.೦೦ |
| | ii) ಮನವೊಲಿಸುವ ಸಾಮರ್ಥ್ಯ. | ೧೮ | ೧೮.೦೦ |
| | iii) ಕಲಿಕಾ ವಿಧಾನ. | ೨೩ | ೨೩.೦೦ |
| | iv) ಜನರೊಂದಿಗೆ ಬೇರೆಯುವಿಕೆ. | ೧೬ | ೧೬.೦೦ |
| | v) ಕಲಿಕೆ ಗುಣಮಟ್ಟ | ೧೨ | ೧೨.೦೦ |
| | vi) ಆರ್ಥಿಕ ಸಹಾಯ. | ೦೪ | ೦೪.೦೦ |
| | vii) ಅರಿವು ಮೂಡಿಸುವ ಮೂಲಕ | ೦೫ | ೦೫.೦೦ |
| | **ಒಟ್ಟು** | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೨೨ರಷ್ಟು ಜನರು ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯ ಸ್ಪಂದನೆಯನ್ನು ಮೆಚ್ಚಿದರೆ ಶೇಕಡಾ ೧೮ರಷ್ಟು ಜನರು ಜನಮನವನ್ನು ಮನವೊಲಿಸುವ ಸಾಮರ್ಥ್ಯವನ್ನು ಶ್ಲಾಘಿಸುವರು. ಕಲಿಕಾ ವಿಧಾನವನ್ನು ಶೇಕಡಾ ೨೩ರಷ್ಟು ಜನರು, ಜನರೊಂದಿಗೆ ಬೆರೆಯುವಿಕೆಯನ್ನು ಶೇ.೧೬ ರಷ್ಟು ಜನರು ಎತ್ತಿ ಹೇಳುವರು. ಶೇಕಡಾ ೧೨ರಷ್ಟು ಜನರಿಗೆ ಮಹಿಳಾ ಸಮಾಖ್ಯಾ ಕರ್ನಾಟಕ ಸಂಸ್ಥೆಯು ಕಲಿಕೆ ಗುಣಮಟ್ಟದಿಂದ ಮಾದರಿಯಾಗಿರುತ್ತದೆ. ಶೇಕಡಾ ೦೪ರಷ್ಟು ಜನರಿಗೆ ಆರ್ಥಿಕ

ಸಹಾಯದಿಂದ ಮಾದರಿಯಾಗಿರುತ್ತದೆ. ಶೇಕಡಾ ೦೫ರಷ್ಟು ಜನರು ಸಂಸ್ಥೆಯು ಜನರಿಗೆ ಅರಿವು ಮೂಡಿಸುವ ಮೂಲಕ ಮಾದರಿಯಾಗಿರುತ್ತದೆ ಎನ್ನುತ್ತಾರೆ. ಈ ಸರ್ಕಾರೇತರ ಸಂಸ್ಥೆಯು ತನ್ನ ವಿನೂತನ ಹಾಗೂ ವಿಭಿನ್ನ ಕಾರ್ಯಕ್ರಮಗಳಿಂದ ಜನಮನ್ನಣೆ ಪಡೆದು ಸಮಾಜಮುಖಿಯಾಗಿದೆ. ಸಾಕ್ಷರತೆಯನ್ನು ಹಾಗೂ ಆರ್ಥಿಕ ಸ್ವಾವಲಂಬತೆಯನ್ನು ಹೆಚ್ಚಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆ. ತನ್ಮೂಲಕ ಮಹಿಳೆಯರನ್ನು ಸ್ವಾವಲಂಬನೆಯತ್ತ ಕೊಂಡೊಯ್ಯುತ್ತಿದೆ.

**೬.೫ ಗ್ರಾಮೀಣ ಅಭಿವೃದ್ಧಿ – ಬರ್ಡ್ಸ್ ಸಂಸ್ಥೆಯ ವಿವಿಧ ಅಭಿವೃದ್ಧಿ ಆಯಾಮಗಳ ವಿಶ್ಲೇಷಣೆ.**

***ಕೋಷ್ಟಕ – ೬.೫.೧ : ಬರ್ಡ್ಸ ತುಕ್ಕಾನಟ್ಟಿ ಸಂಸ್ಥೆಯ ಪರಿಚಯ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಬರ್ಡ್ಸ ತುಕ್ಕಾನಟ್ಟಿ ಸಂಸ್ಥೆಯ ಪರಿಚಯ ಇದೆಯೇ? | i) ಹೌದು<br>ii) ಇಲ್ಲಾ | ೬೮<br>೩೨ | ೬೮.೦೦<br>೩೨.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೬೮ರಷ್ಟು ಜನರಿಗೆ ತುಕ್ಕಾನಟ್ಟಿಯ ಬರ್ಡ್ಸ ಸಂಸ್ಥೆಯ ಪರಿಚಯವಿರುತ್ತದೆ. ಶೇಕಡಾ ೩೨ರಷ್ಟು ಜನರಿಗೆ ಸಂಸ್ಥೆಯ ಪರಿಚಯವಿರುವುದಿಲ್ಲ.

***ಕೋಷ್ಟಕ – ೬.೫.೨ : ಬರ್ಡ್ಸ ತುಕ್ಕಾನಟ್ಟಿ ಸಂಸ್ಥೆಯ ಸೇವಾವಧಿ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಬರ್ಡ್ಸ ತುಕ್ಕಾನಟ್ಟಿ ಸಂಸ್ಥೆಯು ಎಷ್ಟು ವರ್ಷಗಳಿಂದ ನಿಮ್ಮ ಗ್ರಾಮದಲ್ಲಿ ಕರ್ತವ್ಯ ನಿರ್ವಹಿಸುತ್ತಿದೆ? | i) ೧–೪<br>ii) ೫–೯<br>iii) ೧೦ರಿಂದ ಮೇಲ್ಪಟ್ಟು | ೩೨<br>೫೮<br>೧೦ | ೩೨.೦೦<br>೫೮.೦೦<br>೧೦.೦೦ |
| | ಒಟ್ಟು | ೧೦೦ | ೧೦೦ |



ಬರ್ಡ್ಸ್ ಸಂಸ್ಥೆಯು ಅಸ್ತಿತ್ವಕ್ಕೆ ಬಂದದ್ದು ೧೯೮೦ ರಲ್ಲಿ. ಈಗ ಈ ಸಂಸ್ಥೆಗೆ ಮೂವತ್ತರ ಹರೆಯ. ಆದರೆ ಜನರಿಗೆ ಸಂಸ್ಥೆಯ ಪರಿಚಯವಾದದ್ದು ಕಳೆದ ಹತ್ತು ವರ್ಷಗಳಿಂದೀಚೆಗೆ ಮಾತ್ರ. ಅವರ ಅಭಿಪ್ರಾಯವನ್ನು ಪರಿಗಣಿಸಿದರೆ ಅದು ಹೆಚ್ಚು ಜನಮುಖಿಯಾದುದು ಇತ್ತೀಚಿನ ದಿನಗಳಲ್ಲಿ ಎಚಿದು ಹೇಳಬೇಕಾಗುತ್ತದೆ.

*ಕೋಷ್ಟಕ – ೬.೫.೩ : ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಸೌಲಭ್ಯಗಳು*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯಿಂದ ಯಾವ ರೀತಿಯ ಸೌಲಭ್ಯ ಪಡೆದುಕೊಂಡಿರುತ್ತೀರಿ? | i) ಆರೋಗ್ಯ ವಿದ್ಯಾಭ್ಯಾಸ. | ೭೪ | ೭೪.೦೦ |
| | ii) ಆರ್ಥಿಕ ಸಹಾಯ. | ೧೨ | ೧೨.೦೦ |
| | iii) ಅರಿವು ಮೂಡಿಸುವ ಕಾರ್ಯಕ್ರಮ. | ೧೧ | ೧೧.೦೦ |
| | iv) ಕೃಷಿ ಚಟುವಟಿಕೆಗಳ ಮಾಹಿತಿ | ೦೩ | ೦೩.೦೦ |
| | ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೭೪ರಷ್ಟು ಜನ ಬರ್ಡ್ಸ್ ಸಂಸ್ಥೆಯ ಆರೋಗ್ಯ ವಿದ್ಯಾಭ್ಯಾಸಗಳ ಸೌಲಭ್ಯ ಪಡೆದುಕೊಳ್ಳುತ್ತಿದ್ದಾರೆ. ಶೇಕಡಾ ೧೨ರಷ್ಟು ಜನ ಆರ್ಥಿಕ ಸಹಾಯ ಸೌಲಭ್ಯ ಪಡೆದುಕೊಳ್ಳುತ್ತಿದ್ದಾರೆ. ಶೇಕಡಾ ೧೧ರಷ್ಟು ಜನ ಅರಿವು ಮೂಡಿಸುವ ಅದರ ಕಾರ್ಯಕ್ರಮಗಳ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ. ಶೇಕಡಾ ೦೩ರಷ್ಟು ಜನರಿಗೆ ಅದರ ಕೃಷಿ ಚಟುವಟಿಕೆಗಳ ಮಾಹಿತಿ ಇದೆ.

*ಕೋಷ್ಟಕ – ೬.೫.೪ : ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಆಡಳಿತ ಮಂಡಳಿಯ ಬಗ್ಗೆ ಅಭಿಪ್ರಾಯ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಆಡಳಿತ ಮಂಡಳಿಯ ಆಡಳಿತದ ಬಗ್ಗೆ ನಿಮ್ಮ ಅಭಿಪ್ರಾಯ? | i) ಅತ್ಯುತ್ತಮ | ೧೫ | ೧೫.೦೦ |
| | ii) ಉತ್ತಮ | ೬೩ | ೬೩.೦೦ |
| | iii) ಸಮಾಧಾನ | ೧೭ | ೧೭.೦೦ |
| | iv) ಅಸಮಾಧಾನ | ೦೫ | ೦೫.೦೦ |
| | ಒಟ್ಟು | ೧೦೦ | ೧೦೦ |



*ಕೋಷ್ಟಕ – ೬.೫.೫ : ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯ ಬಗ್ಗೆ ಅಭಿಪ್ರಾಯ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆ ಸರ್ಕಾರಿ ಸಂಸ್ಥೆಗೆ ಮಾದರಿಯೇ? | i) ಹೌದು | ೬೮ | ೬೮.೦೦ |
| | ii) ಇಲ್ಲಾ | ೩೨ | ೩೨.೦೦ |
| | ಒಟ್ಟು | ೧೦೦ | ೧೦೦ |

ಪ್ರತಿಶತ ೬೮ ರಷ್ಟು ಜನರಿಗೆ ಇದರ ಬಗ್ಗೆ ಸದಭಿಪ್ರಾಯವಿದೆ.

*ಕೋಷ್ಟಕ – ೬.೫.೬ : ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯು ಯಾವ ರೀತಿಯಾಗಿ ಮಾದರಿ*

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆ ಸರ್ಕಾರಿ ಸಂಸ್ಥೆಗೆ ಮಾದರಿ ಆದಲ್ಲಿ ಯಾವ ರೀತಿ? | i) ಸ್ಪಂದನೆ. | ೧೨ | ೧೨.೦೦ |
| | ii) ಮನವೊಲಿಸುವ ಸಾಮರ್ಥ. | ೧೪ | ೧೪.೦೦ |
| | iii) ಕಲಿಕಾ ವಿಧಾನ. | ೧೯ | ೧೯.೦೦ |
| | iv) ಜನರೊಂದಿಗೆ ಬೇರೆಯುವಿಕೆ. | ೨೧ | ೨೧.೦೦ |
| | v) ಕಲಿಕೆ ಗುಣಮಟ್ಟ. | ೧೧ | ೧೧.೦೦ |
| | vi) ಆರ್ಥಿಕ ಸಹಾಯ. | ೧೩ | ೧೩.೦೦ |
| | vii) ಅರಿವು ಮೂಡಿಸುವ ಮೂಲಕ | ೧೦ | ೧೦.೦೦ |
| | ಒಟ್ಟು | ೧೦೦ | ೧೦೦ |




ಈ ಮೇಲಿನ ಕೋಷ್ಟಕವನ್ನು ಪರಿಶೀಲಿಸಲಾಗಿ ಮಾಹಿತಿ ಸಂಗ್ರಹಿಸಿದ ಗ್ರಾಮಗಳಲ್ಲಿ ಶೇಕಡಾ ೧೨ರಷ್ಟು ಜನರ ಅಭಿಪ್ರಾಯದಲ್ಲಿ ಸ್ಪಂದನೆಯಿಂದ ಮಾದರಿಯಾಗಿರುತ್ತದೆ. ಶೇಕಡಾ ೧೪ರಷ್ಟು ಜನರ ಅಭಿಪ್ರಾಯದಲ್ಲಿ ಬರ್ಡ್ಸ್ ತುಕ್ಕಾನಟ್ಟಿ ಸಂಸ್ಥೆಯು ಜನರ ಮನವೊಲಿಸುವ ಸಾಮರ್ಥ್ಯದಿಂದ ಮಾದರಿಯಾಗಿರುತ್ತದೆ. ಶೇಕಡಾ ೧೯ರಷ್ಟು ಜನರು ಸಂಸ್ಥೆಯ ಕಲಿಕಾ ವಿಧಾನ ಶೇಕಡಾ ೨೧ರಷ್ಟು ಜನರು ಸಂಸ್ಥೆಯ ಜನರೊಂದಿಗೆ ಬೇರೆಯುವುದನ್ನು ಶ್ಲಾಘಿಸಿದ್ದಾರೆ. ಶೇಕಡಾ ೧೧ರಷ್ಟು ಜನರು ಅದರ ಕಲಿಕೆ ಗುಣಮಟ್ಟ ಹಾಗೂ ಶೇಕಡಾ ೧೩ರಷ್ಟು ಜನರು ಆರ್ಥಿಕ ಸಹಾಯದ ಕುರಿತು

ಸದಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಶೇಕಡಾ ೧೦ರಷ್ಟು ಜನರು ಅರಿವು ಮೂಡಿಸುವ ಮೂಲಕ ಮಾದರಿಯಾಗಿರುತ್ತದೆ ಎನ್ನುತ್ತಾರೆ.

***ಕೋಷ್ಟಕ – ೬.೫.೭ : ಗ್ರಾಮೀಣ ಸಮಗ್ರ ಅಭಿವೃದ್ಧಿಯಲ್ಲಿ ಬರ್ಡ್ಸ ತುಕ್ಕಾನಟ್ಟಿ ಸಂಸ್ಥೆಯ ಪಾತ್ರ***

| ಪ್ರಶ್ನೆ | ಅಭಿಪ್ರಾಯ | ಸಂಖ್ಯೆ | ಪ್ರತಿಶತ |
|---|---|---|---|
| ನಿಮ್ಮ ಗ್ರಾಮದ ಸಮಗ್ರ ಅಭಿವೃದ್ಧಿಯಲ್ಲಿ ಬರ್ಡ್ಸ ತುಕ್ಕಾನಟ್ಟಿ ಸಂಸ್ಥೆಯು ಪಾಲನ್ನು ಹೊಂದಿದೆಯೇ? | i) ಹೌದು<br>ii) ಇಲ್ಲಾ | ೬೮<br>೩೨ | ೬೮.೦೦<br>೩೨.೦೦ |
| | **ಒಟ್ಟು** | ೧೦೦ | ೧೦೦ |




ಸರ್ಕಾರೇತರ ಸಂಸ್ಥೆಗಳು ಸಮಾಜಮುಖಿಯಾಗಿ ಎಲ್ಲಾ ರಂಗಗಳಲ್ಲಿಯೂ ಸರ್ಕಾರಿ ರಂಗಕ್ಕೆ ಮಾದರಿ ಆಗಿವೆ. ಸರ್ಕಾರೇತರ ಸಂಸ್ಥೆಗಳ ಅಧ್ಯಯನದ ಸಂದರ್ಭದಲ್ಲಿ ತಿಳಿದು ಬರುವದೆನೆಂದರೆ ಹೆಚ್ಚಿನ ಪ್ರತಿಸ್ಪಂದಿಗಳು ಸರ್ಕಾರೇತರ ಸಂಘಗಳ ಬಗ್ಗೆ ತಮ್ಮ ತೃಪ್ತಿಯನ್ನು ವ್ಯಕ್ತ ಪಡಿಸಿ, ಹೆಚ್ಚಿನ ಅನುಕೂಲಗಳನ್ನು ಪಡೆದಿರುತ್ತಾರೆಂದು ಕಂಡುಬರುತ್ತದೆ. ಹೆಚ್ಚಿನ ಸರ್ಕಾರೇತರ ಸಂಸ್ಥೆಗಳು ಸಾರ್ವಜನಿಕರ ಜೊತೆಗೂಡಿ ಕೆಲಸ ಮಾಡುತ್ತಿವೆ. ಇದರಿಂದಾಗಿ ಸರ್ಕಾರೇತರ ಸಂಸ್ಥೆಗಳು ಸಮಾಜಮುಖಿಯಾಗಿವೆ ಎನ್ನುವದರಲ್ಲಿ ಎರಡು ಮಾತ್ತಿಲ್ಲ. ಆರೋಗ್ಯ ಕ್ಷೇತ್ರದಲ್ಲಿ 'ಜೆ.ಜಿ.ಕೋ' ಘಟಪ್ರಭಾ, ಶಿಕ್ಷಣ ಕ್ಷೇತ್ರದಲ್ಲಿ 'ಕೆ.ಎಲ್.ಇ' ಬೆಳಗಾವಿ, ಮಹಿಳಾ ಸಬಲೀಕರಣ ಕ್ಷೇತ್ರದಲ್ಲಿ ಮಹಿಳಾ ಸಮಾಖ್ಯಾ, ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ಬರ್ಡ್ಸ ಸಂಸ್ಥೆ, ಕಲೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಭಾವಸಂಗಮ ಸಂಸ್ಥೆಗಳು ಜಿಲ್ಲೆಯ ಸಮಗ್ರ ಅಭಿವೃದ್ಧಿಯಲ್ಲಿ ಕ್ರಿಯಾಶೀಲವಾಗಿವೆ.

************

## ಅಧ್ಯಾಯ – ೭

# ಸಮಾರೋಪ, ಫಲಿತಗಳು ಮತ್ತು ಸಲಹೆಗಳು

೭.೧ ಪ್ರಸ್ತಾವನೆ

೭.೨ ಫಲಿತಗಳು

೭.೩ ಅಧ್ಯಯನದ ಊಹೆಗಳ ಸತ್ಯಾಸತ್ಯತೆಯ ಪರಿಶೀಲನೆ

೭.೪ ಸರ್ಕಾರೇತರ ಸಂಸ್ಥೆಗಳು ಎದುರಿಸುತ್ತಿರುವ ಸವಾಲುಗಳು

೭.೫ ಸುಧಾರಣೆಗೆ ಸಲಹೆಗಳು

ಅಧ್ಯಾಯ – ೭

# ಸಮಾರೋಪ, ಫಲಿತಗಳು ಮತ್ತು ಸಲಹೆಗಳು

**೭.೧ ಪ್ರಸ್ತಾವಣೆ :**

ಎಲ್ಲಾ ಸಂಶೋಧನೆಯ ಮೂಲ ಉದ್ದೇಶವೆನೆಂದರೆ ಸಮಸ್ಯೆಗಳನ್ನು ಕಂಡುಹಿಡಿದು ಅದಕ್ಕೆ ಪರಿಹಾರವನ್ನು ಸೂಚಿಸುವುದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳ ಬಗ್ಗೆ ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಈ ಉದ್ದೇಶಕ್ಕಾಗಿ ಪ್ರಶ್ನಾವಳಿಗಳ ಮೂಲಕ ಪ್ರಾಥಮಿಕ ಪ್ರತಿಸ್ಪಂದಿಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಸಂಶೋಧನೆಯಿಂದ ಕಂಡು ಬಂದಿರುವ ಕೆಲವು ಕುತೂಹಲಕಾರಿ ಅಂಶಗಳನ್ನು ಇಲ್ಲಿ ದಾಖಲಿಸಲಾಗಿದೆ. ಅಧ್ಯಯನ ಕಾಲದಲ್ಲಿ ಒಟ್ಟು ೫ ಸರ್ಕಾರೇತರ ಸಂಸ್ಥೆಗಳನ್ನು ಆಯ್ದುಕೊಂಡಿದ್ದು, ಅವು ವಿವಿಧ ಕ್ಷೇತ್ರಗಳಲ್ಲಿ ಹೆಸರುವಾಸಿಯಾಗಿದ್ದು ವೈವಿಧ್ಯತೆಯಿಂದ ಕೂಡಿವೆ. ಪ್ರತಿ ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ನೂರು ಜನ ಪ್ರತಿಸ್ಪಂದಿಗಳನ್ನು ಸಂದರ್ಶಿಸಿ ಮಾಹಿತಿಗಳನ್ನು ಸಂಗ್ರಹಿಲಾಗಿದೆ. ಒಟ್ಟು ೫೦೦ ಜನ ಮಾಹಿತಿದಾರಿಂದ ಸಂಗ್ರಹಿಸಲಾದ ಮಾಹಿತಿಯನ್ನು ಸರಳ ಕೋಷ್ಟಕಗಳ ಮೂಲಕ ಪ್ರಸ್ತುತ ಪಡಿಸಿ, ವಿಶ್ಲೇಷಿಸಲಾಗಿದೆ. ಅವುಗಳ ಅನುಲಕ್ಷಣದಿಂದ ಕಂಡುಬಂದಿರುವ ಫಲಿತಗಳನ್ನು ಇಲ್ಲಿ ದಾಖಲಿಸಲಾಗಿದೆ.

**೭.೨ ಫಲಿತಗಳು :**

೧. ಜಿಲ್ಲೆಯ ಮಹಿಳೆಯರು ಸರ್ಕಾರೇತರ ಸಂಸ್ಥೆಗಳಿಂದ ಹೆಚ್ಚಿನ ಲಾಭವನ್ನು ಪಡೆಯುತ್ತಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ (ಶೇಕಡಾ ೬೫.೬) ಮಹಿಳೆಯರು ಸರ್ಕಾರೇತರ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಪಾಲ್ಗೋಳ್ಳುವುದರ ಜೊತೆಗೆ ಸಮುದಾಯದ ಅಭಿವೃದ್ಧಿಗೆ ಶ್ರಮಿಸುತ್ತಾರೆ. ಮಹಿಳೆಯರ ಪಾಲ್ಗೊಳ್ಳುವಿಕೆ ದೇಶದ ಅಭಿವೃದ್ಧಿಗೆ ಭದ್ರಬುನಾದಿ (ಕೋಷ್ಟಕ ೫.೧)

೨. ಅಧ್ಯಯನ ಕಾಲದಲ್ಲಿ ಸಂದರ್ಶಿಸಲಾದ ಪ್ರತಿಸ್ಪಂದಿಗಳ ವಯಸ್ಸನ್ನು ಗಮನಿಸಿದಾಗ ಕಂಡು ಬರುವ ಅಂಶವೇನೆಂದರೆ ಹೆಚ್ಚಿನ ಯುವ ಸಮೂಹವು, ಅಂದರೆ ೨೧ ರಿಂದ ೪೦ ವಯೋಮಾನದ ಶೇಕಡಾ ೬೮.೬ ರಷ್ಟು ಯುವಕರು ಸರ್ಕಾರೇತರ ಸಂಸ್ಥೆಗಳತ್ತ ಒಲವನ್ನು ತೋರಿಸುತ್ತಿದ್ದಾರೆ ಮತ್ತು

ಯುವಕ ಸಮೂಹವು ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿದೆ (ಕೋಷ್ಟಕ ೫.೨)

೩. ಸಂಶೋಧನೆಯ ಸಮಯದಲ್ಲಿ ಸಂದರ್ಶಿಸಲಾದ ಪ್ರತಿಸ್ಪಂದಿಗಳ ವಿದ್ಯಾರ್ಹತೆಯನ್ನು ಗಮನಿಸಿದಾಗ ಕಂಡುಬರುವ ಅಂಶವೇನೆಂದರೆ ಹೆಚ್ಚಿನ ವಿದ್ಯಾವಂತರು, ಶೇಕಡಾ ೭೩.೬ ರಷ್ಟು ಸರ್ಕಾರೇತರ ಸಂಸ್ಥೆಗಳ ಜೊತೆಗೆ ಕೈಜೋಡಿಸಿ ಸಮುದಾಯದ ಅಭಿವೃದ್ಧಿಗೆ ಶ್ರಮಿಸುತ್ತಾರೆ.(ಕೋಷ್ಟಕ ೫.೩)

೪. ಇನ್ನೊಂದು ವಿಶೇಷ ಅಂಶ ತಿಳಿದು ಬರುವುದೇನೆಂದರೆ ಹೆಚ್ಚಿನ ಸಂಖ್ಯೆಯ (ಶೇಕಡಾ ೪೩) ಕೆಳವರ್ಗದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪ್ರತಿಸ್ಪಂದಿಗಳು ಸರ್ಕಾರೇತರ ಸಂಸ್ಥೆಗಳ ಸೌಲಭ್ಯಗಳನ್ನು ಪಡೆದ ಫಲಾನುಭವಿಗಳಾಗಿದ್ದಾರೆ (ಕೋಷ್ಟಕ ೫.೫).

೫. ಬೆಳಗಾವಿ ಜಿಲ್ಲೆಯಲ್ಲಿ ಸಂದರ್ಶಿಸಿದ ಮಾಹಿತಿದಾರರಿಂದ ಪಡೆದ ಮಾಹಿತಿಯಿಂದ ಕಂಡುಬಂದಿರುವ ಇನ್ನೊಂದು ಅಂಶವೆಂದರೆ ಶೇಕಡಾ ೮೭ ರಷ್ಟು ವಿವಾಹಿತ ಮಹಿಳೆಯರೇ ಸರ್ಕಾರೇತರ ಸಂಸ್ಥೆಗಳಿಂದ ಹೆಚ್ಚಿನ ಪ್ರಯೋಜನ ಪಡೆಯುತ್ತಿದ್ದಾರೆ (ಕೋಷ್ಟಕ ೫.೬)

೬. ಸರ್ಕಾರೇತರ ಸಂಸ್ಥೆಗಳಿಂದ ಪ್ರಯೋಜನ ಪಡೆದ ಹೆಚ್ಚಿನ ಶೇಕಡಾ ೬೦.೨ ರಷ್ಟು ಜನರು ಕೃಷಿಗೆ ಸಂಭಂಧಿಸಿದ ಕೆಲಸಗಳಲ್ಲಿ ತೊಡಗಿಕೊಂಡಿರುವುದು (ಕೋಷ್ಟಕ ೫.೮)

೭. ಸಮೀಕ್ಷೆಯಲ್ಲಿನ ಪ್ರತಿಸ್ಪಂದಿಗಳ ವಾರ್ಷಿಕ ಆದಾಯವನ್ನು ಗಮನಿಸಿದಾಗ ಇನ್ನೊಂದು ಸಂಗತಿ ಕಂಡು ಬರುತ್ತದೆ. ಹೆಚ್ಚಿನ ಜನರು ಕಡಿಮೆ ಆದಾಯಗಳನ್ನು ಹೊಂದಿದ್ದು ಸರ್ಕಾರೇತರ ಸಂಸ್ಥೆಗಳು ಇಂತಹ ಜನರ ಅಭಿವೃದ್ಧಿಯಲ್ಲಿಯೇ ಕಾರ್ಯಕ್ಷೇತ್ರಗಳನ್ನು ಹೊಂದಿವೆ ಮತ್ತು ಇಂತಹ ಜನರ ಕಷ್ಟಗಳನ್ನು ಪರಿಹರಿಸುವದು ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಕಂಡು ಕೊಂಡಿರುವ ಪರಿಹಾರ ಕಾರ್ಯವಾಗಿದೆ (ಕೋಷ್ಟಕ ೫.೧೦)

೮. ಅಧ್ಯಯನಕ್ಕೊಳಪಡಿಸಿದ ಪ್ರತಿಸ್ಪಂದಿಗಳಲ್ಲಿ ಗರಿಷ್ಟ ಸಂಖ್ಯೆಯ (ಶೇಕಡಾ ೭೧.೨) ಪ್ರತಿಸ್ಪಂದಿಗಳ ಕುಟುಂಬಗಳಲ್ಲಿ ಇನ್ನೂ ೫ ರಿಂದ ೮ ಜನರು ಒಟ್ಟಿಗೆ ವಾಸಿಸುತ್ತಿರುವುದು ಕಂಡು ಬಂದಿದೆ. ಅದು ಸಧ್ಯದ ಸ್ಥಿತಿಯಲ್ಲಿ ಕುಟುಂಬದ ಗಾತ್ರದ ದೃಷ್ಟಿಯಿಂದ ಅಧಿಕವೆನಿಸುತ್ತಿದೆ. ಚಿಕ್ಕ ಕುಟುಂಬ, ಚೊಕ್ಕ ಕುಟುಂಬವೆನ್ನುವುದು ಇನ್ನೂ ಅರಿವಿಗೆ ಬಂದಂತೆ ಕಾಣಿಸುವುದಿಲ್ಲಾ (ಕೋಷ್ಟಕ ೫.೧೨)

೯. ಒಟ್ಟು ಪ್ರತಿಸ್ಪಂದಿಗಳಲ್ಲಿ ಶೇಕಡಾ ೭೬.೪ ರಷ್ಟು ಜನರು ಶೌಚಾಲಯದ ಸೌಲಭ್ಯವನ್ನು ಹೊಂದಿರುವುದಿಲ್ಲವೆಂಬುವುದು ಕಂಡು ಬಂದಿದೆ. ಇದು ಕಳವಳಕಾರಿ ಸಂಗತಿಯಾಗಿದೆ (ಕೋಷ್ಟಕ ೫.೧೩)

೧೦. ಸಮೀಕ್ಷೆಯ ಕ್ಷೇತ್ರದಲ್ಲಿನ ಒಂದೊಂದು ಗ್ರಾಮದಲ್ಲಿ ಕಾರ್ಯಗೈಯ್ಯುತ್ತಿರುವ ಸರ್ಕಾರೇತರ ಸಂಸ್ಥೆಗಳ ಸಂಖ್ಯೆಯನ್ನು ಪರಿಶೀಲಿಸಿದಾಗ ತಿಳಿದುಬರುವದೇನೆಂದರೆ, 'ಸರ್ಕಾರೇತರ ಸಂಸ್ಥೆ'ಗಳು ಇಲ್ಲದ ಯಾವುದೊಂದು ಗ್ರಾಮ ಇಲ್ಲವೇ ಇಲ್ಲ. ಪ್ರತಿಯೊಂದು ಗ್ರಾಮದಲ್ಲಿ ಕನಿಷ್ಠ ಒಂದಾದರೂ 'ಸರ್ಕಾರೇತರ ಸಂಸ್ಥೆ' ಕಾರ್ಯಗೈಯ್ಯುತ್ತಿದೆ. ಇದರಲ್ಲಿ ಕೆಲವು ನೋಂದಣಿ ಹೊಂದಿದ ಮತ್ತೆ ಕೆಲವು ನೋಂದಣಿ ರಹಿತವಾಗಿವೆ (ಕೋಷ್ಟಕ ೫.೧೬)

೧೧. ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಹೆಚ್ಚು ಜನಮುಖಿಯಾಗಿವೆ ಮತ್ತು ತಮ್ಮ ಕಾರ್ಯಗಳಿಂದ ಜನಮನ್ನಣೆಯನ್ನು ಗಳಿಸಿವೆ. ಗರಿಷ್ಠ ಸಂಖ್ಯೆಯ (೯೬.೪%) ಸರ್ಕಾರೇತರ ಸಂಸ್ಥೆಗಳು ಜನರೊಂದಿಗೆ ಬೆರೆತು ಸ್ನೇಹಪರ ಮನೋಧರ್ಮವನ್ನು ಹೊಂದಿವೆ (ಕೋಷ್ಟಕ ೫.೧೮). ಪ್ರತಿ ಕ್ಷೇತ್ರದ ಅಭಿವೃದ್ಧಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿವೆ. ಪ್ರತಿಸ್ಪಂದಿಗಳ ಅಭಿಪ್ರಾಯದಂತೆ ಸರ್ಕಾರೇತರ ಸಂಸ್ಥೆಗಳು ಜನರ ಜೊತೆಗೆ ಕೆಲಸ ಮಾಡುತ್ತ ಜನರ ಬೇಕು–ಬೇಡಗಳನ್ನು ಪೂರೈಸುವತ್ತ ಅಗತ್ಯ ಯೋಜನೆಗಳನ್ನು ಹಾಕಿಕೊಂಡು ಜನಮುಖಿಯಾಗಿವೆ. ಹೆಚ್ಚಿನ ಸರ್ಕಾರೇತರ ಸಂಸ್ಥೆಗಳಿಂದ ಸಾರ್ವಜನಿಕರು ಉಪಯೋಗವನ್ನು ಪಡೆದಿದ್ದಾರೆ (ಕೋಷ್ಟಕ ೫.೧೯)

೧೨. ಸರ್ಕಾರೇತರ ಸಂಸ್ಥೆಗಳ ಎಲ್ಲ ತರಹದ ಸಹಾಯದಲ್ಲಿ ಹೆಚ್ಚಿಗೆ ಸಹಾಯವು (ಶೇಕಡಾ ೨೮ ರಷ್ಟು) ಮಹಿಳಾ ಸಬಲೀಕರಣಕ್ಕೆ ಒದಗಿದೆ (ಕೋಷ್ಟಕ ೫.೨೦)

ಈ ಮೇಲಿನ ಎಲ್ಲ ಫಲಿತಗಳಿಂದ ಕಂಡುಬಂದಿರುವ ಇನ್ನೊಂದು ಮುಖ್ಯ ಅಂಶವೆಂದರೆ ಬೆಳಗಾವಿ ಜಿಲ್ಲೆಯಲ್ಲಿನ ಸರ್ಕಾರೇತರ ಸಂಸ್ಥೆಗಳು ಸರ್ಕಾರಿ ಸಂಸ್ಥೆಗಳಿಗೆ ಮಾದರಿಯಾಗಿವೆ. ಅಧ್ಯಯನದ ಪ್ರತಿ ಕ್ಷೇತ್ರದಲ್ಲಿಯೂ ಒಂದೊಂದು ಸರ್ಕಾರೇತರ ಸಂಸ್ಥೆಯನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಪ್ರತಿ ಕ್ಷೇತ್ರದಲ್ಲಿಯ ಫಲಾನುಭವಿಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಿದಾಗ ಈ ಅಂಶವು ಸ್ಪಷ್ಟವಾಗಿ ಕಂಡುಬರುತ್ತದೆ.

೧೩. ಆರೋಗ್ಯ ಕ್ಷೇತ್ರದಲ್ಲಿ ಸಮೀಕ್ಷೆ ಮಾಡಿದಂತೆ ಸರ್ಕಾರಿ ಸಂಸ್ಥೆಗಳಿಗಿಂತ ಸರ್ಕಾರೇತರ ಸಂಸ್ಥೆಗಳು ಹೆಚ್ಚು ಜನಪ್ರೀಯವಾಗಿದ್ದು, ಹೆಚ್ಚು ಜನಮುಖಿಯಾಗಿ ಜನಪರ ಕೆಲಸಗಳನ್ನು ಮಾಡುತ್ತಿವೆ. ಇದರಿಂದಾಗಿ ಸಾರ್ವಜನಿಕರಿಗೆ ಸರ್ಕಾರೇತರ ಸಂಸ್ಥೆಗಳು ಒಳ್ಳೆಯ ಕೆಲಸಗಳನ್ನು ಮಾಡುತ್ತಿರುವುದರ ಬಗ್ಗೆ ವಿಶ್ವಾಸವು ಹೆಚ್ಚಾಗಿರುತ್ತದೆ. ಒಟ್ಟಿನಲ್ಲಿ ಸರ್ಕಾರೇತರ ಸಂಸ್ಥೆಯಾದ ಜೆ. ಜಿ. ಸಹಕಾರಿ ಆಸ್ಪತ್ರೆ ಸಂಸ್ಥೆಯು ಗೋಕಾಕ ತಾಲೂಕಿನ ಜನರ ಆರೋಗ್ಯದ ಸೇವೆಯ ಬೇಡಿಕೆಯನ್ನು ಪೂರೈಸುವುದರ ಜೊತೆಗೆ ಬೆಳಗಾವಿ ಜಿಲ್ಲೆಯ ಅಭಿವೃದ್ಧಿಯಲ್ಲಿ ತನ್ನದೇ ಆದಂತಹ ಕೊಡುಗೆಯನ್ನು ನೀಡಿದೆಯೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.ಸಮೀಕ್ಷೆ ಮಾಡಿದ ಪ್ರದೇಶಗಳಲ್ಲಿ ಪ್ರತಿಸ್ಪಂದಿಗಳ ಅಭಿಪ್ರಾಯದಂತೆ

ಶೇ.೯೬ ರಷ್ಟು ಜನರು ಜೆ. ಜಿ. ಸಹಕಾರಿ ಆಸ್ಪತ್ರೆಯ ಪರಿಚಯವಿದೆ ಎಂದು ತಿಳಿಸುತ್ತಾರೆ ಮತ್ತು ಶೇ.೮೪ ರಷ್ಟು ಜನರು ಈ ಸರ್ಕಾರೇತರ ಸಂಸ್ಥೆಯು ನಡೆಸುವ ಆರೋಗ್ಯ ಶಿಬಿರಗಳಲ್ಲಿ ಭಾಗಿಯಾಗಿದ್ದಾರೆ, ಅದೇ ರೀತಿ ಶೇ.೬೬ ರಷ್ಟು ಜನರು ಜೆ. ಜಿ. ಸಹಕಾರಿ ಆಸ್ಪತ್ರೆ ಮಾಡುವ ಸೇವೆಯು ಉತ್ತಮವಾಗಿದೆಯೆಂದು ಅಭಿಪ್ರಾಯ ಪಡುತ್ತಾರೆ. ಮತ್ತು ಶೇ.೭೪ ರಷ್ಟು ಜನರು ಜೆ. ಜಿ. ಸಹಕಾರಿ ಆಸ್ಪತ್ರೆ ಆರೋಗ್ಯ ಕ್ಷೇತ್ರದಲ್ಲಿ ಈ ಭಾಗದ ಜನರ ಅನುಕೂಲತೆಗಳಿಗೆ ಸ್ಪಂದಿಸಿದೆ ಎಂದು ಅಭಿಪ್ರಾಯ ಪಡುತ್ತಾರೆ. ಇದರಿಂದಾಗಿ ಜೆ. ಜಿ. ಸಹಕಾರಿ ಆಸ್ಪತ್ರೆ ಎಂಬ ಸರ್ಕಾರೇತರ ಸಂಸ್ಥೆಯು ಜನಪರ ಕಾಳಜಿಯನ್ನು ಹೊಂದಿ ಜನಮುಖಿಯಾಗಿದೆ ಮತ್ತು ಈ ಭಾಗದ ಸರ್ಕಾರಿ ಸೇವೆಗೆ ಹೋಲಿಸಿದಲ್ಲಿ ಸರ್ಕಾರೇತರ ಸಂಸ್ಥೆಯ ಸೇವೆಯನ್ನು, ಪ್ರಮುಖವಾಗಿ ವೈದ್ಯಕೀಯ ಸೇವೆ ಮಾಡುವದರಲ್ಲಿ ಸರ್ಕಾರಿ ರಂಗಕ್ಕೆ ಮಾದರಿಯಾಗಿದೆ ಎಂದೇ ಹೇಳಬೇಕಾಗುತ್ತದೆ (ಕೋಷ್ಟಕ ೬.೧.೧ ರಿಂದ ೬.೧.೧೬ ರ ವರೆಗೆ)

೧೪. ಸರ್ಕಾರಿ ಶಾಲೆಗಳು ಹೆಚ್ಚಿದ್ದರೂ ಪ್ರತಿಸ್ಪಂದಿಗಳು ಖಾಸಗಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಸೇರಿಸುವದೆಡೆಗೆ ಹೆಚ್ಚಿನ ಒಲವು ಇದ್ದದ್ದು ಕಂಡು ಬರುತ್ತದೆ. ಸರ್ಕಾರಿ ಶಾಲೆಗೆ ಸೇರಿಸುವ ಪಾಲಕರಿಗೆ ಅಲ್ಲಿರುವ ಕಡಿಮೆ ಶುಲ್ಕ ಒಂದೇ ಮುಖ್ಯ ಕಾರಣವೆನಿಸಿದೆ. ಖಾಸಗಿ ಶಾಲೆಗಳೆಡೆಗೆ ಒಲವು ತೋರಿಸಲು ಉತ್ತಮ ಬೋಧನೆ ಆಕರ್ಷಕ ಅಂಶವಾಗಿದೆ. ಖಾಸಗಿ ಶಿಕ್ಷಣ ಕ್ಷೇತ್ರದಲ್ಲಿ ಕೆ.ಎಲ್.ಇ ಸಂಸ್ಥೆಯ ಹೆಸರನ್ನು ಶೇಕಡಾ ೯೮ ರಷ್ಟು ಪ್ರತಿಸ್ಪಂದಿಗಳು ಕೇಳಿದ್ದು ಕಂಡು ಬಂದಿದೆ. ಖಾಸಗಿ ಶಾಲೆಗಳಲ್ಲಿಯೇ ಕೆ.ಎಲ್.ಇ ಸಂಸ್ಥೆಯು ತನ್ನದೇಯಾದ ಹೆಸರು ಗಳಿಸಿದೆ. ಅದಕ್ಕೆ ಅತ್ಯುತ್ತಮ ಮೂಲಭೂತ ಸೌಕರ್ಯಗಳಿರುವುದು ಪ್ರಮುಖ ಕಾರಣವಾಗಿದೆ. ತಮ್ಮ ಗ್ರಾಮದ ಅಭಿವೃದ್ಧಿಯಲ್ಲಿ ಸಂಸ್ಥೆಯ ಪಾತ್ರ ಸಮಾಧಾನಕರವಾಗಿದೆಯೆಂದು ಶೇಕಡಾ ೬೨ ರಷ್ಟು ಪ್ರತಿಸ್ಪಂದಿಗಳ ಅಭಿಪ್ರಾಯವಾಗಿದೆ (ಕೋಷ್ಟಕ ೬.೨.೧ ರಿಂದ ೬.೨.೧೪ ರ ವರೆಗೆ)

ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯನ್ನು ಮಾಡುವದರ ಮೂಲಕ ಕೆ.ಎಲ್.ಇ.ಸಂಸ್ಥೆಯು ಬೆಳಗಾವಿ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ಕಾರಣವಾಗಿದೆ. ಅದೇ ರೀತಿ ಹೆಚ್ಚಿನ ಪ್ರತಿಸ್ಪಂದಿಗಳು ತಿಳಿಸಿದ ಪ್ರಕಾರ ಕೆ.ಎಲ್.ಇ.ಶಿಕ್ಷಣ ಸಂಸ್ಥೆಯು ಜನರಿಗೆ ಚಿರಪರಿಚಿತವಾಗಿದ್ದು ಸಮಾಜಮುಖಿಯಾಗಿದೆ ಮತ್ತು ತನ್ನ ಅತ್ಯುನ್ನತ ಮೂಲಭೂತ ಸೌಕರ್ಯಗಳ ಮೂಲಕ ಸರ್ಕಾರಿ ರಂಗಕ್ಕೆ ಶಿಕ್ಷಣ ಕ್ಷೇತ್ರದಲ್ಲಿ ಮಾದರಿಯಾಗಿದೆ.

೧೫. ಗರಿಷ್ಠ ಸಂಖ್ಯೆಯ (ಶೇಕಡಾ ೮೯) ಪ್ರತಿಸ್ಪಂದಿಗಳಿಗೆ ಗೋಕಾಕದ ಭಾವ ಸಂಗಮದ ಸಂಸ್ಥೆಯು ಚಿರಿಪರಿಚಿತವಾಗಿದೆ. ಅದು ನಡೆಸುವ ಕಾರ್ಯಕ್ರಮಗಳು ಅತ್ಯುತ್ತಮವಿದ್ದದ್ದು (ಶೇಕಡಾ ೭೯ ರಷ್ಟು), ಆ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಶೇಕಡಾ ೮೮ ರಷ್ಟು ಪ್ರತಿಸ್ಪಂದಿಗಳಿಂದ ಕಂಡು ಬಂದಿರುತ್ತದೆ. ಏಕೆಂದರೆ ಕಲೆ ಮತ್ತು ಸಾಹಿತ್ಯ ಕ್ಷೇತ್ರದ ಕಾರ್ಯಕ್ರಮಗಳನ್ನು ಸರ್ಕಾರದ ಸಂಸ್ಥೆಗಳು

ನಡೆಸುತ್ತಿಲ್ಲವೆಂಬುದು ಮುಖ್ಯ ಕಾರಣವಾಗಿದೆ. ಈ ಅಂತರವನ್ನು ಗೋಕಾಕದ ಭಾವಸಂಗಮವು ತನ್ನ ಸಾಹಿತ್ಯ ಕಾರ್ಯಕ್ರಮಗಳಿಂದ ತುಂಬಿದೆ. (ಕೋಷ್ಟಕ ೬.೩.೧ ರಿಂದ ೬.೩.೧೦ ರ ವರೆಗೆ).

೧೬. ಮಹಿಳಾ ಸಬಲೀಕರಣಕ್ಕಾಗಿ ಶ್ರಮಿಸುತ್ತಿರುವ ಮಹಿಳಾ ಸಮಾಖ್ಯಾ ಸರ್ಕಾರೇತರ ಸಂಸ್ಥೆಯು ಶೇಕಡಾ ೬೨ ರಷ್ಟು ಪ್ರತಿಸ್ಪಂದಿಗಳಿಗೆ ಪರಿಚಿತವಿದ್ದು, ಹೆಚ್ಚಿನ ಸಂಖ್ಯೆಯಲ್ಲಿ (ಶೇಕಡಾ ೭೪) ಅದರೊಂದಿಗೆ ಉತ್ತಮ ಮತ್ತು ಅತ್ಯುತ್ತಮವಾಗಿ ಸ್ಪಂದಿಸುತ್ತಿದ್ದಾರೆ. ಅದೇ ರೀತಿಯಾಗಿ ಶೇಕಡಾ ೬೭ ರಷ್ಟು ಪ್ರತಿಸ್ಪಂದಿಗಳು ವಿದ್ಯಾಭ್ಯಾಸ ಮತ್ತು ಅರಿವು ಹೆಚ್ಚಿಸುವಂತಹ ಕಾರ್ಯಯೋಜನೆಗಳಿಂದ ಪ್ರಯೋಜನ ಪಡೆದವರಾಗಿದ್ದಾರೆ. ಅಲ್ಲದೆ ಬಹಳಷ್ಟು (ಶೇಕಡಾ ೬೨) ಜನರು ಅದರ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರುವುದರಿಂದ ಅವರಲ್ಲಿ ಬದಲಾವಣೆ ಆಗಿದ್ದು ವಿಹಿತವಾಗುತ್ತದೆ ಮತ್ತು ಸಂಸ್ಥೆಯು ನೀಡುವ ಸೇವೆಯ ಗುಣಮಟ್ಟವು ಉತ್ತಮ-ಅತ್ಯುತ್ತಮವೆಂದು ಸಾಕಷ್ಟು ಪ್ರತಿಸ್ಪಂದಿಗಳ ಅಭಿಪ್ರಾಯ. ಅದರಿಂದಾಗಿ ಅವರು ಮೊದಲಿಗಿಂತ ಉತ್ತಮ ರೀತಿಯಲ್ಲಿ ನಿರ್ಣಯಗಳನ್ನು ತಕ್ಕೊಳ್ಳಲು ಸಮರ್ಥರಾಗಿದ್ದಾರೆಂದು ತಿಳಿದುಬರುತ್ತದೆ. ಪ್ರತಿಸ್ಪಂದಿಗಳು ತಮ್ಮ ಗ್ರಾಮದ ಅಭಿವೃದ್ಧಿಯಲ್ಲಿ ಮಹಿಳಾ ಸಮಾಖ್ಯಾ ಸಂಸ್ಥೆಯ ಪಾತ್ರ ಗುರುತರವಾಗಿದೆಯೆಂದು ಹೇಳಿ, ಅದರ ಕಾರ್ಯಗಳು ಸರ್ಕಾರದ ಸಂಸ್ಥೆಗಳಿಗೆ ಮಾದರಿಯಾಗಿವೆಯೆಂದು ಹೆಚ್ಚಿನ (ಶೇಕಡಾ ೬೨) ಸಂಖ್ಯೆಯ ಜನರ ಅಭಿಪ್ರಾಯವಾಗಿದೆ. ಅವರ ಕಲಿಕಾ ವಿಧಾನ, ಸ್ಪಂದಿಸುವಿಕೆ, ಮನವೋಲಿಸುವ ಸಾಮರ್ಥ್ಯ ಇತ್ಯಾದಿಗಳು ಮಾದರಿಯ ಸಕಾರಾತ್ಮಕ ಅಂಶಗಳೆಂದು ಅಭಿಪ್ರಾಯ ಹಂಚಿಕೊಂಡಿದ್ದಾರೆ (ಕೋಷ್ಟಕ ೬.೪.೧ ರಿಂದ ೬.೪.೧೦ ರ ವರೆಗೆ)

ಈ ಸರ್ಕಾರೇತರ ಸಂಸ್ಥೆಯು ತನ್ನ ಅರಿವು ಮಾಡಿಸುವ ಕಾರ್ಯಕ್ರಮಗಳಿಂದ ಹೆಚ್ಚಿನ ಜನಮನ್ನಣೆಯನ್ನು ಪಡೆದಿದೆ ಮಹಿಳಾ ಸಬಲೀಕರಣದ ಗುರಿ ಸಾಧಿಸಿದೆ.

೧೭. ಗ್ರಾಮೀಣಾಭಿವೃದ್ಧಿಯ ಬರ್ಡ್ಸ ಸಂಸ್ಥೆಯು ಹೆಚ್ಚಿನ ಪ್ರತಿಸ್ಪಂದಿಗಳಿಗೆ (ಶೇಕಡಾ ೬೮) ಪರಿಚಯವಿದ್ದು, ದಶಕದವರೆಗೆ ಅದರೊಂದಿಗೆ ನಿಕಟತೆ ಹೊಂದಿದ್ದಾರೆ. ಅದರಿಂದಾಗಿ ಶೇಕಡಾ ೮೫ ರಷ್ಟು ಪ್ರತಿಸ್ಪಂದಿಗಳು ಆರೋಗ್ಯ ಮತ್ತು ವಿದ್ಯಾಭ್ಯಾಸದ ಪ್ರಯೋಜನ ಪಡೆದದ್ದು ಕಂಡು ಬಂದಿದೆ. ಅದರ ಕಾರ್ಯನಿರ್ವಹಣೆ ಬಗ್ಗೆ ಹೆಚ್ಚಿನವರು (ಶೇಕಡಾ ೭೮) ಉತ್ತಮವಿದೆಯೆಂದು ಹೇಳುವರು ಸಮಗ್ರ ಗ್ರಾಮೀಣ ಅಭಿವೃದ್ಧಿಯಲ್ಲಿ ಸಂಸ್ಥೆಯು ಭಾಗಿಯಾಗುತ್ತದೆಯೆಂದು ಅವರ ಅಭಿಪ್ರಾಯ (ಕೋಷ್ಟಕ ೬.೫.೧ ರಿಂದ ೬.೫.೭) ದಿಂದ ತಿಳಿಯುವುದು.

ಹೀಗೆ ಶಿಕ್ಷಣ, ಗ್ರಾಮೀಣ ಅಭಿವೃದ್ಧಿ, ಮಹಿಳಾ ಸಬಲೀಕರಣ, ಕಲೆ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿಯೂ ಆಯ್ದ ಸರ್ಕಾರೇತರ ಸಂಸ್ಥೆಗಳು ಜನಮುಖಿಯಾಗಿದ್ದು ಜನರ ಒಲವನ್ನು ಗಳಿಸಿ ಜನಸೇವೆಯನ್ನು ಮಾಡುವದರ ಮೂಲಕ ಸರ್ಕಾರಿ ರಂಗಕ್ಕೆ ಮಾದರಿಯಾಗಿವೆ. ಶಿಕ್ಷಣದಲ್ಲಿ

ಕೆ.ಎಲ್.ಇ ಸಂಸ್ಥೆಯ ಹೆಸರು ಕೇಳದವರೇ ಇಲ್ಲ. ಅದೇ ರೀತಿ ಗ್ರಾಮೀಣ ಅಭಿವೃದ್ಧಿಯಲ್ಲಿ ಬರ್ಡ್ಸ್ ಸಂಸ್ಥೆ ನೀಡಿದ ಕೊಡುಗೆ ಅನನ್ಯ. ಮಹಿಳಾ ಸಮಾಖ್ಯಾ ಸಂಸ್ಥೆಯು ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಗೆ ಕೈಗೊಂಡಿರುವ ಕಾರ್ಯಗಳು ಸ್ತುತ್ಯರ್ಹ. ಅದೇ ರೀತಿ ಗ್ರಾಮೀಣ ಜನರಲ್ಲಿ ಕಲೆ ಮತ್ತು ಸಾಹಿತ್ಯದ ಅಭಿರುಚಿಯನ್ನು ಬೆಳೆಸಿ ಪೋಷಿಸುವಲ್ಲಿ ಭಾವ ಸಂಗಮದ ಪಾತ್ರವು ಮಹತ್ತರವಾದದುದು.

ಹೀಗೆ ಪ್ರಸ್ತುತ ಅಧ್ಯಯನದಿಂದ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು, ಹೆಚ್ಚು ಜನಮುಖಿಯಾದುದು ಸ್ಪಷ್ಟವಾಗುತ್ತದೆ.

**೭.೩ ಅಧ್ಯಯನದ ಊಹೆಗಳ ಸತ್ಯಾಸತ್ಯತೆಯ ಪರಿಶೀಲನೆ:**

ಪ್ರಸ್ತುತ ಅಧ್ಯಯನವು ಬೆಳಗಾವಿ ಜಿಲ್ಲೆಯಲ್ಲಿನ ಆಯ್ದ ೫ ಕ್ಷೇತ್ರಗಳಲ್ಲಿ ಪ್ರಸಿದ್ಧಿಯನ್ನು ಹೊಂದಿರುವಂತಹ ಸರ್ಕಾರೇತರ ಸಂಸ್ಥೆಗಳ ಬಗೆಗಿನ ಅಧ್ಯಯನವಾಗಿದೆ. ಅಧ್ಯಯನವು ಪ್ರತಿ ಸರ್ಕಾರೇತರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ನೂರು ಪ್ರತಿಸ್ಪಂದಿಗಳ ಮಾಹಿತಿಯನ್ನು ಸಂಗ್ರಹಿಸಿ ಒಟ್ಟು ೫೦೦ ಪ್ರತಿಸ್ಪಂದಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರತಿಸ್ಪಂದಿಗಳ ಆಯ್ಕೆಯ ಸಮಯದಲ್ಲಿ ರ್‍ಯಾಂಡಮ್ ಸ್ಯಾಂಪ್ಲಿಂಗ್ ಮೆಥಡ್ ಅನ್ನು ಉಪಯೋಗಿಲಾಗಿದ್ದು, ಮಾಹಿತಿಗಳನ್ನು ಪ್ರಶ್ನಾವಳಿಗಳ ಮೂಲಕ ಸಂಗ್ರಹಿಸಲಾಗಿದೆ. ಮಾಹಿತಿ ಸಂಗ್ರಹಣಾ ಕಾಲದಲ್ಲಿ ಗೌಪ್ಯತೆ ಮತ್ತು ಮಾಹಿತಿಯ ನಿಖರತೆಗೆ ಆದ್ಯತೆಯನ್ನು ಕೊಡಲಾಗಿದೆ. ಪ್ರಶ್ನಾವಳಿಯಲ್ಲಿ ೫ ಭಾಗಗಳನ್ನು ಮಾಡಲಾಗಿದ್ದು, ಮೊದಲನೆ ಭಾಗವು ಪ್ರತಿಸ್ಪಂದಿಗಳ ವೈಯಕ್ತಿಕ ಮಾಹಿತಿಯನ್ನು ಪಡೆಯುವ ಪ್ರಯತ್ನವಾಗಿದ್ದರೆ, ಎರಡನೆ ಭಾಗವು ಪ್ರತಿಸ್ಪಂದಿದಾರರ ಜೀವನ ನಿರ್ವಹಣೆಯ ಬಗ್ಗೆ ಅಂದರೆ ವಾಸಸ್ಥಳ, ಆರೋಗ್ಯ ಮತ್ತು ವಿದ್ಯಾಭ್ಯಾಸದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮೂರನೆ ಭಾಗದಲ್ಲಿ ಸರ್ಕಾರೇತರ ಸಂಸ್ಥೆಗಳ ಕೆಲಸಗಳ ಬಗ್ಗೆ ಮತ್ತು ಪ್ರತಿಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರೇತರ ಸಂಸ್ಥೆಗಳ ಬಗೆಗೆ ವಿವರವಾದ ಮಾಹಿತಿಯನ್ನು ಪ್ರಶ್ನಾವಳಿಗಳ ಮೂಲಕ ಸಂಗ್ರಹಿಸಿ ದತ್ತಾಂಶಗಳನ್ನು ಪಡೆಯಲಾಗಿದೆ. ಆ ಮೂಲಕ ಅಧ್ಯಯನದ ಊಹೆಗಳ ಸತ್ಯಾಸತ್ಯತೆ ಪರಿಶೀಲನೆ ಮಾಡುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ಪೂರ್ವದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಬಗೆಗೆ ಎರಡು ಊಹೆಗಳನ್ನು ಮಾಡಲಾಗಿದೆ.

೧) ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜನಮುಖಿಯಾಗಿವೆ.

೨) ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜಿಲ್ಲೆಯ ಅಭಿವೃದ್ಧಿಯಲ್ಲಿ ಪಾತ್ರವನ್ನು ಹೊಂದಿದ್ದು ಸರ್ಕಾರಿ ಸಂಸ್ಥೆಗಳಿಗೆ ಮಾದರಿಯಾಗಿದೆ.

ಅಧ್ಯಯನದ ಅವಧಿಯಲ್ಲಿ ಅಧ್ಯಯನಕಾರರು ಪ್ರತಿಸ್ಪಂದಿಗಳಿಂದ ಮಾಹಿತಿಗಳನ್ನು ಸಂಗ್ರಹಿಸಿದ ಪ್ರಯುಕ್ತ ಮೇಲಿನ ಎರಡೂ ಊಹೆಗಳು ನಿಜವೆಂದು ಸಾಬೀತಾಗಿದೆ.

**ಊಹೆ ೧ :**

ಅಧ್ಯಯನದ ಕಾಲದಲ್ಲಿ ಪ್ರತಿಸ್ಪಂದಿಗಳು ಸರ್ಕಾರೇತರ ಸಂಸ್ಥೆಗಳು ಜನಮುಖಿಯಾಗಿದ್ದು ಜನರ ಸಮಸ್ಯೆಗಳಿಗೆ ಸ್ಪಂದಿಸುತ್ತಿವೆ ಎಂದು ಕಂಡುಕೊಳ್ಳಲಾಗಿದೆ. ಕೋಷ್ಟಕ ಸಂಖ್ಯೆ ೫.೧೮ ಮತ್ತು ೫.೧೯ ಗಳನ್ನು ಗಮನಿಸಿದಾಗ ಈ ಅಂಶವು ಸ್ಪಷ್ಟವಾಗುತ್ತದೆ. ಶೇ. ೯೬.೦೪ ಪ್ರತಿಸ್ಪಂದಿಗಳ ಅಭಿಪ್ರಾಯದಲ್ಲಿ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜನರೊಂದಿಗೆ ಬೆರೆತು ಸ್ನೇಹಪರ ಮನೊಧರ್ಮವನ್ನು ಹೊಂದಿದೆ. ಮತ್ತು ಜನರ ಬೇಕು ಬೇಡಗಳನ್ನು ಪೂರೈಸುವತ್ತ ಅಗತ್ಯ ಯೋಜನೆಗಳನ್ನು ಹಾಕಿಕೊಂಡು ಜನಮುಖಿಯಾಗಿದೆ. ಅಧ್ಯಯನಕ್ಕೊಳಪಡಿಸಿದಿಶ ಸರ್ಕಾರೇತರ ಸಂಸ್ಥೆಗಳು ಜನರಿಗೆ ಪರಿಚಿತವಾಗಿದ್ದು ಜನರ ಕಷ್ಟಗಳನ್ನು ಪರಿಹರಿಸುವತ್ತ ಆಶಾಕಿರಣವಾಗಿದೆ. ಆದುದರಿಂದ ಅಧ್ಯಯನದ ಮೊದಲನೆ ಊಹೆಯು ಸತ್ಯವೆಂದು ಸಾಬೀತಾಗಿದೆ.

**ಊಹೆ ೨ :**

ಅಧ್ಯಯನದ ಎರಡನೇ ಪ್ರಮುಖ ವಿಷಯ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಜಿಲ್ಲೆಯ ಅಭಿವೃದ್ಧಿಯಲ್ಲಿ ಪಾತ್ರವನ್ನು ಹೊಂದಿದೆ ಮತ್ತು ಸರ್ಕಾರಿ ರಂಗಕ್ಕೆ ಮಾದರಿಯಾಗಿದೆ.

ಅಧ್ಯಯನದ ಕಾಲದಲ್ಲಿ ಪ್ರಾಥಮಿಕ ಮಾಹಿತಿಗಳಿಂದ ಕಂಡುಕೊಂಡ ಫಲಿತಗಳ ಆಧಾರದ ಮೇಲಿಂದ ಕೋಷ್ಟಕ ಸಂಖ್ಯೆ ೬.೧.೧ ರಿಂದ ೬..೧.೧೬ ರ ವರೆಗೆ, ೬.೨.೧ ರಿಂದ ೬.೨.೧೪ ರ ವರೆಗೆ, ೬.೩.೧ ರಿಂದ ೬.೩.೧೦ ರ ವರೆಗೆ, ೬.೪.೧ ರಿಂದ ೬.೪.೧೦ ರ ವರೆಗೆ, ೬.೫.೧ ರಿಂದ ೬.೫.೭ ರ ವರೆಗಿನ ಪ್ರಾಥಮಿಕ ಮಾಹಿತಿಗಳ ಆಧಾರದ ಮೇಲಿಂದ ಸರ್ಕಾರೇತರ ಸಂಸ್ಥೆಗಳು ಬೆಳಗಾವಿ ಜಿಲ್ಲೆಯ ಆರೋಗ್ಯ, ಶಿಕ್ಷಣ, ಕಲೆ ಮತ್ತು ಸಾಹಿತ್ಯ, ಮಹಿಳಾ ಸಬಲೀಕರಣ ಮತ್ತು ಗ್ರಾಮೀಣಾಭಿವೃದ್ಧಿ ಕ್ಷೇತ್ರಗಳಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ಕಾರಣಿಬೂತವಾಗಿದೆ. ಮತ್ತು ಎಲ್ಲಾ ರಂಗಗಳಲ್ಲಿಯೂ ಸರ್ಕಾರಿ ಸಂಸ್ಥೆಗಳಿಗೆ ಮಾದರಿಯಾಗಿದೆ. ಆದುದರಿಂದ ಅಧ್ಯಯನ ಪೂರ್ವದಲ್ಲಿ ಮಾಡಿದ ಎರಡೂ ಊಹೆಗಳು ಅಧ್ಯಯನ ಕಾಲದಲ್ಲಿ ಸಂಗ್ರಹಿಸಲಾದ ಪ್ರಾಥಮಿಕ ಮಾಹಿತಿಗಳ ಆಧಾರದಿಂದ ನಿಜವೆಂದು ಧೃಡಪಟ್ಟಿದೆ.

**೭.೪ 'ಸರ್ಕಾರೇತರ ಸಂಸ್ಥೆ'ಗಳು ಎದುರಿಸುತ್ತಿರುವ ಸವಾಲುಗಳು :**

ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗಳು ಹಲವಾರು ಒತ್ತಡ ಮತ್ತು ಸವಾಲುಗಳ ಮಧ್ಯೆ ಕಾರ್ಯಗೈಯುತ್ತಿವೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ.

೧. ಹಣಕಾಸಿನ ಕೊರತೆ

೨. ದಕ್ಷ ಉದ್ಯೋಗಿಗಳ ಕೊರತೆ ಮತ್ತು ಉದ್ಯೋಗಿಗಳೊಂದಿಗಿನ ಹೆಚ್ಚುತ್ತಿರುವ ಘರ್ಷಣೆ

೩. ಮೂಲಭೂತ ಸೌಕರ್ಯಗಳ ಕೊರತೆ

೪. ಸರ್ಕಾರದ ಅನುಚಿತ ಹಸ್ತಕ್ಷೇಪ ಮತ್ತು ನಿಯಂತ್ರಣ ನಿಯಮಗಳು

೫. ನಿಧಿ ನೀಡುವಿಕೆಯಲ್ಲಿ ದೀರ್ಘ ಪ್ರಕ್ರಿಯೆಗಳು

೬. ಕಡಿಮೆಮಟ್ಟದ ಸಹಕಾರ

೭. ಉದ್ಯೋಗಿಗಳಿಗೆ ತರಬೇತಿ ಕೊರತೆ ಮತ್ತು ಉದ್ಯೋಗ ಭದ್ರತೆಯ ಅಪಾಯದಿಂದಾಗಿ ವೃತ್ತಿಪರತೆ ಹೆಚ್ಚಾಗದಿರುವಿಕೆ

೮. ಮಾಹಿತಿಯ ಅಲಭ್ಯತೆ ಮತ್ತು ಅಸಮರ್ಪಕ ಸಂಶೋಧನೆ

೯. ಧಾರ್ಮಿಕ ಸಂಕುಚಿತತೆ ಮತ್ತು ಸಾಮಾಜಿಕ ಭಯ

೧೦. ರಾಜಕೀಯ ಒತ್ತಡ ಮತ್ತು ಅಭದ್ರತೆ

೧೧. ಅಪಾರವಾದ ತೆರಿಗೆ

೧೨. ನೈಸರ್ಗಿಕ ವಿಕೋಪಗಳು

**೭.೫ ಸಲಹೆಗಳು :**

ಬೆಳಗಾವಿ ಜಿಲ್ಲೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಸುಧಾರಣೆಗಾಗಿ ಈ ಕೆಳಗಿನ ಸಲಹೆಗಳನ್ನು ಮಾಡಲಾಗಿದೆ. ಅವುಗಳನ್ನು ಕಾರ್ಯರೂಪಕ್ಕೆ ತಂದದ್ದಾದರೆ, ಈ ಸಂಸ್ಥೆಗಳು ಇನ್ನೂ ಪರಿಣಾಮಕಾರಿಯಾಗಿ, ಬಲಿಷ್ಠವಾಗಿ ಮತ್ತು ಪ್ರಯೋಜನಕಾರಿಯಾಗಿ ಕಾರ್ಯನಿರ್ವಹಿಸಬಹುದು.

೧. ಬೆಳಗಾವಿ ಜಿಲ್ಲೆಯಲ್ಲಿ 'ಸರ್ಕಾರೇತರ ಸಂಸ್ಥೆ'ಗಳ ಕ್ಷೇತ್ರದ ಪರಿವೀಕ್ಷಣೆಗಾಗಿ 'ಸರ್ಕಾರೇತರ ಸಂಸ್ಥೆ'ಗಳ ನಿರ್ದೇಶನಾಲಯವನ್ನು ಸ್ಥಾಪಿಸಬೇಕು. ಇದೇ ನಿರ್ದೇಶನಾಯಲದ ಅಡಿಯಲ್ಲಿ ನೋಂದಾವಣಿ, ಪರಿವೀಕ್ಷಣೆ, ನಿಯಂತ್ರಣ ಮತ್ತು ಸಂಬಂಧಿತ ಎಲ್ಲ ಕಾರ್ಯಗಳನ್ನು ನಿರ್ವಹಿಸುವಂತಾಗಬೇಕು. 'ಸರ್ಕಾರೇತರ ಸಂಸ್ಥೆ'ಗಳ ಸ್ಥಾಪನೆಗಾಗಿ ಪ್ರತ್ಯೇಕ ಸೂಕ್ತ ಕಾನೂನು ಇರಬೇಕು. ಅದು ಜಾರಿಯಾಗಬೇಕು.

೨. ಸರ್ಕಾರೇತರ ಸಂಸ್ಥೆಗಳ ನಿಯಂತ್ರಣದ ಸಲುವಾಗಿ ನಿಯೋಜಿತ ನಿರ್ದೇಶನಾಯಲದ ಮೂಲಕ ಪ್ರತ್ಯೇಕ, ಸಾಮಾಜಿಕ ಲೆಕ್ಕ ಪರಿಶೋಧನಾ ಕಾರ್ಯವನ್ನು ಕಾರ್ಯರೂಪಕ್ಕೆ

